# ಕೊಡಗಿನ ಅವಿಭಕ್ತ ಕುಟುಂಬ ಪದ್ಧತಿ: ನಾಡು ನುಡಿಯ ಸಂಬಂಧಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು
ಎನ್.ಎಂ. ಪೂವಯ್ಯ

ಮಾರ್ಗದರ್ಶಕರು
ಡಾ. ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು
ಚರಿತ್ರೆ ವಿಭಾಗ





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬

# ಕೊಡಗಿನ ಅವಿಭಕ್ತ ಕುಟುಂಬ ಪದ್ಧತಿ: ನಾಡು ನುಡಿಯ ಸಂಬಂಧಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
**ಎನ್.ಎಂ. ಪೂವಯ್ಯ**

ಮಾರ್ಗದರ್ಶಕರು
**ಡಾ. ವಿಜಯ್ ಪೂಣಚ್ಚ ತಂಬಂಡ**
ಪ್ರಾಧ್ಯಾಪಕರು
ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ದೃಢೀಕರಣ ಪತ್ರ

**ಎನ್.ಎಂ. ಪೂವಯ್ಯ** ಅವರು **ಕೊಡಗಿನ ಅವಿಭಕ್ತ ಕುಟುಂಬ ಪದ್ಧತಿ: ನಾಡು ನುಡಿಯ ಸಂಬಂಧಗಳು** ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 30.4.2016
ಸ್ಥಳ : ವಿದ್ಯಾರಣ್ಯ

**ಡಾ. ವಿಜಯ್ ಪೂಣಚ್ಚ ತಂಬಂಡ**
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಪ್ರಮಾಣ ಪತ್ರ

**ಕೊಡಗಿನ ಅವಿಭಕ್ತ ಕುಟುಂಬ ಪದ್ಧತಿ: ನಾಡು ನುಡಿಯ ಸಂಬಂಧಗಳು** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸಲು **ಡಾ. ವಿಜಯ್ ಪೂಣಚ್ಚ ತಂಬಂಡ,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ** : 30/4/2016
**ಸ್ಥಳ** : **ವಿದ್ಯಾರಣ್ಯ**

**ಎನ್.ಎಂ. ಪೂವಯ್ಯ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಪರಿವಿಡಿ

ಅಧ್ಯಾಯ : ಒಂದು

# ಪ್ರಸ್ತಾವನೆ

**ಕೊ**ಡಗಿನ ಸಂದರ್ಭದಲ್ಲಿ ನಾಡುನುಡಿಯ ಸಂಬಂಧಗಳು ಎಂದರೆ ಸಾಂಪ್ರದಾಯಿಕವಾಗಿ ಚರಿತ್ರೆಕಾರರು ವಸಾಹತು ಪೂರ್ವಕಾಲದ ರಾಜಕೀಯ ಚರಿತ್ರೆಯನ್ನು ವಿಮರ್ಶಿಸುವ ಸಂದರ್ಭದಲ್ಲಿ ಕಂಡುಕೊಂಡ 'ನಾಡು' ಕೇಂದ್ರಿತ ಅಧ್ಯಯನದಿಂದ ಸ್ಫೂರ್ತಿಗೊಂಡ ಅಧ್ಯಯನವಾಗಿದೆ. ಆಧುನಿಕ ಕರ್ನಾಟಕದ ಸಾಂಸ್ಕೃತಿಕ ಅನನ್ಯತೆಗೆ ಸಂಬಂಧಪಟ್ಟ ಚರ್ಚೆಗಳಲ್ಲಿ ಕಂಡುಬರುವ 'ನಾಡು–ನುಡಿ'ಯ ಪ್ರಶ್ನೆಗಳಿಗಿಂತ ಪ್ರಸ್ತುತ ಮಹಾಪ್ರಬಂಧ ಚರ್ಚಿಸುವ ನಾಡು–ನುಡಿಯ ಸಂಬಂಧಗಳು ಭಿನ್ನವಾಗಿದೆ. ವಸಾಹತುಪೂರ್ವ ಕಾಲದಲ್ಲಿ ರಚನೆಗೊಂಡ, ಬೆಳವಣಿಗೆಯಾದ ನಾಡುಗಳ ರಚನೆಯ ಪ್ರಕ್ರಿಯೆಯನ್ನು ಪ್ರಸ್ತುತ ಅಧ್ಯಯನವು ವಿಮರ್ಶೆಗೆ ಒಳಪಡಿಸಲು ಉದ್ದೇಶಿಸಿದೆ. ಇದರೊಂದಿಗೆ ನಾಡುವಿನ ಬೆಳವಣಿಗೆಗೆ ಪೂರಕವಾಗಿದ್ದ ನುಡಿಯ ಪ್ರಧಾನ ಪಾತ್ರವನ್ನು ಅಭ್ಯಸಿಸುವ ಪ್ರಯತ್ನವನ್ನು ಪ್ರಸ್ತುತ ಮಹಾಪ್ರಬಂಧವು ಹೊಂದಿದೆ. ಕೊಡಗಿನ ಸಂದರ್ಭದಲ್ಲಿ ಕೊಡಗು ಭಾಷೆ ಈ ನಿಟ್ಟಿನಲ್ಲಿ ಬಹಳ ಪ್ರಧಾನ ಪಾತ್ರವನ್ನು ವಹಿಸಿದ್ದರೂ ಕೊಡಗಿನೊಳಗೆ ಪ್ರಭಾವಶಾಲಿಯಾಗಿದ್ದ ಕನ್ನಡ, ಅರೆಗನ್ನಡ, ಎರವ, ಕುಡಿಯ ಮುಂತಾದ ಸ್ಥಳೀಯ ಭಾಷೆಗಳನ್ನು ಗಣನೆಗೆ ತೆಗೆದುಕೊಂಡೇ ಈ ಮಹಾಪ್ರಬಂಧವನ್ನು ರೂಪಿಸಲು ಪ್ರಯತ್ನಿಸಲಾಗಿದೆ.

ವಸಾಹತುಪೂರ್ವ ಕೊಡಗಿನ ಸಮುದಾಯಗಳು ಮೂಲತಃ ಗ್ರಾಮೀಣ ಮೂಲವನ್ನು ಅರ್ಥಾತ್ 'ನಾಡು'ಗಳ ಮೂಲವನ್ನು ಹೊಂದಿರುವುದು ಕಂಡುಬರುತ್ತದೆ. ಕೊಡಗಿನಲ್ಲಿ ಮುಖ್ಯವಾಗಿ ಕಾಣಸಿಗುವ ಕೃಷಿಕೇಂದ್ರಿತ ಸಮುದಾಯಗಳು ಭೂಮಿಯ ಮೇಲೆ ಹಿಡಿತವನ್ನಿಟ್ಟುಕೊಂಡಿದ್ದು ಕಂಡುಬರುತ್ತದೆ.[೧] ಇವುಗಳಲ್ಲಿ ಮುಖ್ಯವಾಗಿ ಕೊಡಗು ಭಾಷಿಕ ಸಮುದಾಯಗಳು ಪ್ರಬಲವಾಗಿದ್ದುದನ್ನು ಕಾಣಬಹುದಾಗಿದೆ. ಕುಶಲಕರ್ಮಿ ಸಮುದಾಯಗಳು ಗ್ರಾಮ–ನಾಡುಗಳು ಸ್ವಾವಲಂಬಿಯಾಗಿ ರೂಪುಗೊಳ್ಳಲು ಕಾರಣವಾದವು.[೨] ಕುಶಲಕರ್ಮಿ ಸಮುದಾಯಗಳಿಗೆ ಕುಶಲಕರ್ಮಿ ಕೆಲಸಗಳು ಹೇಗೆ ಪ್ರಧಾನವಾಗಿತ್ತೋ ಹಾಗೆಯೇ ಅವರಿಗೆ ಕೃಷಿ ಉಳುಮೆ ಮಾಡುವುದು ಕೂಡ ಮುಖ್ಯವಾದಂತಹ ವೃತ್ತಿಯಾಗಿತ್ತು. ಈ ಮೇಲೆ ಹೇಳಿದ ಎರಡು ಭಿನ್ನ ಬಗೆಯ ಕೃಷಿ ಕೇಂದ್ರಿತ ಸಮುದಾಯಗಳ ಭೂಮಿ, ಆಸ್ತಿ ಇತ್ಯಾದಿಗಳನ್ನು ಉಳುಮೆ ಮಾಡುವುದರಲ್ಲಿ ಪ್ರಧಾನ ಪಾತ್ರವಹಿಸಿದ್ದ ಕೃಷಿ ಕಾರ್ಮಿಕ ಸಮುದಾಯಗಳ ಪಾತ್ರಗಳು ಅಷ್ಟೇ ಮುಖ್ಯವಾಗಿವೆ.[೩] ಪ್ರಸ್ತುತ ಮಹಾಪ್ರಬಂಧವನ್ನು

ಅರ್ಥೈಸಲು ರೂಪಿಸಿಕೊಂಡ ಈ ಮೂರು ಬಗೆಯ ವಿಂಗಡಣೆಗಳನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಇಟ್ಟುಕೊಂಡಿದೆ. ಈ ಹಿನ್ನೆಲೆಯಲ್ಲಿ ಕೊಡಗು ಭಾಷೆಯನ್ನು ನಾಡಿನ ಭಾಷೆಯಾಗಿ ಮಾತನಾಡುತ್ತಿದ್ದ ಈ ಮೂರು ವರ್ಗಗಳ ಸಮುದಾಯಗಳು ಒಟ್ಟಿಗೆ ಸೇರಿ ನಾಡನ್ನು ರೂಪಿಸಿದ ವಿವಿಧ ಬಗೆಗಳನ್ನು ಅಭ್ಯಸಿಸಲು ಯತ್ನಿಸಲಾಗುವುದು. ಇವುಗಳಿಗೆಲ್ಲ ಇದ್ದ ಮೂಲಧಾತುವನ್ನು 'ಒಕ್ಕ'[9] ಎಂದು ಕರೆಯಬಹುದು. 'ಒಕ್ಕ' ಎಂದರೆ ವಿಶಾಲಾರ್ಥದಲ್ಲಿ ಕೂಡುಕುಟುಂಬ ಅಥವಾ ಅವಿಭಕ್ತ ಕುಟುಂಬ ಎಂದು ಗುರುತಿಸಿದ್ದನ್ನು ಪ್ರಸ್ತುತ ಅಧ್ಯಯನವು ಅಭ್ಯಸಿಸಲು ಯತ್ನಿಸುತ್ತದೆ. ಅಂದರೆ "ಒಕ್ಕಗಳು" ಅರ್ಥಾತ್ ಅವಿಭಕ್ತ ಕುಟುಂಬಗಳು ನಾಡೊಂದನ್ನು ಹೇಗೆ ರೂಪಿಸಿದವು ಎನ್ನುವುದನ್ನು ಪ್ರಸ್ತುತ ಮಹಾಪ್ರಬಂಧವು ಚರ್ಚಿಸಲು ಉದ್ದೇಶಿಸಿದೆ.

ಭೂಮಾಲೀಕ ಸಮುದಾಯಗಳಿಗೆ, ಕುಶಲಕರ್ಮಿ ಸಮುದಾಯಗಳಿಗೆ, ದುಡಿಯುವ ವರ್ಗದ ಸಮುದಾಯಗಳಿಗೆ ಸಮಾನವಾದ ಅಂಶಗಳು "ಒಕ್ಕಗಳಾದರೂ" ಅವುಗಳನ್ನು ವಸಾಹತು ಪೂರ್ವದಲ್ಲಿ ಪ್ರಬಲವಾಗಿದ್ದ ಲಿಂಗಾಯಿತ ಹಾಲೇರಿ ಅರಸರು ತಮ್ಮ ಸಂಸ್ಥಾನ/ ರಾಜ್ಯ ಸ್ಥಾಪನೆಗೆ ಬಳಸಿಕೊಂಡ ಬೆಳವಣಿಗೆಗಳನ್ನು ಇಲ್ಲಿ ಅಭ್ಯಸಿಸಲು ಯತ್ನಿಸಲಾಗಿದೆ. ಒಂದೇ ಭಾಷೆಯನ್ನು ಮಾತನಾಡುವ ಒಕ್ಕಗಳು ನಾಡೊಂದನ್ನು ರೂಪಿಸುವ ಸಂದರ್ಭದಲ್ಲಿ ಪರಸ್ಪರ ಪೂರಕವಾಗಿ ಬದುಕಿದ್ದನ್ನು ನೋಡಬಹುದು. ಅನೇಕ ಕಡೆ ಅಂತಹ ಸಂಬಂಧಗಳು ಶೋಷಣಾತ್ಮಕವಾಗಿದ್ದರೂ ವಸಾಹತುಪೂರ್ವ "ರಾಜ್ಯ ವ್ಯವಸ್ಥೆ"ಯನ್ನು ಈಗ ಚಲಾವಣೆಯಲ್ಲಿರುವ ಪಠ್ಯಗಳಿಗಿಂತ ಭಿನ್ನವಾಗಿ ನೋಡುವ ಇರಾದೆಯನ್ನು ಪ್ರಸ್ತುತ ಮಹಾಪ್ರಬಂಧವು ಇಟ್ಟುಕೊಂಡಿದೆ. ಇಂತಹ ನಾಡುಗಳಲ್ಲಿ ಗ್ರಾಮೀಣ ಬದುಕು, ಜೀವನ ಪದ್ಧತಿ, ಆರ್ಥಿಕತೆಗಳು ಬಹುತೇಕವಾಗಿ ಸ್ವಾವಲಂಬಿಯಾಗಿದ್ದುದನ್ನು ಈ ಸಂದರ್ಭದಲ್ಲಿ ಗುರುತಿಸಬಹುದಾಗಿದೆ. ಲಿಂಗಾಯಿತ ಅರಸರಿಗೆ ಭೂಮಿ ಮೂಲಕ ಬರುವಂತಹ ತೆರಿಗೆ ಮುಖ್ಯವಾಗಿತ್ತೇ ವಿನಹ ಆಧುನಿಕ ರಾಜ್ಯಗಳು ಭಾವಿಸುವ "ಪ್ರಜಾಪರ ಸುಧಾರಣೆಗಳನ್ನು ಮಾಡುವ" ಜವಾಬ್ದಾರಿಗಳಿರಲಿಲ್ಲ. ಆ ಕಾಲದಲ್ಲಿದ್ದ ಭಾರತದಲ್ಲಿನ ಬಹುತೇಕ ಸಂಸ್ಥಾನಗಳ ರೀತಿಯಲ್ಲಿಯೇ ಕೊಡಗು/ಹಾಲೇರಿ ಸಂಸ್ಥಾನವು ಕಾರ್ಯನಿರ್ವಹಿಸುತ್ತಿತ್ತು.

ನಾಡುಗಳಲ್ಲಿನ ಸಮುದಾಯಗಳ ದಿನನಿತ್ಯದ ಜೀವನದ ಸಮಸ್ಯೆಗಳು, ಕೌಟುಂಬಿಕ ಸಮಸ್ಯೆಗಳನ್ನು ಒಕ್ಕದೊಳಗೆ ಪರಿಹರಿಸಲಾಗುತ್ತಿತ್ತು. ಒಕ್ಕ ಒಕ್ಕದೊಳಗಿನ ಸಮಸ್ಯೆಗಳನ್ನು ಆಯಾಯ ಸಮುದಾಯಗಳು ನಿರ್ವಹಿಸುತ್ತಿತ್ತು. ಸಮುದಾಯ-ಸಮುದಾಯಗಳ ನಡುವಿನ ವ್ಯಾಜ್ಯ ತಕರಾರುಗಳನ್ನು ಪಂಚಾಯಿತಿಯು ನಿರ್ವಹಿಸುತ್ತಿತ್ತು. ಅನಿವಾರ್ಯ ಸಂದರ್ಭದಲ್ಲಿ ಮಾತ್ರ ಅದು ಅರಸನ ವ್ಯಾಪ್ತಿಗೆ ಒಳಪಡುತ್ತಿತ್ತು. ಅಂದರೆ ಒಂದು ರೀತಿಯಲ್ಲಿ ಈ ಬಗೆಯ ನಾಡುಗಳು ಅರಸನ ಕಾಲದಲ್ಲಿ ಸ್ವಾವಲಂಬಿಗಳಾಗಿ, ಶಕ್ತಿಶಾಲಿಗಳಾಗಿಯೇ ಇದ್ದವು. ಆದರೆ ತಾಂತ್ರಿಕವಾಗಿ ಅರಸನ ಅಧಿಕಾರದ ವ್ಯಾಪ್ತಿಯೊಳಗೆ ಇದ್ದವು. ಏಕೆಂದರೆ ಒಕ್ಕಗಳ ಸದಸ್ಯರು ತಾಂತ್ರಿಕವಾಗಿಯೇ

ಅರಸನಿಗೆ ಅಥವಾ ಆ ಕಾಲದ ರಾಜ್ಯವ್ಯವಸ್ಥೆಗೆ “ಅರಮನೆ ಚಾಕ್ರಿ”[೫] ಮಾಡುವುದು ಮುಖ್ಯವಾದ ಕರ್ತವ್ಯವಾಗಿತ್ತು.

ಲಿಂಗಾಯಿತ ಅರಸರು ಪ್ರವರ್ಧಮಾನಕ್ಕೆ ಬರುವ ಮೊದಲು ಕೊಡಗಿನಲ್ಲಿ ಹತ್ತಾರು ನಾಯಕರು ಅನೇಕ ನಾಡುಗಳಿಗೆ ಸರದಾರರಾಗಿದ್ದರು. ಈ ಎಲ್ಲ ನಾಡುಗಳು ಸ್ವಾಯತ್ತ ಅಧಿಕಾರವನ್ನು ಹೊಂದಿದ್ದವು. ಪರಸ್ಪರ ಮೇಲುಗಾರಿಕೆ, ಕಚ್ಚಾಟಗಳಲ್ಲಿ ನೂರಾರು ವರ್ಷ ನಿರತರಾಗಿದ್ದ ಕೊಡಗಿನ ನಾಯಕರನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿದ್ದೇ ಲಿಂಗಾಯಿತ ಅರಸರು. ಅಂದರೆ ಆ ಕಾಲಕ್ಕೆ ರೂಪುಗೊಂಡಿದ್ದ ನಾಡುಗಳೆಲ್ಲವು ಐಕ್ಯಗೊಂಡು ಅರಸನ ಸಂಸ್ಥಾನವಾದವು.

ನಾಡು ಎಂದರೆ ಕೊಡಗಿನ ಸಂದರ್ಭದಲ್ಲಿ ರಾಜ್ಯವ್ಯವಸ್ಥೆ. ನುಡಿ ಎಂದರೆ ಅಲ್ಲಿನ ಜನರಾಡುವ ಭಾಷೆ. ಕೊಡಗಿನಲ್ಲಿ ನಾಡು ರೂಪುಗೊಳ್ಳಬೇಕಾದರೆ ನೂರಾರು ಒಕ್ಕಗಳು ಸೇರಿಕೊಳ್ಳಬೇಕಾಗುತ್ತದೆ. ಅನೇಕ ಒಕ್ಕಗಳು ಸೇರಿ, ಅನೇಕ ಸಮುದಾಯಗಳು ಸೇರಿ ಒಂದು ಸ್ವಾಯತ್ತೆ ಸಮಾಜವೊಂದು ಕೊಡಗಿನ ಭೌಗೋಳಿಕ ಮಿತಿಯೊಳಗೆ ಶತಮಾನಗಳಿಂದ ರೂಪುಗೊಂಡಿದೆ. ಇದನ್ನೇ ನಾಡು ಎಂದು ಕರೆಯುತ್ತೇವೆ.

~~ಒಕ್ಕ ಎಂದರೆ~~ ಕೊಡಗಿನ ಪರಿಸರದಲ್ಲಿ ಶತಮಾನಗಳಿಂದ ನೆಲೆಸಿರುವ ಸಾವಿರಾರು ಅವಿಭಕ್ತ ಕುಟುಂಬಗಳು. ಸಾಧಾರಣವಾಗಿ ದಕ್ಷಿಣ ಭಾರತದ ಎಲ್ಲಾ ಭಾಗಗಳಲ್ಲಿ ಕಾಣುವ ಅವಿಭಕ್ತ ಕುಟುಂಬಗಳಂತೆ ಇಲ್ಲಿಯೂ ಕೂಡ ಅವಿಭಕ್ತ ಕುಟುಂಬಗಳು ನೆಲೆಯಾಗಿದ್ದವು. ಸುಮಾರು ೧೫ನೇ ಶತಮಾನದಿಂದ ಈಚೆಗೆ ಅಲ್ಲಿನ ಭೌಗೋಳಿಕ ಹಾಗೂ ರಾಜಕೀಯ ವಿದ್ಯಮಾನಗಳ ಪ್ರಮುಖ ಕಾರಣಗಳಿಂದ ಹಾಗೂ ಕೇರಳದ ‘ತರವಾಡು’[೬] ಮತ್ತು ‘ಇಲ್ಲಂ’[೭]ಗಳ ಪ್ರಭಾವಗಳಿಂದ ಒಂದೇ ಸೂರಿನಡಿ, ರಕ್ತಸಂಬಂಧಿ ಬಂಧುಗಳು ತಮ್ಮ ಬದುಕನ್ನು ರೂಪಿಸಿ ಕೊಳ್ಳತೊಡಗಿದ ನಾಗರಿಕತೆಗಳನ್ನು ವಸಾಹತುಕಾಲದ ವಿದ್ವಾಂಸರು ಹಾಗೂ ನಂತರದ ದೇಶಿ ವಿದ್ವಾಂಸರು ಅವಿಭಕ್ತ ಕುಟುಂಬಗಳೆಂದು ಕರೆದರು (ಶ್ರೀನಿವಾಸ್, ೧೯೮೯(೧೯೫೨):೧೨೪), (ಮುತ್ತಣ್ಣ, ೧೯೫೩: ೩೦೯), (ತಂಬಂಡ, ೨೦೦೦:೨೬). ಸುಮಾರು ೫೦–೧೦೦ ಜನರೊಡಗೂಡಿದ ಈ ಕುಟುಂಬವು ವ್ಯವಸಾಯವನ್ನು ಅವಲಂಬಿಸಿದ್ದುದು ಅನಿವಾರ್ಯವಾಗಿತ್ತು. ಬದಲಾದ ರಾಜಕೀಯ ಮತ್ತು ಸಾಮಾಜಿಕ ವಿದ್ಯಮಾನಗಳಿಂದ ಕೊಡಗಿನ ಲಿಂಗಾಯತ ರಾಜರ ಕಾಲದಲ್ಲಿ ಒಕ್ಕಲು ಮಾಡಿಕೊಂಡಿದ್ದಂತಹ ಈ ಅವಿಭಕ್ತ ಕುಟುಂಬಗಳಿಗೆ “ಅವರವರ ಯೋಗ್ಯತಾನುಸಾರ” ಜಮ್ಮ, ಜಾಗೀರು, ಉಂಬಳಿ[೮] ಮೊದಲಾದ ಭೂಹಿಡುವಳಿಗಳನ್ನು ಒಕ್ಕಲುತನದ ರಾಜ್ಯವು ಒದಗಿಸಿಕೊಟ್ಟಿತು. ರಾಜ್ಯದ ಆರ್ಥಿಕ ನೆಲೆಗಟ್ಟನ್ನು ಭದ್ರಗೊಳಿಸುವ ದೃಷ್ಟಿಯಿಂದ ತೆರಿಗೆ ವಸೂಲಾತಿಯಲ್ಲಿ ಸುಧಾರಣೆ ತರಲು ಸುಲಭ ವಿಧಾನ ಅನುಸರಿಸಬೇಕಾದ ಅನಿವಾರ್ಯತೆಯಿಂದಾಗಿ ಪ್ರತಿ ಒಕ್ಕಲುಗಳನ್ನು ‘ಒಕ್ಕ’ಗಳೆಂದು ಗುರುತಿಸಿ ಅವುಗಳಿಗೆ ಒಂದೊಂದು ಹೆಸರುಗಳನ್ನು ಕೊಟ್ಟರು. ಈ ರೀತಿಯಲ್ಲಿ ಒಕ್ಕಲುತನ ಮಾಡುತ್ತಿದ್ದ ಒಕ್ಕಗಳೇ ಇಂದು ಕೊಡಗಿನ ಪರಿಸರದಲ್ಲಿ ನೂರಾರು ‘ಒಕ್ಕ’ಗಳಾಗಿ

ಗೋಚರಿಸುತ್ತಿವೆ. ಇವರ ಆಡಳಿತಾವಧಿಯಲ್ಲಿ ರಾಜಕೀಯ ಕಾರಣಗಳಿಂದ ರಾಜಕುಟುಂಬಕ್ಕೆ ಹತ್ತಿರವಾಗಿದ್ದ ಹಲವು ಪ್ರಭಾವಿತ ಒಕ್ಕಗಳು ಪ್ರತಿಷ್ಠಿತ ಹಾಗೂ ಪ್ರಬಲ ಒಕ್ಕಗಳಾಗಿ ಹೊರಹೊಮ್ಮಿದವು. ಹಾಗೆಯೇ ಮುಂದೆ ಬ್ರಿಟಿಷ್ ಆಡಳಿತಾವಧಿಯಲ್ಲಿಯೂ ಕೂಡ ಕೆಲವು ಒಕ್ಕಗಳು ಆ ಕಾಲಘಟ್ಟದ ರಾಜಕೀಯ ವಿದ್ಯಮಾನಗಳಿಗನುಸಾರವಾಗಿ ಸವಲತ್ತುಗಳನ್ನು ಪಡೆದು 'ಪ್ರತಿಷ್ಠಿತ' ಒಕ್ಕಗಳೆಂದು ಕರೆಸಿಕೊಂಡವು. ಕೊಡಗಿನಾದ್ಯಂತ ಪ್ರತಿ ಒಕ್ಕಗಳು ತಮ್ಮ ತಮ್ಮ ಭೂಮಿಗಳನ್ನು ಉಳುಮೆ ಮಾಡಿಕೊಂಡು ತಮ್ಮ ತಮ್ಮ ಒಕ್ಕಗಳ ಉನ್ನತಿ ಹಾಗೂ ನಿರಂತರತೆಯನ್ನು ಬಯಸಿ ಕಾಪಾಡಿಕೊಂಡು ಬಂದವು. ಈವರೆಗಿನ ಎಲ್ಲ ವಿದ್ವಾಂಸರು 'ಒಕ್ಕ'ವು ಅವಿಭಕ್ತ ಕುಟುಂಬದ ಸ್ವರೂಪವನ್ನು ಹೊಂದಿರುವುದರಿಂದ ಅದನ್ನು ಅವಿಭಕ್ತ ಕುಟುಂಬವೆಂದು ಕರೆದರು. ಆದರೆ ಆಧುನಿಕ ಕಾಲಘಟ್ಟದಲ್ಲಿ ಒಕ್ಕಗಳು ವಿಘಟಿತ ಕುಟುಂಬಗಳಾಗಿ ರೂಪಾಂತರಗೊಂಡು ಅವುಗಳ ಸ್ವರೂಪದಲ್ಲಿ ಮೂಲಭೂತ ಬದಲಾವಣೆಯುಂಟಾಗಿರುವಂತೆ ಕಾಣುತ್ತದೆ.

ಕೊಡಗಿನ ಅವಿಭಕ್ತ ಕುಟುಂಬಗಳು ಅಥವಾ ಒಕ್ಕಗಳು ರೂಪಿಸಿದ ನಾಡುಗಳನ್ನು, ಅಧ್ಯಯನ ಮಾಡುವ ಸಂದರ್ಭದಲ್ಲಿ ಒಕ್ಕಗಳು ರೂಪುಗೊಂಡ ಬಗೆ, ಒಕ್ಕಗಳ ಸ್ವರೂಪ ಮತ್ತು ವಿನ್ಯಾಸಗಳನ್ನು ಅಧ್ಯಯನಕ್ಕೆ ಒಳಪಡಿಸಲು ಯತ್ನಿಸಲಾಗಿದೆ. ಈ ಪ್ರಕ್ರಿಯೆಯನ್ನು ಅರ್ಥೈಸಲು ಕೃಷಿ ಕೇಂದ್ರಿತ ಸಮುದಾಯಗಳ, ಕುಶಲಕರ್ಮಿ ಸಮುದಾಯಗಳ ಹಾಗೂ ಕೃಷಿ ಕಾರ್ಮಿಕ ಸಮುದಾಯಗಳ ರಚನೆ, ಅಂತರ್ಗತ ಸಂಬಂಧಗಳನ್ನು, ವೈರುಧ್ಯಗಳನ್ನು ಅಭ್ಯಸಿಸಲು ಯತ್ನಿಸಲಾಗಿದೆ. ಈ ಸಂದರ್ಭದಲ್ಲಿ ಪ್ರತಿ ಒಕ್ಕಗಳಿಗಿರುವ ಅನನ್ಯತೆಗಳನ್ನು ಗುರುತಿಸುವ "ಮನೆ ಪೆದ"ಗಳನ್ನು (ಮನೆ ಹೆಸರು) ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಾವಿರಾರು ಸಂಖ್ಯೆಗಳಲ್ಲಿ ದೊರಕುವ ವಿವಿಧ ಒಕ್ಕಗಳನ್ನು ಈ ಹಿನ್ನೆಲೆಯಲ್ಲಿ ವಿಮರ್ಶಾತ್ಮಕವಾದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದೇ ಸಂದರ್ಭದಲ್ಲಿ ಕನ್ನಡ, ಎರವ, ಕುಡಿಯ ಭಾಷೆಗಳನ್ನಾಡುವ ಒಕ್ಕಗಳ ಸ್ವರೂಪವನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ರೂಪಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಸಂದರ್ಭದಲ್ಲೆಲ್ಲ ಕೂಡುಕುಟುಂಬ, ಐನ್‌ಮನೆ (ಒಕ್ಕಗಳು ವಾಸಿಸುವ ಸ್ಥಳ), ಭೂಹಿಡುವಳಿ, ವಿವಾಹ ಪದ್ಧತಿ, ಸಾರ್ವತ್ರಿಕ ಹಬ್ಬಗಳು ಮತ್ತು ಧಾರ್ಮಿಕ ಆಚರಣೆಗಳನ್ನು ಅಭ್ಯಸಿಸುವ ಯತ್ನವನ್ನು ಈ ಸಂದರ್ಭದಲ್ಲಿ ಮಾಡಲಾಗಿದೆ. ಆ ಮೂಲಕ ಸಮುದಾಯಗಳು ನಾಡಿನ ಐಕ್ಯತೆಯನ್ನು ಬಿಂಬಿಸುವ ಇಂತಹ ಸಾಮಾಜಿಕ, ಧಾರ್ಮಿಕ ಕ್ರಿಯೆಗಳಲ್ಲಿ ಭಾಗವಹಿಸುವ ಅಂಶಗಳನ್ನು ಅಭ್ಯಸಿಸುವ ಯತ್ನವನ್ನು ಮಾಡಲಾಗಿದೆ. ವಸಾಹತು ಪೂರ್ವಕಾಲ, ವಸಾಹತು ಕಾಲ ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಾದ ಈ ಬಗೆಯ ಬೆಳವಣಿಗೆಗಳನ್ನು, ಸಾಂಸ್ಕೃತಿಕ/ ರಾಜಕೀಯ ಸ್ಥಿತ್ಯಂತರಗಳನ್ನು ದಾಖಲಿಸಲು ಪ್ರಸ್ತುತ ಅಧ್ಯಯನವು ಶ್ರಮಪಟ್ಟಿದೆ.

* * *

ಒಕ್ಕಗಳ ಅಧ್ಯಯನದಲ್ಲಿ ಕಂಡುಬರುವ ಸಾಮಾಜಿಕ ಸಂರಚನೆಯ ಅಧ್ಯಯನದಲ್ಲಿ ಕೊಡಗು ಭಾಷಿಕ ಸಮುದಾಯಗಳು ರಚಿಸಿಕೊಂಡ ಒಂದು ಬಗೆಯ ಸ್ವಾಯತ್ತ ನಾಡು ಸಮಾಜವನ್ನು

ಕಾಣಬಹುದಾಗಿದೆ. ಬ್ರಿಟಿಷ್ ಬರಹಗಳಲ್ಲಿ ಆಗಾಗ್ಗೆ ಗುರುತಿಸಲಾಗಿರುವ "ಕೂರ್ಗ್ ಪ್ರಾಪರ್"[೧೦] ಪ್ರದೇಶಗಳಲ್ಲಿ ಅಂದರೆ ಮುಖ್ಯವಾಗಿ ಕೊಡಗು ಭಾಷಿಕರಿರುವ ಪ್ರದೇಶಗಳಲ್ಲಿರುವ ವಿವಿಧ ಒಕ್ಕಗಳ ಸಂರಚನೆಯನ್ನು, ವ್ಯಾಪ್ತಿಯನ್ನು ಅಭ್ಯಸಿಸುವ ಯತ್ನ ಇದಾಗಿದೆ. ನಾಯಕರ ಕಾಲದಲ್ಲಿ ಕಂಡುಬಂದ ನಾಡುಗಳು ಸ್ಥಿತ್ಯಂತರಗೊಂಡು ಲಿಂಗಾಯಿತ ಅರಸರ ಕಾಲದಲ್ಲಿ ಕಂಡುಕೊಂಡ "ಸಂಸ್ಥಾನ"ವೊಂದರ ನಾಡುಗಳಾಗಿ ಪರಿವರ್ತನೆಯಾದ ಅಂಶಗಳನ್ನು ಈ ಸಂದರ್ಭದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಈ ಸಂದರ್ಭದಲ್ಲಿ ಅನೇಕ ಸಣ್ಣಸಣ್ಣ ಸಮುದಾಯಗಳು ಸೇರಿ ಕೊಡವ ಸಮುದಾಯವಾಗಿ ರೂಪುಗೊಂಡ ಪ್ರಕ್ರಿಯೆಯನ್ನು ಹಾಗೂ ಇನ್ನುಳಿದ ಸಣ್ಣಸಣ್ಣ ಸಮುದಾಯಗಳು ತಮ್ಮ ತಮ್ಮ ಸ್ವಾಯತ್ತೆಯನ್ನು ಉಳಿಸಿಕೊಂಡು ನಾಡೊಂದರ ಭಾಗವಾದದ್ದನ್ನು ಅಭ್ಯಸಿಸಲಾಗಿದೆ. ಈ ಸಂದರ್ಭದಲ್ಲಿ ಲಭ್ಯವಾದ ವಿವಿಧ ಸಮುದಾಯಗಳ ಒಕ್ಕಗಳ ಮನೆ ಪೆದಗಳನ್ನು ವಿಶ್ಲೇಷಿಸಲು ಯತ್ನಿಸಲಾಗಿದೆ. ಮುಖ್ಯವಾಗಿ ಕೃಷಿ ಕೇಂದ್ರಿತ ಸಮುದಾಯಗಳ, ಕುಶಲಕರ್ಮಿ ಸಮುದಾಯಗಳ, ಕೃಷಿ ಕಾರ್ಮಿಕ ಸಮುದಾಯಗಳ ಒಕ್ಕಗಳ ಮನೆ ಪೆದಗಳನ್ನು ತುಲನಾತ್ಮಕವಾಗಿ ವಿಮರ್ಶಿಸಲಾಗಿದೆ. ಕೊಡಗು ಮತ್ತು ಸುಳ್ಯ ಪರಿಸ್ಥರದ ಅರೆಭಾಷಿಕ ಗೌಡ ಸಮುದಾಯಗಳ ನೂರಾರು ಒಕ್ಕಗಳ ಪಾತ್ರವನ್ನು ಅಲ್ಲಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ. ಕೊಡಗು ಭಾಷಿಕ ಒಕ್ಕಗಳನ್ನು ಅಭ್ಯಾಸ ಮಾಡುವಾಗ ಕಂಡುಬರುವ ಅಂಶಗಳು ಅರೆಭಾಷಿಕ, ಕುಡಿಯ, ಎರವ ಭಾಷಿಕ ಸಮುದಾಯಗಳನ್ನು ಅಭ್ಯಾಸ ಮಾಡುವ ಸಂದರ್ಭದಲ್ಲಿಯೂ ಕಂಡುಬರುವುದನ್ನು ಕಾಣಬಹುದಾಗಿದೆ. ಕುತೂಹಲಕಾರಿಯಾದ ಸಂಗತಿ ಎಂದರೆ ಬಹುತೇಕ ಅರೆಭಾಷಿಕರು, ಕುಡಿಯರು, ಎರವರು ದ್ವಿಭಾಷಿಕರಾಗಿ ಕೊಡಗು ಭಾಷೆಯನ್ನು ಮಾತನಾಡುವವ ರಾಗಿರುವುದು. ಈ ಎಲ್ಲ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಒಂದು ನಾಡಿನಲ್ಲಿ ಒಕ್ಕಗಳು, ಒಕ್ಕಗಳಿಗೆ ಪೂರಕವಾಗಿರುವ ಸಣ್ಣ ಸಮುದಾಯಗಳ ವಿವಿಧ ಮಜಲುಗಳನ್ನು ಅಭ್ಯಸಿಸಲಾಗಿದೆ.

ನಾಡು-ನುಡಿಯ ಅಭಿವ್ಯಕ್ತಿಯಾಗಿ ಒಕ್ಕಗಳು ಎನ್ನುವ ಅಂಶವನ್ನು ವಸಾಹತುಪೂರ್ವ ಕಾಲದಲ್ಲಿ ದೊರೆತ "ದೇಶಕಟ್ಟ್ ಪಾಟ್"[೧೧]ವಿನ ಮೂಲಕ ಅರ್ಥಮಾಡಿಕೊಳ್ಳಲು ಯತ್ನಿಸಲಾಗಿದೆ. ಸಾಂಪ್ರದಾಯಿಕವಾಗಿ ೨೮ ನಾಡುಗಳಿದ್ದ ಕೊಡಗು ಮತ್ತೆ ೭ ನಾಡುಗಳನ್ನು ಸೇರಿಸಿಕೊಂಡು ೩೫ ನಾಡುಗಳಾಗಿ ಕೊಡಗು ಸಂಸ್ಥಾನವಾಗಿ ರೂಪುಗೊಂಡ ಬಗೆಗಳನ್ನು ಅಭ್ಯಸಿಸಲಾಗಿದೆ. ವಸಾಹತು ಕಾಲದಲ್ಲಿಯೂ ಹೆಚ್ಚುಕಡಿಮೆ ಮುಂದುವರೆದ ಈ ವ್ಯವಸ್ಥೆ ಸ್ವಾತಂತ್ರ್ಯಾನಂತರ ಬದಲಾವಣೆಯಾದದ್ದರ ಬಗ್ಗೆ ದೀರ್ಘವಾಗಿ ವಿಶ್ಲೇಷಣೆ ಮಾಡಲಾಗಿದೆ. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಕಂಡ ರಾಜಕೀಯ-ಆರ್ಥಿಕ ಘಟ್ಟಗಳನ್ನು ಇಲ್ಲಿ ಗುರುತಿಸಲಾಗಿದೆ. ಜಾಗತೀಕರಣ ಸಂದರ್ಭದಲ್ಲಿ ಅಲ್ಲಿಯವರೆಗೆ ಒಟ್ಟೊಟ್ಟಿಗಿದ್ದ ಸಮುದಾಯಗಳು ಮತ್ತು ನಾಡುವಿನ ಪ್ರಶ್ನೆಗಳು ಮರೆಯಾದವು. ಜಾಗತೀಕರಣದ ಕಾಲಾವಧಿಯಲ್ಲಿ ನಾಡಿಗಿಂತ ಸಮುದಾಯಗಳ ಹಿತಾಸಕ್ತಿ ಪ್ರಧಾನವಾದ ಚಾರಿತ್ರಿಕ ಪ್ರಕ್ರಿಯೆಯನ್ನು ವಿವರಿಸಲು ಯತ್ನಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವು ಕೊಡಗಿನ ಪರಿಸರದ ಕಡಂಗಗಳ[೧೨] ಸ್ವರೂಪವನ್ನು ಇದೇ ಸಂದರ್ಭದಲ್ಲಿ ಚರ್ಚಿಸಿದೆ. ಲಿಂಗಾಯಿತ ಅರಸರ ಪೂರ್ವಕಾಲದಲ್ಲಿ ಪ್ರಚಲಿತದಲ್ಲಿದ್ದ ನಾಯಕರ ಆಳ್ವಿಕೆಯ ಸಂದರ್ಭದಲ್ಲಿದ್ದ ಕಡಂಗಗಳ

ಕುರುಹುಗಳನ್ನು ಇನ್ನೂ ಕಾಣಬಹುದಾಗಿದೆ. ಒಕ್ಕ ಒಕ್ಕಗಳ ನಡುವಿನ ಸರಹದ್ದುಗಳನ್ನು ನಿರ್ಧರಿಸುವ ಗಡಿಯನ್ನು, ನಾಡುವಿನ ರಕ್ಷಣೆಗಾಗಿ ನಾಡುವಿನ ಸುತ್ತಲಿದ್ದ ಪ್ರದೇಶಗಳನ್ನು, ಮುಖ್ಯವಾದ ಕಾಲುರಸ್ತೆಗಳನ್ನು ಕಡಂಗಗಳೆಂದು ಕರೆಯಲಾಗುತ್ತಿತ್ತು. ಇವುಗಳು ಒಂದು ರೀತಿಯ ಸಾಂಪ್ರದಾಯಿಕ ಗಡಿಗಳು. ನಾಡು-ನಾಡುವಿನ ಮಧ್ಯೆಯಿದ್ದ ಕಡಂಗಗಳ ಗಡಿಗಳು ಲಿಂಗಾಯಿತ ಅರಸರ ಕಾಲದಲ್ಲಿ ಹೊಸ ಸ್ವರೂಪ ಪಡೆದುಕೊಂಡ ಬಗೆಗಳನ್ನು ಪ್ರಸ್ತುತ ಮಹಾಪ್ರಬಂಧವು ಅಭ್ಯಸಿಸಲು ಯತ್ನಿಸಿದೆ. ಭಾಷಾಸಮುದಾಯಗಳ ನಡುವೆ ಕಂಡುಕೊಂಡ ನಾಡುಗಳ ಸ್ವರೂಪದ ಅಧ್ಯಯನವನ್ನು ಮಾಡಲು ಕಡಂಗಗಳ ಅಧ್ಯಯನ ಮುಖ್ಯವಾಗಿದೆ. ಬ್ರಿಟಿಷರ ಕಾಲದಲ್ಲಿ ಈ ಅಂಶವು ನಿಧಾನವಾಗಿ ಕಣ್ಮರೆಯಾದರೂ, ಇದರ ಚಹರೆಗಳನ್ನು ಕೊಡಗಿನಲ್ಲಿ ಈಗಲೂ ಗಮನಿಸಬಹುದಾಗಿದೆ. ನಾಡು-ನುಡಿಯ ಸಂಕಥನಕ್ಕೆ ಪೂರಕವಾಗಿರುವ ಈ ಅಂಶವನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

* * *

"ಕೊಡಗು" ಎಂಬ ಪದ ನಿಷ್ಪತ್ತಿಯ ಕುರಿತು ವಿದ್ವಾಂಸರು ಈ ರೀತಿ ಅಭಿಪ್ರಾಯಪಡುತ್ತಾರೆ. ರೈಸ್ ಬಿ.ಎಲ್. ಅವರು ಕೊಡಗು ಎಂದರೆ 'ಕಡಿದಾದ ಪರ್ವತಗಳು' ಎಂದಿದ್ದಾರೆ(ರೈಸ್ ಬಿ.ಎಲ್, ಸಂ-೩, ೨೦೦೪(೧೮೭೮):೧). ಅಲ್ಲದೆ, ಕಾವೇರಿ ಪುರಾಣಗಳಲ್ಲಿ ಈ ದೇಶವನ್ನು 'ಕ್ರೋಡ' ಎಂದು ಹೆಸರಿಸಲಾಗಿದೆ. ಕ್ರೋಡ ಎಂದರೆ ವರಾಹ ಎಂದರ್ಥ. ಕ್ರೋಡ ಎಂಬುದು ಅಪಭ್ರಂಶಗೊಂಡು ಕೊಡಗು ಆಗಿರಬಹುದೆಂದೂ ಕೂಡ ಬಿ.ಎಲ್. ರೈಸ್ ಅಭಿಪ್ರಾಯಪಡುತ್ತಾರೆ (ರೈಸ್ ಬಿ.ಎಲ್, ಸಂ-೩, ೨೦೦೪(೧೮೭೮):೯೨). ರಿಕ್ಟರ್ ಅವರ ಪ್ರಕಾರ ಕೊಡವ ಭಾಷೆಯಲ್ಲಿ "ಕೊಡಿ" ಎಂದರೆ ತುದಿ ಎಂದರ್ಥ. ಸರಿಯಾಗಿ ಹೇಳುವುದಾದರೆ ಕೊಡಗು ಪರ್ವತಮಯವಾದ ನಾಡು(ರಿಕ್ಟರ್ ಜಿ., ೨೦೧೪(೧೮೭೦):೨೨೮). ಅದೇ ರೀತಿಯಲ್ಲಿ ಮಾರ್ಸ್‌ಡೆನ್ ಅವರು ಕೊಡಗು ಎಂದರೆ ಕೋಡುಗಲ್ಲುಗಳುಳ್ಳದ್ದು ಎಂದಿದ್ದಾರೆ(ತಂಬಂಡ, ೨೦೦೫:೧). ಡಿ.ಎನ್. ಕೃಷ್ಣಯ್ಯನವರು ಕೊಡವರ ಹಾಡುಗಳಲ್ಲಿ "ದೇಶಕೆಲ್ಲೂಯಂದದ್ದೂ ಪೊಮ್ಮಾಲೆ ಕೊಡಮಲೆ ದೇಶಕೆಲ್ಲ ಬಯಂದದೋ ಪೊಮ್ಮಾಲೆ ಕೊಡಮಲೆ" ಎಂದೂ ಹೇಳಿದೆ. ಪೊಮ್ಮಾಲೆ ಕೊಡಮಲೆ ಅಥವಾ ಕೊಡಿಮಲೆ ಎಂದರೆ ಚಿನ್ನದ ಮಾಲೆ ಅಥವಾ ಹಾರದಂತಿರುವ ಕೊಡಗು ಎಂದರ್ಥ ಎಂದಿದ್ದಾರೆ (ಕೃಷ್ಣಯ್ಯ, ೧೯೫೫(೧೯೭೪):೧) ನಡಿಕೇರಿಯಂಡ ಚಿಣ್ಣಪ್ಪ ಹೇಳುವಂತೆ, ಕೊಡಗು, ಮಲೆಯಾಳ ಮತ್ತು ವಯನಾಡು ಇವೆಲ್ಲ ಮಲೆ ಪ್ರದೇಶಗಳಾಗಿವೆ. ಆದರೆ ಕೊಡಗಿನ ಬೆಟ್ಟಗಳಿಗಿಂತ ತಗ್ಗಿನಲ್ಲಿ, ಆಳದಲ್ಲಿ ಇರುವುದರಿಂದ ಮಲೆಯಾಳವಾಯಿತು. ಮಲೆಯಾಳ ಮತ್ತು ಕೊಡಗಿನ ನಡುವೆ ಬಯಲಾಗಿರುವ ನಾಡಾದ್ದರಿಂದ ('ವಯ' ಎಂದರೆ ಬಯಲು) ವಯನಾಡಾಯಿತೆಂದು ಹಾಗೂ ಕೊಡಗು ಎತ್ತರವಾದ ಮಲೆಗಳಿಂದ ಕೂಡಿದ್ದರಿಂದ ಕೊಡುಮಲೆ ಅಥವಾ ತುದಿಯಲ್ಲಿರುವ ಮಲೆಯೆ ಕೊಡವು ಮಲೆ ಎಂದಾಗಿದ್ದು, ನಂತರ ಕೊಡಗು ಆಗಿದೆ ಎನ್ನುತ್ತಾರೆ(ಚಿಣ್ಣಪ್ಪ,

೨೦೦೬(೧೯೨೪):೧) ಭೌಗೋಳಿಕ ಸಹಜ ಸ್ಥಿತಿಯಿಂದ ಆಯಾಯ ಹೆಸರುಗಳು ಬಂದವೆಂದು ಹೇಳುವುದು ಹೆಚ್ಚು ಸೂಕ್ತವಾಗಿರುವುದರಿಂದ ಈ ಮೇಲಿನ ಎಲ್ಲರ ಅಭಿಪ್ರಾಯಕ್ಕಿಂತಲೂ ಚೆಣ್ಣಪ್ಪ ಅವರ ಅಭಿಪ್ರಾಯ ಒಪ್ಪಬಹುದಾಗಿದೆ.

ಶಾಸನಗಳ ಆಧಾರದ ಮೇಲೆ ಕ್ರಿ.ಶ. ನಾಲ್ಕನೇ ಶತಮಾನದಿಂದ ೧೧ನೇ ಶತಮಾನದವರೆಗೆ ಆಳಿದ ಗಂಗರಸರು ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಇವರು ವಯನಾಡು ಮತ್ತು ಕೊಡಗನ್ನು ೯-೧೦ನೇ ಶತಮಾನಗಳಲ್ಲಿ ಆಳಿರುವುದು ಶಾಸನಗಳಿಂದ ತಿಳಿದು ಬರುತ್ತದೆ(ಗೋಪಾಲ್, ಸಂ.೧, ೧೯೭೨:೯೬-೯೮).

ಮುಂದೆ ಚೋಳರು ೧೧ನೇ ಶತಮಾನದ ಆದಿಯಲ್ಲಿ ಗಂಗರನ್ನು ಸೋಲಿಸಿ ಕೊಡಗನ್ನು ವಶಪಡಿಸಿಕೊಂಡರು. ಚೆಂಗಾಳ್ವರೂ ಇವರ ಅಧೀನರಾದರು. ಆಗ ೭೦೦೦ ಸೀಮೆಯನ್ನು ಕೊಂಗಾಳ್ವರೂ, ದಕ್ಷಿಣ ಕೊಡಗನ್ನು ಚೆಂಗಾಳ್ವರೂ ಚೋಳರ ಕೈ ಕೆಳಗೆ ಆಳಿದರು. ಹೊಯ್ಸಳರು ೧೨ನೆಯ ಶತಮಾನದ ಆದಿಯಲ್ಲಿ ಚೋಳರಿಂದ ತಲಕಾಡನ್ನು ವಶಪಡಿಸಿಕೊಂಡರು. ಇದೇ ಸಮಯದಲ್ಲಿ ಚೆಂಗಾಳ್ವರು ಸ್ವತಂತ್ರಕ್ಕಾಗಿ ಹವಣಿಸುತ್ತಿದ್ದರು. ಚೆಂಗಾಳ್ವರ ರಾಜಧಾನಿಯು ಸಿದ್ದಾಪುರದ ಹತ್ತಿರ ಇರುವ ಕೊಡಗಿನ ಶ್ರೀರಂಗಪಟ್ಟಣವಾಗಿತ್ತು(ಕೃಷ್ಣಯ್ಯ, ೧೯೯೫(೧೯೭೪):೪೪-೪೫). ನಂತರ ವಿಜಯನಗರ ಸಂಸ್ಥಾನ ೧೩೩೬ರಲ್ಲಿ ಸ್ಥಾಪಿಸಲ್ಪಟ್ಟು ೧೫೬೫ರವರೆಗೆ ದಕ್ಷಿಣ ಭಾರತವನ್ನು ಆಳಿದರು. ಆ ಕಾಲದಲ್ಲಿ ಕೊಡಗು ಹನ್ನೆರಡು ಕೊಂಬುಗಳಾಗಿಯೂ ಮೂವತ್ತೈದು ನಾಡು ಗಳಾಗಿಯೂ ವಿಭಾಗಿಸಲ್ಪಟ್ಟಿದ್ದು ಒಂದೊಂದು ಕೊಂಬು ಒಬ್ಬೊಬ್ಬ ನಾಯಕನೆಂಬ ಪಾಳೆಯಗಾರನ ಅಧೀನದಲ್ಲಿತ್ತು (ರೈಸ್, ೨೦೦೪(೧೮೭೮):೯೮-೯೯). ಈ ಪಾಳೆಯಗಾರರು ಒಬ್ಬರೊಡನೊಬ್ಬರು ಜಗಳವಾಡುತ್ತಾ ಕಡೆಗೆ ೧೬ನೆಯ ಶತಮಾನದಲ್ಲಿ ಹಾಲೇರಿ ವಂಶಸ್ಥರು ಕೊಡಗನ್ನು ಆಕ್ರಮಿಸಿ ಕೊಂಡು ಕೊಡಗಿನ ಅರಸರಾದರು. ಮುಂದೆ ಕೊಡಗು ಹಾಲೇರಿ ಸಂಸ್ಥಾನ ಎಂದು ಹೆಸರಾಯಿತು. ಈ ಹಾಲೇರಿಯ ಸಂಸ್ಥಾನದ ದೊರೆಯಾದ ವೀರರಾಜನೇ ಕೊಡಗಿನ ಮೊದಲ ದೊರೆಯಾದನು. ಕೊಡಗು ರಾಜರ ಚರಿತ್ರೆಯನ್ನು 'ರಾಜೇಂದ್ರನಾಮೆ' ಎಂಬ ಕೃತಿಯಲ್ಲಿ ಹೇಳಲ್ಪಟ್ಟಿದೆ. ಮುಂದೆ ಹೈದರಾಲಿಗೂ ಕೊಡಗು ರಾಜರಿಗೂ ಯುದ್ಧವಾಗಿ ೧೭೭೩ರಲ್ಲಿ ಹೈದರಾಲಿ ಕೊಡಗು ಪ್ರವೇಶಿಸಿದನು.

ತದನಂತರ ಟಿಪ್ಪುಸುಲ್ತಾನನು ೧೭೮೪ರಲ್ಲಿ ಕೊಡಗನ್ನು ತನ್ನ ವಶಕ್ಕೆ ತೆಗೆದುಕೊಂಡನು. ವೀರರಾಜೆಂದ್ರನಿಗೂ, ಟಿಪ್ಪುವಿಗೂ ಆಗಾಗ್ಗೆ ಯುದ್ಧ ನಡೆಯುತ್ತಿತ್ತು. ಈ ನಡುವೆ ವೀರರಾಜೇಂದ್ರ ಬ್ರಿಟಿಷರ ಪಕ್ಷ ಸೇರಿ ಟಿಪ್ಪುವನ್ನು ಹಿಮ್ಮೆಟ್ಟಿಸಿದನು. ಚಿಕ್ಕವೀರರಾಜನು ಕೊಡಗಿನ ಕೊನೆಯ ಅರಸನಾದನು(೧೮೨೦-೧೮೩೪). ಬ್ರಿಟಿಷರ ಸರ್ಕಾರ ೧೮೩೪ರಲ್ಲಿ ಕೊಡಗನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ೧೯೪೭ರವರೆಗೆ ಬ್ರಿಟಿಷರು ಕೊಡಗನ್ನು ಆಳಿದರು. ಮುಂದೆ ೧೯೫೬ರಲ್ಲಿ

ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಕರ್ನಾಟಕ ರಾಜ್ಯದ ಜಿಲ್ಲೆಯಾಗಿ ಕೊಡಗು ರೂಪುತಳೆಯಿತು. ಪ್ರಸ್ತುತ ಕೊಡಗು ಜಿಲ್ಲೆಯ ಅಂಕಿ ಅಂಶಗಳ(೨೦೧೩-೧೪)ರ ಪ್ರಕಾರ ಕೊಡಗಿನ ಒಟ್ಟಾರೆ ಜನಸಂಖ್ಯೆ ೫,೫೪,೫೧೯ ಇದ್ದು ೨,೭೪,೬೦೮ ಪುರುಷರು ಹಾಗೂ ೨,೭೯,೯೧೧ ಮಹಿಳೆಯರ ಸಂಖ್ಯೆ ಇರುತ್ತದೆ. (ಕೊಡಗು ಜಿಲ್ಲಾ ಅಂಕಿಅಂಶಗಳ ನೋಟ: ೧೨೬)

* * *

ಕೊಡಗಿನ ಚರಿತ್ರೆ, ಸಮಾಜ, ಸಂಸ್ಕೃತಿ, ಭೌಗೋಳಿಕ ಪರಿಸರ, ಆರ್ಥಿಕ ಸಂಗತಿ ಮೊದಲಾದವುಗಳ ಮೇಲೆ ೧೯ನೆಯ ಶತಮಾನದ ಆರಂಭದಿಂದ ಈವರೆಗೆ ಅನೇಕ ದೇಶೀಯ ಮತ್ತು ವಿದೇಶೀಯ ವಿದ್ವಾಂಸರು ವಿವಿಧ ಆಯಾಮಗಳಿಂದ ಅಧ್ಯಯನ ನಡೆಸಿದ್ದಾರೆ. ಈವರೆಗೆ ನಡೆದಿರುವ ಪ್ರಮುಖ ಅಧ್ಯಯನಗಳ ಸಿಂಹಾವಲೋಕನವನ್ನು ನೋಡಬಹುದು.

ವಸಾಹತು ಕಾಲದಲ್ಲಿ ಕೊಡಗನ್ನು ಕುರಿತು ಅಧ್ಯಯನ ಮಾಡಿದ ವಿದೇಶಿಯ ವಿದ್ವಾಂಸರು ಅವರಲ್ಲಿ ಮಿಷನರಿಯ ಕಾರ್ಯಕರ್ತರು ಮತ್ತು ಬ್ರಿಟಿಷ್ ಸರ್ಕಾರದಲ್ಲಿ ಸೇವೆ ಸಲ್ಲಿಸುತ್ತಿದ್ದ ಅಧಿಕಾರಿಗಳೂ ಇದ್ದಾರೆ. ಇವರಲ್ಲಿ ರಿಕ್ತರ್, ಎಚ್.ಮೋಗ್ಲಿಂಗ್, ಬಿ.ಎಲ್.ರೈಸ್, ಇ.ಮಾರ್ಸ್‌ಡೆನ್ ಮುಂತಾದವರು ಪ್ರಮುಖರಾಗಿದ್ದಾರೆ. ಸಾಮಾನ್ಯವಾಗಿ ಇವರೆಲ್ಲರ ಬರವಣಿಗೆಗಳಲ್ಲಿ ವಸಾಹತುಶಾಹಿಯ ದೃಷ್ಟಿಕೋನವಿದೆ.

ಜಿ.ರಿಕ್ತರ್ ಅವರು ಬಾಸಲ್ ಮಿಷನರಿಯ ಮೂಲಕ ಕೊಡಗಿಗೆ ಬಂದವರು. ಅವರು ೧೮೭೦ರಲ್ಲಿ ರಚಿಸಿದ 'ಗೆಜೆಟಿಯರ್ ಆಫ್ ಕೂರ್ಗ್' ಕೃತಿಯು ಕೊಡಗಿನ ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ವಿಚಾರಗಳನ್ನು ಸಾದರಪಡಿಸುತ್ತದೆ. ಕೊಡಗಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಅಧ್ಯಯನ ಮಾಡುವ ಹಿನ್ನೆಲೆಯಲ್ಲಿ ಇದು ಗಮನಾರ್ಹ ಕೃತಿಯಾಗಿದೆ. ೧೮೭೮ರಲ್ಲಿ ಬಿ.ಎಲ್.ರೈಸ್ ಅವರು ಬರೆದ 'ಮೈಸೂರು ಆ್ಯಂಡ್ ಕೂರ್ಗ್ ವಾಲ್ಯೂಮ್-೩' ವಸಾಹತುಶಾಹಿ ದೃಷ್ಟಿಕೋನವನ್ನು ಹೊಂದಿರುವ ಕೃತಿಯಾದರೂ ಕೊಡಗಿನ ಸಮಗ್ರ ಚಿತ್ರಣವನ್ನು ಕಟ್ಟಿಕೊಡಬಲ್ಲ ಬಹುಮುಖ್ಯ ಗ್ರಂಥವಾಗಿದೆ. ಇದರಲ್ಲಿ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ, ಆರ್ಥಿಕ, ಆಡಳಿತಾತ್ಮಕ ವಿಚಾರಗಳನ್ನು ಸವಿವರವಾಗಿ ಕಟ್ಟಿಕೊಡಲಾಗಿದೆ. ರೆ.ಎಚ್. ಮೋಗ್ಲಿಂಗ್ ಅವರು ವೆಸ್ಲಿಯನ್ ಮಿಷನ್‌ನ ಮೂಲಕ ಕೊಡಗಿಗೆ ಬಂದವರು. ಇವರು ೧೮೫೫ರಲ್ಲಿ 'ಕೂರ್ಗ್ ಮೆಮೊಯರ್ಸ್' ಎಂಬ ಕೃತಿಯನ್ನು ರಚಿಸಿದರು. ಈ ಕೃತಿಯು ಕೊಡಗಿನ ಸಮುದಾಯ ಗಳಲ್ಲಿನ ಆಚರಣೆಗಳು, ಹಬ್ಬಗಳು ಮೊದಲಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ಜೊತೆಗೆ ರಾಜಕೀಯ ಚರಿತ್ರೆಯನ್ನು ಒಳಗೊಂಡಿದೆ. ಬ್ರಿಟಿಷ್ ಸರಕಾರದ ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಯಾಗಿ ಕೆಲಸ ಮಾಡುತ್ತಿದ್ದ ಇ.ಮಾರ್ಸ್‌ಡೆನ್ ಅವರು ೧೯೦೩ರಲ್ಲಿ 'ಕೊಡಗು ವಿವರಣೆ' ಎಂಬ ಕಿರುಕೃತಿಯನ್ನು ಕನ್ನಡದಲ್ಲಿ ರಚಿಸಿದ್ದಾರೆ. ಇವರು ಈ ಕೃತಿಯಲ್ಲಿ ಕೊಡಗಿನ ಭೌಗೋಳಿಕ,

ಚಾರಿತ್ರಿಕ ಹಾಗೂ ಆರ್ಥಿಕ ಮತ್ತು ಕೃಷಿಕ ವಿಷಯಗಳಿಗೆ ಸಂಬಂಧಿಸಿದಂತೆ ಹಲವು ವಿಚಾರಗಳನ್ನು ಆಕರ್ಷಕವಾಗಿ ವಿವರಿಸಿದ್ದಾರೆ. ಇವರಲ್ಲದೆ, ಫ್ರಾನ್ಸಿಸ್ ಬುಕಾನನ್ ಅವರ 'ಎ ಜರ್ನಿ ಫ್ರಂ ಮಡ್ರಾಸ್ ಥ್ರೂ ಔಟ್ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್'(೧೮೦೭), ರಾಬರ್ಟ್ ಇಲಿಯಟ್ ಅವರ 'ಗೋಲ್ಡ್ ಸ್ಪೋರ್ಟ್ ಆ್ಯಂಡ್ ಕಾಫಿ ಪ್ಲಾಂಟಿಂಗ್ ಇನ್ ಮೈಸೂರು'(೧೮೯೮), ಕಾನರ್ ಅವರ 'ಮೇಮ್ವಾ ಆಫ್ ಕೊಡಗು ಸರ್ವೇ ಕಾಮನ್ಲಿ ರಿಟನ್ ಕೂರ್ಗ್' ಎರಡು ಸಂಪುಟಗಳು(೧೯೭೦), ಕರ್ನಲ್ ವಿಲ್ಕ್ಸ್ ಅವರ 'ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌಥ್ ಇಂಡಿಯಾ ಇನ್ ಆ್ಯನ್ ಅಟೆಂಡ್ ಟು ಟ್ರೇಸ್ ದ ಹಿಸ್ಟರಿ ಆಫ್ ಮೈಸೂರು ಫ್ರಂ ದ ಆರಿಜಿನ್ ಆಫ್ ದಿ ಹಿಂದೂ ಗೌರ್ನಮೆಂಟ್ ಆಫ್ ದಿ ಸ್ಟೇಟ್, ಟು ದಿ ಎಕ್ಸ್‌ಟೆನ್ಷನ್ ಆಫ್ ದಿ ಮೊಹಮ್ಮಡನ್ ಡೈನಾಸ್ಟಿ ಇನ್ ೧೭೬೧ ಫೌಂಡೆಡ್ ಚೀಫ್‌ಲಿ ಆನ್ ಇಂಡಿಯನ್ ಅಥಾರಿಟಿಸ್' ಎರಡು ಸಂಪುಟಗಳು(೧೮೧೦), ಬೇಡೆನ್ ಪೊವೆಲ್ ಅವರ 'ದ ಲ್ಯಾಂಡ್ ಸಿಸ್ಟಂ ಆಫ್ ಬ್ರಿಟಿಷ್ ಇಂಡಿಯಾ' ಸಂಪುಟ ಮೂರು(೧೮೯೨), ರಾಬ್‌ಕೋಲ್ ಅವರ 'ಕೂರ್ಗ್ ಸಿವಿಲ್ ಲಾ'(೧೮೭೧), ಹಂಟರ್ ಅವರ 'ಇಂಪೀರಿಯಲ್ ಗೆಜೆಟಿಯರ್' (೧೮೮೫) ಮುಂತಾದ ವಿದೇಶಿ ವಿದ್ವಾಂಸರು ಕೂಡ ಕೊಡಗಿನ ಬಗೆಗೆ ಅಧ್ಯಯನ ನಡೆಸಿದ್ದಾರೆ.

ಕೊಡಗಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡುವಲ್ಲಿ ದೇಶೀಯ ವಿದ್ವಾಂಸರು ಹಿಂದೆ ಬೀಳಲಿಲ್ಲ. ಅವರಲ್ಲಿ ಪ್ರಮುಖರಾದವರು ವೃತ್ತಿಪರ ಚರಿತ್ರೆಕಾರರಾದ ವಿಜಯ್ ಪೂಣಚ್ಚ ತಂಬಂಡ ಮತ್ತು ಕೆ.ಎಂ.ಲೋಕೇಶ್ ಹಾಗೂ ಬರಹಗಾರರಾದ ನಡಿಕೇರಿ ಯಂಡ ಚಿಣ್ಣಪ್ಪ, ಡಿ.ಎನ್.ಕೃಷ್ಣಯ್ಯ, ಬಿ.ಡಿ.ಗಣಪತಿ, ಎಂ.ಎನ್.ಶ್ರೀನಿವಾಸ್, ಐ.ಮಾ.ಮುತ್ತಣ್ಣ, ಕೆ.ಪಿ.ಮುತ್ತಣ್ಣ, ಪೊನ್ನಮ್ಮ ಕಾರ್ಯಪ್ಪ, ಮುಂತಾದವರಲ್ಲದೆ ಸಮಕಾಲೀನ ಬರಹಗಾರರಾದ ಬೋವ್ವೆರಿಯಂಡ ನಂಜಮ್ಮ ಚಿಣ್ಣಪ್ಪ, ಪಿ.ಟಿ. ಬೋಪಣ್ಣ, ಎಂ.ಜಿ.ನಾಗರಾಜ್, ಕಾವೇರಿ ಪೊನ್ನಪ್ಪ, ಕೋರನ ಸರಸ್ವತಿ, ರೇಖಾ ವಸಂತ್, ಲಲಿತ. ಕೆ.ಪಿ. ಮುಂತಾದವರನ್ನು ಹೆಸರಿಸಬಹುದು.

ನಡಿಕೇರಿಯಂಡ ಚಿಣ್ಣಪ್ಪನವರು ಕೊಡಗಿನ ಬಗೆಗೆ ಬರೆದ ಮೊದಲ ದೇಶಿ ವಿದ್ವಾಂಸರು. ಇವರ ಕೃತಿ 'ಪಟ್ಟೋಲೆ ಪಳಮೆ'ಯು ೧೯೨೪ರಲ್ಲಿ ಪ್ರಕಟಗೊಂಡಿತು. ಈ ಕೃತಿಯಲ್ಲಿ ಕೊಡವರು ಆಚಾರ–ವಿಚಾರ, ಸಂಪ್ರದಾಯ, ಹಬ್ಬ, ಹರಿದಿನ, ಸಂಸ್ಕಾರ ಮೊದಲಾದ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಗತಿಗಳನ್ನು ಹೇಗೆ ನಡೆಸಬೇಕು, ಹೇಗೆ ನಡೆದುಕೊಳ್ಳಬೇಕು ಎಂಬಿತ್ಯಾದಿ ನಿಯಮಗಳನ್ನು ಹಾಕಿದ್ದಾರೆ. ಇದೊಂದು ರೀತಿಯಲ್ಲಿ ಕೊಡವರ ಮನುಸ್ಮೃತಿ. ಏಕೆಂದರೆ ಪುರೋಹಿತಶಾಹಿ ಧೋರಣೆ ಮತ್ತು ಊಳಿಗಮಾನ್ಯ ಪರಂಪರೆಯನ್ನು ಮರು ಪ್ರತಿಷ್ಠಾಪಿಸುವ ಪ್ರಯತ್ನದ ಪ್ರತೀಕವಾಗಿ ಈ ಕೃತಿ ಕಾಣುತ್ತದೆ. ಇದಕ್ಕೆ ಪೂರಕವಾಗಿ ವಿಜಯ್ ಪೂಣಚ್ಚ ತಂಬಂಡ ಅವರ ಮಾತುಗಳು ಇಲ್ಲಿ ಉಲ್ಲೇಖಾರ್ಹ: "ಬದಲಾದ ರಾಜಕೀಯ ಪರಿಸ್ಥಿತಿಯಿಂದ ಉದ್ಭವಿಸಿದ ಬದಲಾದ ಮೌಲ್ಯಗಳು ಕೊಡವೇತರ ಜಾತಿಗಳು ಕೀಳಾಗಿ ಇರಲೇಬೇಕೆಂಬ ಮತ್ತು ಅದು ಶ್ರೇಣೀಕೃತ ವೈದಿಕ ವ್ಯವಸ್ಥೆ ಒಪ್ಪಿಕೊಂಡ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ

ಎನ್ನುವ ಏಕಸೂತ್ರದಲ್ಲೇ ಆಗಬೇಕೆಂಬ ತೀರ್ಮಾನ ಕಂಡುಕೊಂಡುದ್ದನ್ನು ಚಿಣ್ಣಪ್ಪನವರ ಪಟ್ಟೋಳೆ ಪಳಮೆಯಲ್ಲಿ ನಾವು ನೋಡಬಹುದು"(ತಂಬಂಡ, ೨೦೦೪:೬೦). ಆದರೆ ಚಿಣ್ಣಪ್ಪನವರ ಸಮಕಾಲೀನರಾಗಿದ್ದ ಕೊಡವರ ಪ್ರಮುಖ ಕವಿಯಾದ ಅಪ್ಪಚ್ಚಕವಿ ಅವರು ಕೊಡಗಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಕುರಿತು ಪ್ರತ್ಯೇಕವಾಗಿ ಬರೆದಿಲ್ಲವಾದರೂ ಅವರ 'ನಾಲ್ ನಾಟಕ' ಕೃತಿಯಲ್ಲಿ ಕೊಡಗಿನ ಎಲ್ಲ ಜಾತಿ ಸಮುದಾಯಗಳ ನಡುವಿನ ಸಹಬಾಳ್ವೆ, ಸಾಮರಸ್ಯದ ಬದುಕನ್ನು ಮತ್ತು ಒಗ್ಗಟ್ಟನ್ನು ಬಿಂಬಿಸಿದ್ದಾರೆ. ಚಿಣ್ಣಪ್ಪ ಮತ್ತು ಅಪ್ಪಚ್ಚಕವಿ ಇಬ್ಬರೂ ಒಂದೇ ಕಾಲಘಟ್ಟಕ್ಕೆ ಸೇರಿದವರಾದರೂ ಅವರಿಬ್ಬರ ನಡುವಿನ ಚಿಂತನೆಗಳು ಮತ್ತು ಧೋರಣೆಗಳು ಪರಸ್ಪರ ವ್ಯತಿರಿಕ್ತವಾಗಿ ಕಾಣುತ್ತವೆ. ಕೊಡವರ ಸಂಪ್ರದಾಯ ಮತ್ತು ಪಾವಿತ್ರ್ಯತೆಯನ್ನು ವೈಭವೀಕರಿಸುವ ಚಿಣ್ಣಪ್ಪ ಕೊಡವರ ಪ್ರತಿನಿಧಿಯಾದರೆ, ಕೊಡಗು ದೇಶವನ್ನೇ ಸರ್ವಜನಾಂಗದ ಶಾಂತಿಯ ತೋಟವಾಗಿ ಕಾಣುವ ಅಪ್ಪಚ್ಚಕವಿ ಅಖಂಡ ಕೊಡಗಿನ ಪ್ರತಿನಿಧಿಯಾಗಿ ತೋರುತ್ತಾರೆ. ಆ ಮೂಲಕ ಚಿಣ್ಣಪ್ಪನವರ ಮಿತಿಯನ್ನು ಮೀರಿ ಒರ್ವ ನಿಜವಾದ ಕವಿಯಾಗಿ ಅಪ್ಪಚ್ಚಕವಿ ಕಂಗೊಳಿಸುತ್ತಾರೆ. ಬಿ.ಡಿ. ಗಣಪತಿ ಅವರ 'ಕೊಡವಾಸ್ ಆ್ಯಂಡ್ ದೇರ್ ಕಲ್ಚರ್'(೧೯೬೭) ಪ್ರಮುಖ ಕೃತಿಗಳು. ಇವುಗಳಲ್ಲಿ ಕೊಡವರ ಜೀವನಶೈಲಿ, ಸಂಪ್ರದಾಯ, ಆಚರಣೆಗಳ ಬಗೆಗೆ ಹೆಮ್ಮೆಯಿಂದ ಬರೆದಿದ್ದಾರೆ.

ಪ್ರಸಿದ್ಧ ಸಮಾಜಶಾಸ್ತ್ರಜ್ಞರಾದ ಎಂ.ಎನ್. ಶ್ರೀನಿವಾಸ್ ಅವರು ೧೯೫೨ರಲ್ಲಿ ಬರೆದ 'ರಿಲಿಜಿಯನ್ ಅಂಡ್ ಸೊಸೈಟಿ ಎಮಾಂಗ್ ದಿ ಕೂರ್ಗ್ ಆಫ್ ಸೌತ್ ಇಂಡಿಯಾ' ಕೊಡವರ ಸಂಸ್ಕೃತಿಯನ್ನು ಪ್ರಾಮುಖ್ಯತೆಗೆ ತಂದ ಮಹತ್ವದ ಕೃತಿ. ಈ ಕೃತಿಯ ಮೂಲಕ ಸಂಸ್ಕೃತಾನುಕರಣ ಎಂಬ ಪರಿಕಲ್ಪನೆಯನ್ನು ಕೊಟ್ಟರು. ಬುಡಕಟ್ಟು ಸಮುದಾಯದವರಾದ ಕೊಡವರು ವೈದಿಕ ಸಂಸ್ಕೃತಿಯನ್ನು ಅನುಕರಿಸಿ ತಮ್ಮ ಜೀವನಶೈಲಿ, ನಡವಳಿಕೆ, ಸಂಪ್ರದಾಯ ಹಾಗೂ ಆಚರಣೆಗಳನ್ನು ಬದಲಿಸಿಕೊಂಡರು ಎಂಬುದೇ ಈ ಪರಿಕಲ್ಪನೆಯ ಸಾರ. ಈ ಪರಿಕಲ್ಪನೆಯನ್ನು ಕುರಿತು ಸಮಗ್ರವಾಗಿ ಹಲವು ಉದಾಹರಣೆಗಳ ಮೂಲಕ ಈ ಕೃತಿಯಲ್ಲಿ ನಿರೂಪಿಸಿರುವುದನ್ನು ಕಾಣಬಹುದು. ಇಲ್ಲಿನ ಬುಡುಕಟ್ಟು ಜನಾಂಗಗಳ ಮೇಲೆ ಬ್ರಾಹ್ಮಣರ ಸಂಸ್ಕೃತಾನುಕರಣವನ್ನು ಹೇರುವ ಮೂಲಕ ಹಿಂದೂಧರ್ಮದ ತೆಕ್ಕೆಗೆ ಸೇರಿಸಿಕೊಂಡ ಕುರುತು ವಿವರವಾದ ವಿವರಣೆಯನ್ನು ನೀಡುತ್ತಾರೆ. ಅಲ್ಲದೆ, ಕೊಡಗಿನ ಸಾಮಾಜಿಕ ಸಂರಚನೆಯ ಕುರಿತು ಸಮಗ್ರವಾದ ವಿವರಣೆಯನ್ನು ನೀಡುತ್ತಾ, ಒಕ್ಕದ ರಚನೆ, ಊರು, ನಾಡುಗಳು ಹೇಗೆ ವಿಕಾಸ ಹೊಂದಿದವು ಎನ್ನುವುದರ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ. ಕೊಡವರ ವಿವಾಹ ಪದ್ಧತಿ, ಸಂಸ್ಕಾರ ಪದ್ಧತಿ ಮತ್ತು ಹಬ್ಬಹರಿದಿನಗಳ ಬಗೆಗೆ ವಿಶೇಷವಾಗಿ ಉಲ್ಲೇಖಿಸಿರುವುದನ್ನು ಕಾಣಬಹುದು. ಐ.ಮಾ.ಮುತ್ತಣ್ಣ ಅವರು ೧೯೫೩ರಲ್ಲಿ ರಚಿಸಿದ ಎ ಟೈನಿ ಮಾಡೆಲ್ ಸ್ಟೇಟ್ ಆಫ್ ಸೌತ್ ಇಂಡಿಯಾ ಕೃತಿಯಲ್ಲಿ ಕೊಡಗಿನ ರಾಜಕೀಯ ಚರಿತ್ರೆಯ ಜೊತೆಜೊತೆಗೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಂಸ್ಥಿಕ ಮೊದಲಾದ ಚರಿತ್ರೆಗಳನ್ನು ಕೂಡ ಕಟ್ಟಿಕೊಟ್ಟಿದ್ದಾರೆ.

ಕೊಡವರ ಮೂಲದ ಬಗೆಗೆ ಸಮಗ್ರವಾಗಿ ಚರ್ಚಿಸಿದ್ದು, ಹಿಂದಿನ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿದ್ದಾರೆ(ಮುತ್ತಣ್ಣ, ೧೯೫೩: ೨೯). ಈ ಕೃತಿಯಲ್ಲಿ ಕೊಡಗಿನಲ್ಲಿ ಉಂಟಾದ ಶೈಕ್ಷಣಿಕ ಬೆಳವಣಿಗೆಯನ್ನು ಅಂಕಿಅಂಶಗಳ ಸಹಿತ ವಿವರಿಸುತ್ತಾರಲ್ಲದೆ, ಕೊಡಗಿನ ಸಾಮಾಜಿಕ ಸಂರಚನೆಯನ್ನು ವಿವರಿಸುತ್ತಾ ಜಾತಿಗಳು, ಒಕ್ಕಗಳು ಕುರಿತು ವಿವರವಾಗಿ ಬರೆಯುತ್ತಾರೆ. ಕೊಡಗಿನಲ್ಲಿ ಅವಿಭಕ್ತ ಕುಟುಂಬದ ರಚನೆ ಬ್ರಿಟಿಷರ ಆಗಮನದೊಂದಿಗೆ ಹೇಗೆ ಶಿಥಿಲಗೊಳ್ಳುತ್ತಾ ಹೋಯಿತು ಎಂಬುದನ್ನು ವಿವರಿಸುತ್ತಾರೆ. ಕೃತಿಯ ಕೊನೆಯಲ್ಲಿ ಕೊಡಗಿನ ಸಾಂಸ್ಕೃತಿಕ ವಿಶೇಷತೆಯನ್ನು ವಿವರಿಸುತ್ತಾ ಹಬ್ಬ ಹರಿದಿನಗಳು, ಮದುವೆ ಮುಂಜಿ ಹಾಗೂ ಸಂಸ್ಕಾರ ಆಚರಣೆಗಳ ಬಗೆಗೆ ತಿಳಿಸಿದ್ದಾರೆ. ಒಟ್ಟಾರೆ ಈ ಕೃತಿಯು ಒಂದು ಗೆಜೆಟಿಯರ್ ಮಾದರಿಯ ಅನುಕರಣೆಯಂತೆ ಕಂಡರೂ ಕೊಡಗಿನ ಸಮಗ್ರ ಆಯಾಮಗಳನ್ನು ಪರಿಚಯಿಸುವ ನಿಟ್ಟಿನಲ್ಲಿ ಪ್ರಮುಖವಾದ ಕೃತಿಯಾಗಿದೆ.

ಡಿ.ಎನ್. ಕೃಷ್ಣಯ್ಯ ಅವರು ೧೯೭೪ರಲ್ಲಿ ರಚಿಸಿದ 'ಕೊಡಗಿನ ಇತಿಹಾಸ' ಕೃತಿಯು ಕೊಡಗಿನ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಒಂದು ಮಹತ್ವದ ಕೃತಿ. ಕೊಡಗಿನ ಸ್ವಾಭಾವಿಕ ಮೇಲ್ಮೈ ಸ್ವರೂಪವನ್ನು ವಿವರಿಸುವ ಮೂಲಕ ಆರಂಭವಾಗುವ ಈ ಕೃತಿಯು ಪುರಾಣ ಹಾಗೂ ಇತಿಹಾಸ ಪೂರ್ವಕಾಲದ ಸಂಗತಿಗಳನ್ನು ಪರಿಚಯಿಸುವ ಮೂಲಕ ಚಾರಿತ್ರಿಕ ಕಾಲಘಟ್ಟವನ್ನು ಪ್ರವೇಶಿಸುತ್ತದೆ. ಕದಂಬರ ಕಾಲದವರೆಗೆ ಆರಂಭವಾಗುವ ಚಾರಿತ್ರಿಕ ಕಾಲಘಟ್ಟದಲ್ಲಿ ಗಂಗರ ಕಾಲದಿಂದ ಪ್ರಾಮುಖ್ಯತೆ ಪಡೆಯುತ್ತಾ ಹೋಗುವುದನ್ನು ಈ ಕೃತಿಯಲ್ಲಿ ಕಾಣಬಹುದು. ಕೊಡಗಿನಲ್ಲಿಯೇ ಪ್ರವರ್ಧಮಾನಕ್ಕೆ ಬಂದ ಚೆಂಗಾಳ್ವರು, ಕೊಂಗಾಳ್ವರು ಸಮಕಾಲೀನ ಅಧಿರಾಜರಾದ ಚೋಳರು ಮತ್ತು ಹೊಯ್ಸಳರ ನಡುವೆ ಇದ್ದ ಸಂಬಂಧವನ್ನು ಕೃತಿಯು ಪರಿಚಯಿಸುತ್ತದೆ. ಮುಂದೆ ಬರುವ ಹಾಲೇರಿ ರಾಜವಂಶಕ್ಕೆ ಹೆಚ್ಚಿನ ಸ್ಥಳಾವಕಾಶವನ್ನು ಕೃತಿಯಲ್ಲಿ ಕಲ್ಪಿಸಿರುವುದುಂಟು. ಏಕೆಂದರೆ, ಪ್ರಾಚೀನ ಕಾಲದ ಚರಿತ್ರೆಯ ರಚನೆಗೆ ದೊರಕುವ ಆಧಾರಗಳು ಸೀಮಿತವಾಗಿವೆ. ಅದು ಆಧುನಿಕ ಕಾಲಘಟ್ಟಕ್ಕೆ ಬಂದಂತೆಲ್ಲ ಆಕರಗಳ ಲಭ್ಯತೆ ಹೆಚ್ಚಾಗುವುದರಿಂದ ಆಧುನಿಕ ಕಾಲಘಟ್ಟಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆಂದು ಭಾವಿಸಬಹುದು. ಕೊಡಗಿನ ಸಂಸ್ಕೃತಿಯಲ್ಲಿ ಒಂದು ರೀತಿಯ ಬದಲಾವಣೆ ಬಂದಿದ್ದು ವಸಾಹತು ಕಾಲಘಟ್ಟದಲ್ಲಿ. ಬ್ರಿಟಿಷರ ಕಾಲದಲ್ಲಿ ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಕೊಡಗಿನ ಸಮಾಜದಲ್ಲಿ ಸಾಕಷ್ಟು ಪರಿವರ್ತನೆಗಳಾಗಿರುವುದನ್ನು ಅವರು ಚರ್ಚಿಸಿದ್ದಾರೆ. ರಾಜಕುಮಾರಿ ವಿಕ್ಟೋರಿಯಾ ಗೌರಮ್ಮನ ಜೀವನಗಾಥೆಯನ್ನು ಪರಿಚಯಿಸಿದ್ದಾರೆ. ಕೊನೆಯ ಭಾಗದಲ್ಲಿ ಕೊಡಗಿನ ಜನರ ಜೀವನ ಮತ್ತು ಸಂಸ್ಕೃತಿಯನ್ನು ಮತ್ತು ಮೂಲನಿವಾಸಿ ಸಮುದಾಯಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಒಟ್ಟಾರೆ ಈ ಕೃತಿಯು ಕೊಡಗಿನ ರಾಜಕೀಯ ಚರಿತ್ರೆಯ ದೃಷ್ಟಿಯಿಂದ ಮುಖ್ಯವೆನಿಸುತ್ತದೆ(ಕೃಷ್ಣಯ್ಯ, ೧೯೯೫(೧೯೭೪).

ಶ್ರೀ ಸತ್ಯನ್ ಅವರು ಸಂಪಾದಿಸಿದ 'ಮೈಸೂರ್ ಸ್ಟೇಟ್ ಗೆಜೆಟಿಯರ್ ಕೂರ್ಗ್ ಡಿಸ್ಟ್ರಿಕ್ಟ್'(೧೯೬೫) ಹಾಗೂ ಸೂರ್ಯನಾಥ ಕಾಮತ್ ಸಂಪಾದಿಸಿದ 'ಕರ್ನಾಟಕ ಸ್ಟೇಟ್ ಗೆಜೆಟಿಯರ್ ಕೊಡಗು ಡಿಸ್ಟ್ರಿಕ್ಟ್'(೧೯೮೨) ಕೃತಿಗಳು ಕೊಡಗಿನ ಸಮಗ್ರ ಚಿತ್ರಣವನ್ನು ಎಲ್ಲಾ ಆಯಾಮಗಳಿಂದಲೂ ಕಟ್ಟಿಕೊಡುವ ಮಾಹಿತಿಪೂರ್ಣ ವಾಗಿವೆಯಾದರೂ, ವಿಶ್ಲೇಷಣೆಯ ಕೊರತೆಯಿಂದ ಬಳಲಿಸಿವೆ ಎಂದಷ್ಟೆ ಹೇಳಬಹುದು.

ಇತ್ತೀಚಿನ ವಿದ್ವಾಂಸರಾದ ವಿಜಯ್ ಪೂಣಚ್ಚ ತಂಬಂಡ ಅವರ 'ಪಳಮೆ', 'ಆಧುನಿಕ ಕೊಡಗು'(೨೦೦೦), 'ಕಾನ್‌ಫ್ಲಿಕ್ಟ್ ಐಡೆಂಟಿಟಿಸ್ ಇನ್ ಕರ್ನಾಟಕ'(೨೦೦೪) ಕೃತಿಗಳಲ್ಲದೆ ಅವರ ಅಪ್ರಕಟಿತ ಸಂಶೋಧನಾ ಮಹಾಪ್ರಬಂಧ 'ಜಮ್ಮ ಸಿಸ್ಟಂ ಇನ್ ಕೊಡಗು: ಇಟ್ಸ್ ಸೊಷಿಯೋ-ಎಕನಾಮಿಕ್ ಡೈಮೆನ್ಷನ್' ೧೮೦೦-೧೯೮೦(೧೯೯೩) ಪ್ರಮುಖವಾದ ಕೃತಿಗಳು. ಈ ಎಲ್ಲ ಕೃತಿಗಳಲ್ಲಿ ಕೊಡಗಿನ ನಿರ್ಲಕ್ಷಿತ ಸಮುದಾಯಗಳ ಮೇಲೆ ಮೊಟ್ಟಮೊದಲು ಬೆಳಕು ಚೆಲ್ಲುತ್ತಾರೆ. ಕೊಡಗಿನಲ್ಲಿದ್ದ ಗುಲಾಮ ವ್ಯವಸ್ಥೆಯ ಬಗ್ಗೆ ಬರೆಯುತ್ತಾರೆ. ಕೊಡಗರ ಜಮ್ಮ ಭೂಮಿಯ ಸಂಗತಿಯನ್ನು 'ಜಮ್ಮ ಸಿಸ್ಟಂ ಇನ್ ಕೊಡಗು' ಎಂಬ ಅಪ್ರಕಟಿತ ಮಹಾಪ್ರಬಂಧದಲ್ಲಿ ಅತ್ಯಂತ ವಿಶ್ಲೇಷಿಸುವ ಇವರು ಗೌರವ ಮತ್ತು ಪ್ರತಿಷ್ಠೆಯ ಸಂಕೇತವಾದ ಜಮ್ಮ ಹಿಡುವಳಿಯ ಮತ್ತೊಂದು ಮುಖ್ಯ ಆಯಾಮವಾದ ಹಿಟ್ಟಿ ಬಿಟ್ಟಿ ಚಾಕ್ರಿಯನ್ನು ಅನಾವರಣಗೊಳಿಸುತ್ತಾರೆ. 'ಆಧುನಿಕ ಕೊಡಗು' ಕೃತಿಯು ಸಮಕಾಲೀನ ವಿದ್ಯಮಾನಗಳನ್ನು ಕುರಿತಾಗಿದೆ. ಇದರಲ್ಲಿ ವಸಾಹತುಪೂರ್ವ ಮತ್ತು ವಸಾಹತುಕಾಲದ ಭೂ ಹಿಡುವಳಿಗಳ ಬಗ್ಗೆ ಅದರಲ್ಲಿಯೂ ಜಮ್ಮ ಭೂ ಹಿಡುವಳಿಗಳ ವಿವಿಧ ಆಯಾಮಗಳನ್ನು ಚರ್ಚಿಸಲು ಯತ್ನಿಸಿದ್ದಾರೆ. ಭೂಸಂಬಂಧಿ ಪ್ರಶ್ನೆಗಳು, ಭೂಹಿಡುವಳಿ, ಬಿಟ್ಟಿ ದುಡಿಮೆ, ಕೃಷಿ ಕೂಲಿಕಾರ ಸಮುದಾಯ ದಲಿತರ ಪ್ರಶ್ನೆಗಳು, ಅವಿಭಕ್ತ ಕುಟುಂಬ ಪದ್ಧತಿ, ಯಜಮಾನಿಕೆ ಸಂಸ್ಕೃತಿ, ಜನಾಂಗೀಯ ಪ್ರಜ್ಞೆ ಮತ್ತು ಜಾತಿವಾದ ಮೊದಲಾದ ವಿಚಾರಗಳನ್ನು ಚರ್ಚಿಸಿದ್ದಾರೆ. ವಿಜಯ್ ಪೂಣಚ್ಚ ತಂಬಂಡ ಅವರ "ಪಳಮೆ: ಮೌಖಿಕ ಆಕರಗಳು ಕಟ್ಟಿಕೊಡುವ ಕೊಡಗು-ಕನ್ನಡ-ತುಳುನಾಡಿನ ಅಧ್ಯಯನ" ಎನ್ನುವ ಮತ್ತೊಂದು ಕೃತಿಯು ೨೦೦೪ರಲ್ಲಿ ಪ್ರಕಟವಾಗಿದೆ. ಕರ್ನಾಟಕದ ಪ್ರಮುಖ ಮೌಖಿಕ ಪರಂಪರೆಗಳನ್ನು, ಅವುಗಳ ಸ್ವರೂಪ, ಲಕ್ಷಣಗಳನ್ನು ವಿಮರ್ಶಿಸಲು ಯತ್ನಿಸಿದ ಕೃತಿ ಇದು. ಕೊಡಗಿಗೆ ಸಂಬಂಧಿಸಿದ ಅಧ್ಯಾಯವೊಂದರಲ್ಲಿ ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ' ಕೃತಿಯನ್ನು ತೀಕ್ಷ್ಣವಾದ ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

ಕೆ.ಎಂ. ಲೋಕೇಶ್ ಅವರ ಅಪ್ರಕಟಿತ ಸಂಶೋಧನ ಮಹಾಪ್ರಬಂಧ 'ಕಾಫಿ ಪ್ಲಾಂಟೇಷನ್ ಇನ್ ಕೂರ್ಗ್ ಅಂಡರ್ ದಿ ಕೊಲೋನಿಯಲ್ ರೂಲ್ ೧೮೩೪-೧೯೪೭'(ಎ ಸೋಷಿಯೋ-ಎಕನಾಮಿಕ್ ಸ್ಟಡಿ)(೧೯೯೩)ದಲ್ಲಿ ಕಾಫಿಯ ಕೃಷಿ ಹೇಗೆ ಕೊಡಗಿನ ಆರ್ಥಿಕತೆಯನ್ನೇ ಬದಲಿಸಿತು ಮತ್ತು ಕಾಫಿ ಕೃಷಿಯ ವಿಸ್ತರಣೆ ಭೂಪರಿವರ್ತನೆಗೆ ಹೇಗೆ ಕಾರಣವಾಯಿತು ಎಂಬುದನ್ನು

ವಿವರವಾಗಿ ಪರಿಶೀಲಿಸಿದ್ದಾರೆ. ಕೊಡಗಿನ ಇತಿಹಾಸದ ಮಜಲುಗಳನ್ನು ಕುರಿತು ಪಿ.ಟಿ. ಬೋಪಣ್ಣನವರ 'ರೈಸ್ ಆ್ಯಂಡ್ ಫಾಲ್ ಆಫ್ ದಿ ಕೂರ್ಗ್ ಸ್ಟೇಟ್'(೨೦೦೯), ಬೊವ್ವೆರಿಯಂಡ ನಂಜಮ್ಮಚಿಣ್ಣಪ್ಪನವರ 'ಐನ್‌ಮನೆಸ್ ಆಫ್ ಕೊಡಗು'(೨೦೧೪) ಬಹಳ ಮುಖ್ಯವಾದ ಕೃತಿ. ಇವರ 'ಐನ್ ಮನೇಸ್ ಆಫ್ ಕೊಡಗು' ಕೃತಿಯಲ್ಲಿ ಕೊಡಗಿನಾದ್ಯಂತ ಕಂಡು ಬರುವ ಎಲ್ಲ ಸಮುದಾಯಗಳ ಐನ್‌ಮನೆಗಳ ವಿವರಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಕೊಡಗಿನ ಐನ್ ಮನೆಗಳ ಚಾರಿತ್ರಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಶಿಷ್ಟತೆಗಳ ಮೇಲೆ ಬೆಳಕು ಚೆಲ್ಲುವ ಈ ಕೃತಿ ಮಹತ್ವಪೂರ್ಣ ಕೃತಿಯಾಗುತ್ತದೆ. ಇದಕ್ಕೂ ಮೊದಲು ೨೦೦೩ರಲ್ಲಿ ಪ್ರಕಟವಾದ ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ'ಯ ಇಂಗ್ಲಿಷ್ ಅನುವಾದವನ್ನು ನಂಜಮ್ಮಚಿಣ್ಣಪ್ಪನವರು ಮಾಡಿರುವುದು ಕೊಡಗಿನ ಸಂದರ್ಭದಲ್ಲಿ ಬಹಳ ಮಹತ್ವಕಾಂಕ್ಷೆಯ ಕೃತಿಯಾಗಿದೆ.

ಎಂ.ಜಿ. ನಾಗರಾಜ್ ಅವರ 'ಕೊಡಗಿನ ಹಾಲೇರಿ ರಾಜವಂಶವು'(೨೦೧೧), ಕೃತಿಯು ಕೊಡಗಿನ ಅರಸರ ಕಾಲದ ಚರಿತ್ರೆಗಳ ಮೇಲೆ ಬೆಳಕು ಚೆಲ್ಲುವ ಮುಖ್ಯ ಕೃತಿ. ಇದು ಚಾರಿತ್ರಿಕ ಅಧ್ಯಯನದ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ. ಎರಡು ಭಾಗಗಳನ್ನು ಒಳಗೊಂಡ ಈ ಕೃತಿಯಲ್ಲಿ ಕೊಡಗಿನ ಆಗಿನ ಕಾಲದ ಜನಜೀವನ ಮತ್ತು ಸಂಸ್ಕೃತಿಗಳನ್ನು ಅನಾವರಣಗೊಳಿಸಿದ್ದು ಕೊಡಗಿನ ಬಗ್ಗೆ ಅನೇಕ ಮಾಹಿತಿಗಳನ್ನು ಹೊಂದಿರುವ ಕೃತಿಯಾಗಿದೆ. ಕಾವೇರಿ ಪೊನ್ನಪ್ಪ ಅವರ 'ವೆನಿಷಿಂಗ್ ಕೊಡವಾಸ್'(೨೦೧೩), ಇತ್ತೀಚೆಗೆ ಹೊರಬಂದಿರುವ ಗಮನ ಸೆಳೆಯುವ ಕೃತಿ. ಕೊಡಗಿನ ಸಾಂಸ್ಕೃತಿಕ ವೈವಿಧ್ಯತೆಗಳ ವಿವರಗಳು ಹಾಗೂ ವರ್ಣರಂಜಿತ ಚಿತ್ರಗಳನ್ನೊಳಗೊಂಡ ಈ ಕೃತಿ ಕೂಡ ಅಧ್ಯಯನದ ಸಂದರ್ಭದಲ್ಲಿ ಮುಖ್ಯವಾಗಿದೆ. ಅಂದರೆ ಕೊಡಗು ಇಂದಿಗೂ ಕೂಡ ಇತಿಹಾಸಕಾರ, ಸಮಾಜಶಾಸ್ತ್ರಜ್ಞರ ಹಾಗೂ ಆಸಕ್ತ ಸಂಶೋಧಕರ ಆಕರ್ಷಣೆಯನ್ನು ಉಳಿಸಿಕೊಂಡಿದೆ.

ಕೊಡಗಿನ ಇತಿಹಾಸ ರಚನೆಯಲ್ಲಿ ಕಂಡುಬರುವ ಮಹತ್ವದ ಕೃತಿಗಳ ಜೊತೆ ಜೊತೆಗೆ ಕೊಡಗಿನ ಚರಿತ್ರೆಯ ಕುರಿತಾಗಿ ಪ್ರಕಟವಾದ ಅನೇಕ ಲೇಖನಗಳನ್ನು , ಅಪ್ರಕಟಿತ ದಾಖಲೆಗಳನ್ನು, ಅಪ್ರಕಟಿತ ಎಂ.ಫಿಲ್. ಮತ್ತು ಪಿಎಚ್.ಡಿ. ಮಹಾಪ್ರಬಂಧಗಳನ್ನು ಅಭ್ಯಾಸಿಸುವ ಪ್ರಯತ್ನ ಮಾಡಲಾಗಿದೆ. ಬೆಂಗಳೂರು, ಕೊಡಗು ಮತ್ತು ಮದ್ರಾಸ್ ಪತ್ರಗಾರಗಳಲ್ಲಿನ ಆಕರಗಳನ್ನು ಪ್ರಸ್ತುತ ಮಹಾಪ್ರಬಂಧದ ಬರವಣಿಗೆಯಲ್ಲಿ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಇದಲ್ಲದೆ ಈ ಮಹಾಪ್ರಬಂಧಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯವನ್ನು ಕೊಡಗಿನಲ್ಲಿ ಮತ್ತು ಇತರೆಡೆಗಳಲ್ಲಿ ಕೈಗೊಳ್ಳಲಾಗಿದೆ. ಅವುಗಳಿಂದ ದೊರೆತ ಮಾಹಿತಿಗಳನ್ನು ಮಹಾಪ್ರಬಂಧದುದ್ದಕ್ಕೂ ಬಳಸಿಕೊಳ್ಳಲಾಗಿದೆ. ಈ ಬಗೆಯ ಮೌಖಿಕ ಆಕರಗಳು ಪ್ರಸ್ತುತ ಮಹಾಪ್ರಬಂಧದಲ್ಲಿ ಉಲ್ಲೇಖಿಸಿರುವ ಅನೇಕ ಘಟನಾವಳಿಗಳನ್ನು ಮರುರೂಪಿಸಲು ಸಹಾಯಕವಾಗಿದೆ.

**ಕೊನೆ ಟಿಪ್ಪಣಿಗಳು**

೧. **ಕೃಷಿಕೇಂದ್ರಿತ ಸಮುದಾಯಗಳು** - ಕೊಡಗಿನಲ್ಲಿ ಭೂಹಿಡುವಳಿಗಳನ್ನು ಹೊಂದಿದ್ದ ಕೊಡವ, ಹೆಗ್ಗಡೆ, ಅಮ್ಮಕೊಡವ, ಗೌಡ, ಕೊಡವ ನಾಯರ್ ಮೊದಲಾದ ಸಮುದಾಯಗಳು.

೨. **ಕುಶಲಕರ್ಮಿ ಸಮುದಾಯಗಳು** - ಕೊಡಗಿನ ಸ್ತರವಿನ್ಯಾಸದಲ್ಲಿ ಮಧ್ಯಮ ತರಗತಿಯವರಾಗಿದ್ದು, ವೃತ್ತಿಪರ ಅಥವಾ ಕುಶಲಕರ್ಮಿ ವರ್ಗವಾಗಿದೆ. ಐರಿ, ಗೊಲ್ಲ, ಕೋಯವ, ಕೋಲಯ, ಬಣ್ಣ, ಪಣಿಕ, ಮಲೆಯ ಮಡಿವಾಳ, ನಾಯಿಂದ ಮೊದಲಾದ ಸಮುದಾಯಗಳು ಈ ವರ್ಗಕ್ಕೆ ಸೇರುತ್ತವೆ. ಇವರು ವೃತ್ತಿ ಪರ ಮಾತ್ರವಲ್ಲದೆ, ಭೂಹಿಡುವಳಿಗಳನ್ನೂ ಹೊಂದಿರುತ್ತಾರೆ.

೩. **ಕೃಷಿಕಾರ್ಮಿಕ ಸಮುದಾಯಗಳು** - ಕೊಡಗಿನ ಸಾಮಾಜಿಕ ಸ್ತರವಿನ್ಯಾಸದಲ್ಲಿನ ತಳವರ್ಗ ಇದು. ಕೆಂಬಟ್ಟಿ, ಮಾರಂಗಿ, ಮೇಧ, ಎರವ, ಕುರುಬ ಮೊದಲಾದ ಸಮುದಾಯಗಳನ್ನು ಈ ವರ್ಗದಲ್ಲಿ ಗುರುತಿಸಬಹುದು.

೪. **ಒಕ್ಕ** - ಕೊಡಗಿನಲ್ಲಿ ಕಂಡು ಬರುವ 'ಅವಿಭಕ್ತ ಕುಟುಂಬ'.

೫. **ಅರಮನೆ ಚಾಕ್ರಿ** - ವಸಾಹತುಪೂರ್ವದ ಲಿಂಗಾಯತ ಅರಸರ ಕಾಲದಲ್ಲಿ ಕೊಡಗಿನ ಕೃಷಿಕೇಂದ್ರಿತ ಸಮುದಾಯಗಳು ಅರಸನ ಅರಮನೆಯ ಕೆಲಸವನ್ನು(ಸರ್ಕಾರಿ ಕೆಲಸ) ತಿಂಗಳಲ್ಲಿ ೧೫ ದಿನ ಮಾಡಬೇಕಾಗಿತ್ತು. ಈ ವ್ಯವಸ್ಥೆಗೂ ಜಮ್ಮ ಭೂಹಿಡುವಳಿಗಳಿಗೂ ಸಂಬಂಧವಿದೆ.

೬. **ತರವಾಡು** - ಕೇರಳದ ನಾಯರ್ ಸಮುದಾಯದ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ 'ಮನೆ'. ಒಂದು ಕಾಲಕ್ಕೆ ಅವಿಭಕ್ತ ಕುಟುಂಬ.

೭. **ಇಲ್ಲಂ** - ಕೇರಳದ ನಂಬೂದ್ರಿ ಸಮುದಾಯದ ಪಿತೃಪ್ರಧಾನ ಅವಿಭಕ್ತ ಕುಟುಂಬದ ಮನೆ.

೮. **ಜಮ್ಮ, ಜಹಗೀರು, ಉಂಬಳಿ** - ಕೊಡಗಿನ ಭೂಹಿಡುವಳಿಗಳು.

೯. **ಐನ್‌ಮನೆ** - ಕೊಡಗಿನ ಒಕ್ಕದ ಅಥವಾ ಕೂಡುಕುಟುಂಬದ ಪ್ರಧಾನವಾದ ಅಥವಾ ಮೂಲದ ಮನೆ.

೧೦. **ಕೂರ್ಗ್ ಪ್ರಾಪರ್** - ಬ್ರಿಟಿಷರು ಕೊಡಗಿನ ಕೊಡಗು ಭಾಷಿಕರು ವಾಸ ಇದ್ದ ಪ್ರದೇಶವನ್ನು ಕೂರ್ಗ್ ಪ್ರಾಪರ್ ಎಂದು ಕರೆದರು. ಇದನ್ನು ಸಾಂಸ್ಕೃತಿಕ ಔನತ್ಯದ ತಾಣ ಎನ್ನಬಹುದು.

೧೧. **ದೇಶಕಟ್ಟ್‌ಪಾಟ್** - ಕೊಡಗಿನ ಜಾನಪದ ಹಾಡು. ಈ ಹಾಡಿನಲ್ಲಿ ಪೂರ್ವದ ೩೫ ನಾಡುಗಳು ಸೇರಿ ದೇಶವೊಂದು ರಚನೆಯಾದ ಬಗೆಗಿನ ವಿವರಗಳು ಬರುತ್ತವೆ.

೧೨. **ಕಡಂಗಗಳು** - ಕೊಡಗಿನಾದ್ಯಂತ ಎಲ್ಲೆಗಳ ರೂಪದಲ್ಲಿ, ಮೇರೆಗಳಾಗಿ ಕಂಡು ಬರುವ ಕಂದಕಗಳೇ ಕಡಂಗಗಳಾಗಿವೆ.



ಅಧ್ಯಾಯ : ಎರಡು

# ಒಕ್ಕ ಅವಿಭಕ್ತ ಕುಟುಂಬ ಪದ್ಧತಿ: ಸ್ವರೂಪ ಮತ್ತು ವಿವರಣೆ

೨.೧. ಒಕ್ಕಗಳ ಉಗಮ ಮತ್ತು ವಿಕಾಸ

೨.೨. ಒಕ್ಕಗಳ ಸ್ವರೂಪ ಮತ್ತು ಬೆಳವಣಿಗೆ

೨.೩. ಒಕ್ಕದ ಲಕ್ಷಣಗಳು

೨.೩.೧. ಕೂಡುಕುಟುಂಬ

೨.೩.೨. ಐನ್‌ಮನೆಗಳು

೨.೩.೩. ಭೂಹಿಡುವಳಿಗಳು ಮತ್ತು ಒಕ್ಕ

೨.೩.೪. ಕೈಮಡಗಳು

೨.೩.೫. ವಿವಾಹ ಪದ್ಧತಿಗಳು

೨.೩.೬. ಕೃಷಿ ಮತ್ತು ಸಾರ್ವತ್ರಿಕ ಹಬ್ಬಗಳು

೨.೩.೭. ಧಾರ್ಮಿಕ ಆಚರಣೆಗಳು ಮತ್ತು ಒಕ್ಕ

೨.೪. ಚಾರಿತ್ರಿಕ ಸ್ಥಿತ್ಯಂತರದ ಘಟ್ಟಗಳಲ್ಲಿ ಒಕ್ಕಗಳು

೨.೫. ಸ್ವಾತಂತ್ರ್ಯಾನಂತರದ ಕಾಲಘಟ್ಟ (ಆಧುನಿಕ)

### ಅಧ್ಯಾಯ : ಎರಡು

# ಒಕ್ಕ ಅವಿಭಕ್ತ ಕುಟುಂಬ ಪದ್ಧತಿ : ಸ್ವರೂಪ ಮತ್ತು ವಿವರಣೆ

**ಕು**ಟುಂಬ ಎಂಬುದು ಜಗತ್ತಿನ ಯಾವುದೇ ಸಂಸ್ಕೃತಿ ಅಥವಾ ನಾಗರಿಕತೆಯ ಮೂಲ ಧಾತು. ಒಂದು ಸಂಸ್ಕೃತಿ ಅಥವಾ ನಾಗರಿಕತೆಯ ಮುಂದುವರಿಕೆಗೆ ಮತ್ತು ಊರ್ಜಿತತೆಗೆ ಕುಟುಂಬ ಕಾರಣವಾಗಿದೆ. ಕುಟುಂಬವಿಲ್ಲದೆ ಸಂಸ್ಕೃತಿ ಮತ್ತು ನಾಗರಿಕತೆಯ ಭಾಗವಾದ ಸಮಾಜವಿಲ್ಲ. ಈ ಸಮಾಜದ ಕಟ್ಟಕಡೆಯ ಘಟಕವಾಗಿ ಕುಟುಂಬ ಕಂಡುಬರುತ್ತದೆ. ಇಂತಹ ಕುಟುಂಬಗಳ ಸ್ವರೂಪವು ಅದರ ಸಮಾಜ, ಸಂಸ್ಕೃತಿ, ನಾಗರಿಕತೆಗಳ ಅಂಶಗಳನ್ನು ಆಧರಿಸಿ ರಚನೆಗೊಂಡಿರುತ್ತದೆ. ಆದರೆ ಸಮಾಜ, ಸಂಸ್ಕೃತಿ ಮತ್ತು ನಾಗರಿಕತೆಗಳು ಚಲನಶೀಲವಾದವುಗಳು. ಇವುಗಳು ಕಾಲಕಾಲಕ್ಕೆ ತಮ್ಮ ಸ್ವರೂಪದಲ್ಲಿ ಬದಲಾವಣೆಯನ್ನು ಹೊಂದುತ್ತಾ ಹೋಗುತ್ತಿರುತ್ತವೆ ಯಾದರೂ ಬದಲಾವಣೆಯ ವೇಗದಲ್ಲಿ ಭಿನ್ನತೆಗಳಿರುತ್ತವೆ. ಒಂದು ಸಮಾಜದ, ಸಂಸ್ಕೃತಿಯ ಅಥವಾ ನಾಗರಿಕತೆಯ ಬದಲಾವಣೆಯು ಅವುಗಳು ಒಳಗೊಂಡಿರುವ ಕುಟುಂಬದ ಬದಲಾವಣೆಗಳ ಮೇಲೆ ನಿಂತಿರುತ್ತದೆ. ಅಂದಮೇಲೆ ಕುಟುಂಬಗಳ ಸ್ವರೂಪವು ಅವುಗಳನ್ನು ಒಳಗೊಂಡಿರುವ ಸಮಾಜ, ಸಂಸ್ಕೃತಿ ಮತ್ತು ನಾಗರಿಕತೆಯ ಸ್ವರೂಪವನ್ನೂ ನಿರ್ಧರಿಸುತ್ತವೆ.

ಈ ಹಿನ್ನೆಲೆಯಲ್ಲಿ ಒಕ್ಕಗಳೆನ್ನಲಾಗುವ ಕೊಡಗಿನ ಅವಿಭಕ್ತ ಕುಟುಂಬಗಳ ಸ್ವರೂಪವನ್ನು ಗಮನಿಸುವುದರ ಮೂಲಕ ಕೊಡಗಿನ ಸಮಾಜ, ಸಂಸ್ಕೃತಿ ಮತ್ತು ನಾಗರಿಕತೆಯನ್ನು ಅರ್ಥ ಮಾಡಿಕೊಳ್ಳಬಹುದು. ಮೇಲೆ ಹೇಳಿದಂತೆ ಕುಟುಂಬದೊಳಗಿನ ಬದಲಾವಣೆಯು ಸಮಾಜದ ಬದಲಾವಣೆಯ ದಿಕ್ಸೂಚಿಯಾಗಿರುತ್ತದೆ. ಕೊಡಗಿನ ಒಕ್ಕಗಳ ಬಗೆಗೆ ೧೯ನೆಯ ಶತಮಾನದ ಆರಂಭದಿಂದ ಇಂದಿನವರೆಗೂ ಹಲವಾರು ಮಂದಿ ವಿದ್ವಾಂಸರು ಕೊಡಗಿನ ಸಮಾಜ ಮತ್ತು ಸಂಸ್ಕೃತಿಯನ್ನು ವಿವರಿಸುವ ಸಂದರ್ಭದಲ್ಲಿ ಹಲವು ಕುತೂಹಲಕಾರಿ ನೋಟಗಳನ್ನು ಕಟ್ಟಿಕೊಟ್ಟಿದ್ದಾರೆ. (ಮೋಗ್ಲಿಂಗ್ ೧೮೫೫), (ರಿಕ್ತರ್ ೧೮೭೦), (ರೈಸ್ ೧೮೭೮), (ಚಿಣ್ಣಪ್ಪ ೧೯೨೪), (ಶ್ರೀನಿವಾಸ್ ೧೯೫೨), (ಮುತ್ತಣ್ಣ ೧೯೫೩), (ಮುತ್ತಣ್ಣ ೧೯೫೩), (ಗಣಪತಿ ೧೯೬೭), (ಕೃಷ್ಣಯ್ಯ ೧೯೭೪), (ಪೊನ್ನಮ್ಮ, ಕಾರಿಯಪ್ಪ ೧೯೮೧), (ತಂಬಂಡ ೨೦೦೦, ೨೦೦೪).

(ನಂಜಮ್ಮ, ಚಿಣ್ಣಪ್ಪ ೨೦೧೪) ಈ ವಿವರಣೆಗಳನ್ನು ಅವಲೋಕಿಸುವ ಮೂಲಕವೇ ಕೊಡಗಿನ ಒಕ್ಕಗಳ ಸ್ವರೂಪ ಮತ್ತು ಲಕ್ಷಣಗಳನ್ನೂ, ಅಲ್ಲಿ ಆಗಿರಬಹುದಾದ ಬದಲಾವಣೆಗಳನ್ನೂ ಗುರುತಿಸಬಹುದು. ವಿದೇಶಿ ಬರಹಗಾರರಾದ ರಿಕ್ತರ್, ಮೋಗ್ಲಿಂಗ್, ರೈಸ್ ಮೊದಲಾದವರು ಹಾಗೂ ದೇಶಿ ಬರಹಗಾರರಾದ ನಡಿಕೇರಿಯಂಡ ಚಿಣ್ಣಪ್ಪ, ಎಂ.ಎನ್ ಶ್ರೀನಿವಾಸ್, ಐ.ಮಾ.ಮುತ್ತಣ್ಣ, ಬಿ.ಡಿ. ಗಣಪತಿ, ಡಿ.ಎನ್. ಕೃಷ್ಣಯ್ಯ, ಎಂ.ಪಿ. ಕಾರ್ಯಪ್ಪ ಮತ್ತು ಪೊನ್ನಮ್ಮ ಕಾರ್ಯಪ್ಪ ಹಾಗೂ ತೀರ ಇತ್ತೀಚಿನ ಬರಹಗಾರರಾದ ಬೊವ್ವೆರಿಯಂಡ ನಂಜಮ್ಮ ಚಿಣ್ಣಪ್ಪ ಮತ್ತು ಕಾವೇರಿ ಪೊನ್ನಪ್ಪ ಇವರೆಲ್ಲರ ಬರಹಗಳಲ್ಲಿ ಕೊಡಗಿನ ಸಂಸ್ಕೃತಿಯನ್ನು ಕ್ರೋಡೀಕರಿಸಿ ಪ್ರಬಲ ಸಮುದಾಯವಾದ ಕೊಡವರದೇ ಸಂಸ್ಕೃತಿ ಎಂಬಂತೆ ಬಿಂಬಿಸಲಾಗಿದೆ. ಇದಕ್ಕೆ ವ್ಯತಿರಿಕ್ತವಾದ ಚಿಂತನೆ ಹಾಗೂ ಆಲೋಚನಾ ಕ್ರಮಗಳನ್ನೊಳಗೊಂಡ ಬರಹಗಳು ಚರಿತ್ರೆಕಾರರಾದ ತಂಬಂಡ ವಿಜಯ್ ಪೂಣಚ್ಚ ಅವರ ಕೃತಿಗಳಲ್ಲಿ ಕಾಣುತ್ತದೆ. ಅವಿಭಕ್ತ ಕುಟುಂಬಗಳ ಸ್ವರೂಪ– ಸಂಸ್ಕೃತಿಗಳ ಭಿನ್ನ ಮಜಲುಗಳನ್ನು ತಿಳಿದುಕೊಳ್ಳಲು ಮೇಲೆ ಹೆಸರಿಸಿದ ಎರಡು ಆಲೋಚನಾ ಮಾರ್ಗಗಳ ಬರಹಗಾರರ ಅಭಿಪ್ರಾಯಗಳು ಬಹಳ ಮುಖ್ಯವಾಗುತ್ತದೆ.

## ೨.೧. ಒಕ್ಕಗಳ ಉಗಮ ಮತ್ತು ವಿಕಾಸ

ಒಕ್ಕಗಳನ್ನು ಕುರಿತು ಅಧ್ಯಯನ ಕೈಗೊಳ್ಳುವ ಮುನ್ನ ಒಕ್ಕಗಳ ರಚನೆಗೂ ಪೂರ್ವದಲ್ಲಿ ಕೊಡಗಿನಲ್ಲಿದ್ದ ಸನ್ನಿವೇಶವನ್ನು ಅರ್ಥ ಮಾಡಿಕೊಳ್ಳುವುದು ಸಮಂಜಸವಾಗಿದೆ. ಬಾಚರಣಿಯಂಡ ಪಿ. ಅಪ್ಪಣ್ಣ ಅವರು ಕೊಡಗಿನ ಮೂಲನಿವಾಸಿಗಳೆಂದು ೨೧ ಸಮುದಾಯಗಳನ್ನು ಗುರುತಿಸುತ್ತಾರೆ (ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ೨೦೧೦, ಕೊಡವ ಭಾಷಿಕ ಮೂಲನಿವಾಸಿಯ, ಮುನ್ನುಡಿ ಭಾಗದಲ್ಲಿ). ಕೊಡಗಿನ ಮೂಲನಿವಾಸಿಗಳಲಾಗುತ್ತಿರುವ ಕೊಡಗು ಭಾಷಿಕರಾದ ಐರಿ, ಅಮ್ಮಕೊಡಗ, ಬಾಣೆಯ, ಬಣ್ಣ, ಬೂಣೆಪಟ್ಟ, ಗೊಲ್ಲ, ಹೆಗ್ಗಡೆ, ನಾಯಿಂದ, ಕಣೆಯ, ಕೊಡವ, ಕೋಲೆಯ, ಕೋಯವ, ಮಡಿವಾಳ, ಮಲೆಯ, ಮುಕ್ಕಾಟಿ, ಪಣಿಕ, ಮಲೆಯ, ಕೆಂಬಟ್ಟಿ, ಕುಡಿಯ, ಕಾಪಾಳ, ಮೇಧ ಮೊದಲಾದ ೨೧ ಸಮುದಾಯಗಳು ಹಾಗೂ ಮಲಯಾಳಂ ಮಾತಾಡುವ ಜಮ್ಮ ಮಾಪಿಳ್ಳೆ ಸಮುದಾಯ ಹಾಗೂ ಅರೆಭಾಷೆ ಕನ್ನಡ ಮಾತನಾಡುವ ಗೌಡ ಸಮುದಾಯಗಳನ್ನು ಅಧ್ಯಯನದ ದೃಷ್ಟಿಯಿಂದ ಪರಿಗಣಿಸಲಾಗಿದೆ. ಹಾಗೆಯೆ ಕೃಷಿ ಕಾರ್ಮಿಕ ಸಮುದಾಯಗಳ ಎರವ ಭಾಷೆ ಮಾತಾಡುವ ಎರವರು, ಪ್ರಾದೇಶಿಕ ಕನ್ನಡ ಮಾತಾಡುವ ಕುರುಬರು, ಮಾರಂಗಿಗಳು, ಕುಕ್ಕ ಹೊಲೆಯರು ಮೊದಲಾದವರನ್ನು ಗುರುತಿಸಬಹುದು, ಈ ಮೇಲಿನ ಎಲ್ಲ ಸಮುದಾಯಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವುಗಳನ್ನು ಒಟ್ಟಾರೆಯಾಗಿ ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು.

೧. ಕೃಷಿ ಕೇಂದ್ರಿತ ಸಮುದಾಯಗಳು

೨. ಕುಶಲ ಕರ್ಮಿಸಮುದಾಯಗಳು ಮತ್ತು

೩. ಕೃಷಿ ಕಾರ್ಮಿಕ ಸಮುದಾಯಗಳು.

ಈ ಮೂರು ವರ್ಗಗಳೂ ಪ್ರಸ್ತುತ ಪ್ರಬಂಧದ ರಚನೆಯಲ್ಲಿ ಮುಖ್ಯವಾಗುತ್ತದೆ, ಈ ಮೂರು ವರ್ಗಗಳೂ ವಸಾಹತುಪೂರ್ವ ಕಾಲಘಟ್ಟದ ಗ್ರಾಮ ರಚನೆಯಲ್ಲಿ ಬಹಳ ಪ್ರಮುಖ ಪಾತ್ರವಹಿಸುವ ಅಂಗಗಳಾಗಿವೆ. ಈ ಎಲ್ಲ ಸಮುದಾಯಗಳಲ್ಲಿ ಕೃಷಿಕಾರ್ಮಿಕ ಸಮುದಾಯಗಳಲ್ಲಿ ಒಂದಾದ ಕೆಂಬಟ್ಟಿ[೧] ಸಮುದಾಯವು ಕೊಡಗಿನ ಸಂಸ್ಕೃತಿ ಮತ್ತು ಸಂಪ್ರದಾಯಗಳ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ ಮತ್ತು ಕೊಡಗಿನ ಇತರ ಎಲ್ಲ ಸಮುದಾಯಗಳಿಗಿಂತ ಪುರಾತನವಾದ ಸಮುದಾಯವಾಗಿದ್ದು, ಈ ಸಮುದಾಯದ ಭಾಷೆ, ಸಂಸ್ಕೃತಿ ಸಂಪ್ರದಾಯಗಳು ಕೊಡಗಿನಲ್ಲಿ ಇತರ ಸಮುದಾಯಗಳಿಂದ ಅನುಕರಿಸಲ್ಪಟ್ಟವು ಎಂಬ ಮಾತಿದೆ.

ಕೆಂಬಟ್ಟಿ ಹೆಸರಿನ ನಿಷ್ಪತ್ತಿಯನ್ನು ಹೀಗೆ ಗುರುತಿಸುತ್ತಾರೆ. ಕೊಡಗಿನ ರಾಜರ ಆಳ್ವಿಕೆಯ ಕಾಲದಲ್ಲಿ ಹೊಲೆಯ ಸಮುದಾಯದ ಯುವಕಪಾಡಿ ಗ್ರಾಮದ ಅಣ್ಣಿಕುಟ್ಟಡ[೨] ಒಕ್ಕದ 'ಕುಟ್ಟ' ಎಂಬ ಯುವಕನು ಕೆಂಬತ್ತಿ(ಕೆಂಪು ಭತ್ತ)ಯನ್ನು ರಾಜನಿಗೆ ಕೊಟ್ಟ ಕಾರಣಕ್ಕಾಗಿ ಈ ಸಮುದಾಯ ದವರಿಗೆ ಕೆಂಬತ್ತಿ>ಕೆಂಬಟ್ಟಿ ಎಂಬ ಹೆಸರು ಬಂದಿರುವುದಾಗಿ ತಿಳಿದುಬರುತ್ತದೆ(ನಾಗರಾಜ್ ೧೯೯೩:೫೩). ಆದರೆ, 'ಕೆಂಬಟ್ಟಿ ಹೊಲೆಯರ ಸಂಸ್ಕೃತಿ' ಕೃತಿಯಲ್ಲಿ ಎಂ.ಜಿ. ನಾಗರಾಜ್ ಅವರು ಹೀಗೆ ಹೇಳುತ್ತಾರೆ: ಕೆಂಬಟ್ಟಿ ಎಂಬ ಹೆಸರು ಕಾವೇರಮ್ಮ ಅಗಸ್ತ್ಯನ ಕಮಂಡಲದ ಕಟ್ಟಿನಿಂದ ಹರಿದು ಹೋಗುವಾಗ ಕೊಟ್ಟದ್ದು ಎಂದು ಆ ಜನಾಂಗದವರ ಅಭಿಪ್ರಾಯ ಎನ್ನುತ್ತಾರೆ. ಮುಂದುವರಿದು ದೊಡ್ಡವೀರಪ್ಪನ ಕಾಲದಲ್ಲಿ ನಾಪೋಕ್ಲುವಿನ ಅಣ್ಣೆಕುಟ್ಟಡ ಕುಟ್ಟ ಎಂಬುವವನು ಅವನ ಬಳಿ ಅಧಿಕಾರಿಯಾಗಿದ್ದನಂತೆ. ಇವನೋ ಅಥವಾ ಹಿಂದಿನ ಒಬ್ಬ ಕೆಂಬಟ್ಟಿ ಜನಾಂಗದ ಮನುಷ್ಯನೋ ರಾಜನಿಗೆ ಕೆಂಪುಭತ್ತದ ಬೆಳೆಯನ್ನು ಹೆಚ್ಚುವರಿಯಾಗಿ ಬೆಳೆಯಲು ಸಲಹೆ ನೀಡಿದ. ಅದರಂತೆ ಬೆಳೆದು ಬೆಳೆ ಹುಲುಸಾಯಿತಂತೆ. ಆಗ ರಾಜ ಅವನ ಪಂಗಡದ ಜನರಿಗೆಲ್ಲ ಕೆಂಬಟ್ಟಿ ಎಂಬ ಹೆಸರು ನೀಡಿದನಂತೆ ಎಂದು ದಾಖಲಿಸುತ್ತಾರೆ(ನಾಗರಾಜ್, ೧೯೯೩: ೫೩). (ಲಲಿತ, ೨೦೧೫:೬೬). ಇವರ ಮುಖ್ಯ ಕುಲದೇವತೆ ಪನ್ನಂಗಾಲ ದೇವತೆ. ಇವಳ ಹಬ್ಬದಲ್ಲಿಯೂ ಉತ್ಸವ ಮೂರ್ತಿ ಅಥವಾ ಬಿಂಬವನ್ನು ಹೊರುವವರು ಕಡ್ಡಾಯವಾಗಿ ಕೆಂಪುವಸ್ತ್ರ ಅಥವಾ ಬಟ್ಟೆಯನ್ನು ಧರಿಸುತ್ತಾರೆ. ಇದು ಹಿಂದಿನಿಂದ ನಡೆದು ಬಂದದ್ದು. ಈ ಸಂಪ್ರದಾಯದ ಹಿನ್ನಲೆಯಲ್ಲಿ 'ಕೆಂಬಟ್ಟೆ' ಎಂಬ ಹೆಸರು ಇವರಿಗೆ ಬಂದಿರಬಹುದು ಎಂಬ ಅಭಿಪ್ರಾಯವೂ ಇದೆ(ಕನ್ನಡ ವಿಷಯ ವಿಶ್ವಕೋಶ: ೩೪೧). ಈ ಜನರ ಮಾತೃಭಾಷೆಯು ಕೊಡಗು ಭಾಷೆ ಆಗಿದೆ. ಕೆಂಬಟ್ಟಿ ಸಮುದಾಯವನ್ನು ಭೂಮಿಜಮ್ಮದಾಳುಗಳು[೩] ಅಥವಾ ಒಕ್ಕಲುಜಮ್ಮದಾಳು[೪] ಗುರುತಿಸುತ್ತಿದ್ದರು (ತಂಬಂಡ, ೨೦೦೦: ೪೫). ಇತಿಹಾಸ ಆರಂಭಕಾಲದಲ್ಲಿ ಹೊರಗಿನಿಂದ ಕೊಡಗಿನ ಪರಿಸರಕ್ಕೆ ವಲಸೆ ಬಂದ ಪ್ರಬಲ ಸಮುದಾಯಗಳು ರಾಜಕೀಯವಾಗಿ ಕೆಂಬಟ್ಟಿಗಳ ಮೇಲೆ ಮೇಲುಗೈ ಸಾಧಿಸಿ, ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಂತೆ ಕಾಣುತ್ತದೆ. ದುರ್ಬಲರಾದ ಕೆಂಬಟ್ಟಿಯವರು ರಾಜಕೀಯವಾಗಿ ಸೋತರೂ, ಮೇಲುಗೈ ಸಾಧಿಸಿದ ಪ್ರಬಲ

ಸಮುದಾಯಗಳ ಮೇಲೆ ಸಾಂಸ್ಕೃತಿಕ ಹಿರಿತನವನ್ನು 'ಪನ್ನಂಗಾಲತಮ್ಮೆ'[೫] ಮುಂತಾದ ಕೆಲವು ಹಬ್ಬ, ಸಂಪ್ರದಾಯ, ವಿಧಿಗಳಲ್ಲಿ ಗಮನಿಸಬಹುದು. ನಂತರದ ದಿನಗಳಲ್ಲಿ ಕೆಂಬಟ್ಟಿ ಸಮುದಾಯವು ಕೊಡಗಿನಲ್ಲಿ ಬಹುಸಂಖ್ಯಾತ ಸಮುದಾಯವಾದ ಕೊಡವರು ಮತ್ತು ಉಳಿದ ಅಲ್ಪಸಂಖ್ಯಾತ ಕೊಡಗು ಭಾಷಿಕ ಸಮುದಾಯಗಳು ಆಚರಿಸುತ್ತಿರುವ ಸಂಪ್ರದಾಯ ವಿಧಿವಿಧಾನಗಳಲ್ಲಿ ಬಹಳಷ್ಟು ಸಾಮ್ಯತೆ ಕಂಡುಬರುವುದನ್ನು ನೋಡಬಹುದು.

ಹೊರಗಿನ ಸಮುದಾಯಗಳು ಕೊಡಗಿನ ಪರಿಸರಕ್ಕೆ ಬರುವವರೆಗೂ ಕಡಿಮೆ ಪ್ರಮಾಣದಲ್ಲಿ ಇದ್ದಿರಬಹುದಾದ ಕೆಂಬಟ್ಟಿ ಸಮುದಾಯದವರು ಭೂಮಿ ಮತ್ತು ಒಡೆತನಕ್ಕೆ ಹೆಚ್ಚಿನ ಆದ್ಯತೆ ನೀಡಿದಂತೆ ಕಾಣುವುದಿಲ್ಲ. ಮುಗ್ಧರೂ, ಭಾವಜೀವಿಗಳೂ ಆದ ಇವರು ಸಾಂಸ್ಕೃತಿಕವಾಗಿ ಪ್ರಬಲವಾಗಿದ್ದಂತೆ ಕಾಣುತ್ತದೆ. ಇದರಿಂದಾಗಿ ಹೊರಗಿನಿಂದ ಬಂದ ಸಮುದಾಯಗಳು ಸುಲಭವಾಗಿ ಕೊಡಗಿನ ಪರಿಸರದಲ್ಲಿ ಭೂ ಒಡೆತನವನ್ನು ಸಾಧಿಸುವ ಮೂಲಕ ಇವರ ಮೇಲೆ ರಾಜಕೀಯ ಮತ್ತು ಆರ್ಥಿಕ ಮೇಲುಗೈ ಸಾಧಿಸಲು ಸಾಧ್ಯವಾಯಿತು. ಆದರೆ, ಇವರಿಗೆ ಕೆಂಬಟ್ಟಿಗಳ ಸಂಸ್ಕೃತಿಯ ಮೇಲೆ ಮೇಲುಗೈ ಸಾಧಿಸಲು ಸಾಧ್ಯವಾಗಲಿಲ್ಲ. ಹಾಗಾಗಿ ಕೆಂಬಟ್ಟಿಯವರ ಸಂಸ್ಕೃತಿ ಆ ಮಟ್ಟಿನ ಸದೃಢತೆಯನ್ನು ಹೊಂದಿದ್ದಂತೆ ಕಾಣುತ್ತದೆ. ಪ್ರಬಲ ಸಮುದಾಯಗಳ ಒಕ್ಕಗಳಲ್ಲಿ ಗುಲಾಮರಂತೆ ಕೆಂಬಟ್ಟಿಯವರು ಉಳಿದರೂ ಅವರ ಸಂಸ್ಕೃತಿಗೆ ಮಾತ್ರ ಪ್ರಬಲ ಸಮುದಾಯಗಳು ಗುಲಾಮರಾದರೆಂದು ಹೇಳಬಹುದು. ಅದನ್ನು ಗುರುತಿಸುವುದಾದರೆ, ಬುಡಕಟ್ಟಿನ ಸಮುದಾಯದವರಾದ ಕೆಂಬಟ್ಟಿಯವರು ಕೂಡುಜೀವನವನ್ನು ನಡೆಸುತ್ತಿದ್ದರು. ಈ ಸಮುದಾಯದವರು ತಮ್ಮದೇ ಭಾಷೆಯನ್ನು ಬಳಸುತ್ತಿದ್ದರು. ಇವರ ವೇಷಭೂಷಣಗಳನ್ನು, ಬೇಟೆ, ಮಾಂಸಾಹಾರ ಪದ್ಧತಿ, ಸಂಗೀತ, ಕಲೆ, ಮೊದಲಾದ ಪದ್ಧತಿಗಳನ್ನು ವಲಸಿಗ ಪ್ರಬಲ ಸಮುದಾಯವರು ಅನುಸರಿಸತೊಡಗಿದರು ಮತ್ತು ರಾಜಕೀಯ ಪ್ರಾಬಲ್ಯ ಸಾಧಿಸಿದ ನಂತರ ತಮ್ಮದೆಂಬಂತೆ ಅವನ್ನು ಪ್ರತಿಪಾದಿಸಿಕೊಳ್ಳುತ್ತಾ ಹೋದರು. ಹೀಗೆ ಇದು ಇಂದು ಉಳ್ಳವರ ಸಂಸ್ಕೃತಿಯಾಗಿ ಹೆಸರು ಹೊಂದಿದಂತೆ ಕಾಣುತ್ತದೆ. ಈ ಕೂಡುಕುಟುಂಬ ಪದ್ಧತಿ ಮತ್ತು ಸಂಸ್ಕೃತಿ ಮುಂದೆ ಒಕ್ಕದ ಬೆಳವಣಿಗೆಗೆ ಪ್ರೇರಣೆಯಾಯಿತೆಂದು ಊಹಿಸಬಹುದು(ಕೃಷ್ಣಯ್ಯ, ೧೯೭೪-೩೫, ನಂಜಮ್ಮ ಚಿಣ್ಣಪ್ಪ, ೨೦೧೪-೨೫).

ಮೇಲೆ ನೋಡಿದಂತೆ ಕೊಡಗಿನ ಪರಿಸರದ ಕೆಂಬಟ್ಟಿಗಳ ಸಮುದಾಯದಂತಹ ಸ್ಥಳೀಯ ನಿವಾಸಿಗಳ ಮೇಲೆ ನಂತರ ಪ್ರಬಲರಾದ ಸಮುದಾಯಗಳು ಬಂದು ರಾಜಕೀಯ ಪ್ರಾಬಲ್ಯವನ್ನು ಸಾಧಿಸಿದವು. ಇದರಿಂದಾಗಿ ಇತಿಹಾಸ ಆರಂಭಕಾಲದಲ್ಲಿ ಜನರು ಗುಂಪಾಗಿ ಒಂದೇ ಪ್ರದೇಶದಲ್ಲಿ ನೆಲೆನಿಲ್ಲುವ ಮೂಲಕ ಊರುಗುಪ್ಪೆಗಳು ನಿರ್ಮಾಣವಾದಂತೆ ಕಾಣುತ್ತದೆ. ಕೊಡಗಿನ ದಕ್ಷಿಣಭಾಗದಲ್ಲಿ ಕೆಲವು ಕಡೆ ಈ ರೀತಿಯ ಬೆಳವಣಿಗೆಗಳನ್ನು ಗುರುತಿಸಬಹುದು. ಸ್ಥಳೀಯವಾಗಿ ದೊರಕುವ ಕಲ್ಲು, ಮಣ್ಣು, ಹುಲ್ಲು, ಬಿದಿರು ಮರಮುಟ್ಟುಗಳನ್ನು ಬಳಸಿ ನಿರ್ಮಿಸಿದ ಗುಡಿಸಲು ಮಾದರಿಯ

ನಿವಾಸಗಳಲ್ಲಿ ಚರಿತ್ರೆಯ ಆರಂಭಕಾಲದ ಕೊಡಗಿನ ಪರಿಸರದಲ್ಲಿ ಜನರು ವಾಸಿಸುತ್ತಿದ್ದಂತೆ ಕಾಣುತ್ತದೆ. ಬೃಹತ್ ಶಿಲಾಯುಗದ ಕಾಲಘಟ್ಟದಲ್ಲಿ ಕಲ್ಲುಚಪ್ಪಡಿಗಳನ್ನು ಬಳಸಿ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದರು. ಕೊಡಗಿನಲ್ಲಿ ಈ ರೀತಿಯ ಬೃಹತ್ ಶಿಲಾಯುಗದ ನೆಲೆಗಳನ್ನು ಕೋಲ್, ಮೆಕೆಂಜಿ, ಡಿ.ಓಲ್ಡಮ್, ಎಂ.ಜೆ.ವಾಲ್ ಹೌಸ್ ಮೊದಲಾದವರು ಗುರುತಿಸಿದರು. ಈ ಮೇಲಿನ ವಿದ್ವಾಂಸರು ರಾಮಸ್ವಾಮಿ ಕಣಿವೆ, ಕೊಪ್ಪ, ವೀರಾಜಪೇಟೆ, ಸೋಮವಾರಪೇಟೆಯ ಮೊರಿಬೆಟ್ಟ ಮೊದಲಾದ ಕಡೆಗಳಲ್ಲಿ ಉತ್ಕನನ ಕಾರ್ಯಗಳ ಮೂಲಕ ಈ ಪ್ರದೇಶಗಳನ್ನು ಗುರುತಿಸಿದರು. (ಇವುಗಳನ್ನು ಕೊಡಗಿನಲ್ಲಿ ಪಾಂಡವ ಪಾರೆ ಎಂದೂ ಕರೆಯುತ್ತಾರೆ) (ಸುಬ್ಬಯ್ಯ, ೧೯೭೮: ೫೯–೬೮) ಕೊಡಗಿನಲ್ಲಿ ಕಂಡುಬಂದಿರುವ ಪಾಂಡವ ಪಾರೆಗಳು, ಪಾಂಡವರ ಮನೆಗಳು, ಕೊಲೆ ಕಲ್ಲುಗಳು, ಮಹಾಸತಿಕಲ್ಲುಗಳು, ಹೊರೂರು ಹಾಲೇರಿನಾಡು, ನೂರೊಕ್ಕಲು ನಾಡು, ಉಲುಗಲಿ ಮೂಡುಗೇರಿನಾಡು, ನಂಜರಾಯ ಪಟ್ಟಣ ಹೋಬಳಿ, ರಾಮಸ್ವಾಮಿ ಕಣಿವೆ ಹೋಬಳಿ, ಯಡವ ನಾಡು, ಬಿಳ್ಹ ಹೋಬಳಿ, ನಿಡ್ತ ಹೋಬಳಿ, ಬೆಪ್ಪು ನಾಡು, ಅಂಜಿಗೇರಿನಾಡು, ಶ್ರೀಮಂಗಲ ನಾಡು ಮೊದಲಾದ ಕಡೆಗಳಲ್ಲಿ ಕಂಡು ಬಂದಿದೆ ಎಂದು ಡಿ.ಎನ್. ಕೃಷ್ಣಯ್ಯ ಅವರು ಅಭಿಪ್ರಾಯ ಪಡುತ್ತಾರೆ(ಕೃಷ್ಣಯ್ಯ, ೧೯೭೪(೨೦೧೪: ೨೭–೩೩). ಕನ್ನಡ ಭಾಷಿಕರು ಹೆಚ್ಚಾಗಿರುವ ಪ್ರದೇಶಗಳಲ್ಲಿ ಈ ರೀತಿಯ ಶಿಲಾಗೋರಿಗಳು ಕಾಣಸಿಗುತ್ತವೆ.

ಈ ಜನರು ಪ್ರಾಣಿಗಳಿಂದ ಮತ್ತು ಶತ್ರುಗಳಿಂದ ರಕ್ಷಣೆ ಪಡೆಯುವ ದೃಷ್ಟಿಯಿಂದ ಗುಂಪುಗುಂಪು ಗುಡಿಸಲುಗಳನ್ನು ನಿರ್ಮಿಸಿಕೊಂಡು ಸಾಮೂಹಿಕ ಬುಡಕಟ್ಟು ಜೀವನ ನಡೆಸುತ್ತಿದ್ದರು. ಇವುಗಳನ್ನು ಚಾರಿತ್ರಿಕ ಕಾಲದಲ್ಲಿ ಊರುಗುಪ್ಪೆಗಳೆಂದು ಕರೆಯುತ್ತಿದ್ದರು(ಗೋಪಾಲ್, ಶಾಸನ ಸಂಖ್ಯೆ:೧, (ಕಾಲ: ಕ್ರಿಶ ೪೬೬). ಐದನೆಯ ಶತಮಾನದ ಹೊತ್ತಿಗೆ ಈ ಊರುಗುಪ್ಪೆಗಳ ಸಂಖ್ಯೆ ಕ್ಷೀಣಿಸುತ್ತಿದ್ದಂತೆ ಮತ್ತು ಹಳ್ಳಿ ಹಾಗೂ ಊರುಗಳು ಬೆಳೆಯುತ್ತಿರುವುದನ್ನು ಶಾಸನಗಳಲ್ಲಿ ಕಾಣಬಹುದು(ಗೋಪಾಲ್, ಶಾಸನ ಸಂಖ್ಯೆ:೧, (ಕಾಲ: ಕ್ರಿಶ ೪೬೬). ಕೊಡಗು ಶಾಸನಸಂಖ್ಯೆ ೧ರಲ್ಲಿ ಬದಣೆಗುಪ್ಪೆ, ಕೊಳೆಯನೂರು, ದಾಸನೂರು, ಕರಿವಳ್ಳಿ ಮುಂತಾದ ಊರುಗಳ ಉಲ್ಲೇಖವಿದೆ. ಬದಣೆಗುಪ್ಪೆಯನ್ನು ಮುಖ್ಯವಾಗಿಸಿಕೊಂಡು ಶಾಸನದ ವಿಷಯ ಪ್ರಸ್ತಾಪಗೊಂಡಿರುವುದನ್ನು ನೋಡಿದರೆ ಬದಣೆಗುಪ್ಪೆ ಪ್ರಾಚೀನವಾದುದು ಮತ್ತು ಇತರ ಊರುಗಳಿಗೆ ಕೇಂದ್ರಸ್ಥಾನವಾದುದು. ಬದಣೆಗುಪ್ಪೆಯ ಹಿನ್ನೆಲೆಯಲ್ಲಿಯೇ ಇತರ ಊರುಗಳು ಗುರುತಿಸಲ್ಪಡುತ್ತಿರುವುದನ್ನು ಕಾಣಬಹುದು. ಅಂದರೆ, ಹಳೆಯ ಮುಖ್ಯ ಗ್ರಾಮದ ಹಿನ್ನೆಲೆಯಲ್ಲಿ ಹೊಸ ಗ್ರಾಮಗಳು ಗುರುತಿಸಲ್ಪಡುತ್ತಿದ್ದವೆಂದು ಅರ್ಥ ಮಾಡಿಕೊಳ್ಳಬಹುದು.

ಒಂಬತ್ತನೆಯ ಶತಮಾನದ ಕೊನೆಗಾಲದ ಶಾಸನದಲ್ಲಿ(ಗೋಪಾಲ್, ಶಾಸನ ಸಂಖ್ಯೆ: ೯೬, ಕಾಲ: ಕ್ರಿಶ ೮೮೮) ಬಿಳಿಯೂರು ಸಮೂಹಕ್ಕೆ ಸೇರಿದ ೧೨ ಹಳ್ಳಿಗಳನ್ನು ಜಿನಾಲಯಕ್ಕೆ ಬಿಟ್ಟ ಸಂಗತಿ ತಿಳಿಯುತ್ತದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಹಳ್ಳಿಗಳು ಕೂಡಿ ೯ನೆಯ ಶತಮಾನದ

ಹೊತ್ತಿಗೆ ಊರುಗಳು ಬೆಳವಣಿಗೆ ಹೊಂದುತ್ತಿರುವುದನ್ನು ಗುರುತಿಸಬಹುದಾಗಿದೆ. ಒಟ್ಟಾರೆ, ಐದನೆಯ ಶತಮಾನದ ನಂತರ ಊರುಗುಪ್ಪೆಗಳು ಶಿಥಿಲಗೊಂಡು, ಹಳ್ಳಿಗಳು ಮತ್ತು ಹಳ್ಳಿಗಳನ್ನು ಒಳಗೊಂಡ ಊರುಗಳು ರೂಪುಗೊಳ್ಳುತ್ತಾ ಹೋಗುವುದನ್ನು ಕಾಣಬಹುದು. ಒಂಬತ್ತನೇ ಶತಮಾನದ ಹೊತ್ತಿಗೆ ಭತ್ತದ ಉತ್ಪಾದನೆ ಮತ್ತು ವ್ಯಾಪಾರ ಹೆಚ್ಚಾಗಿದ್ದಂತೆ ತಿಳಿಯುತ್ತದೆ. ಈ ಕಾಲಘಟ್ಟದ ಶಾಸನದಲ್ಲಿ ಚಿನ್ನದ ಗದ್ಯಾಣಗಳ ಉಲ್ಲೇಖಗಳನ್ನು(ಗೋಪಾಲ್, ಶಾಸನ ಸಂಖ್ಯೆ: ೯೭, ಕಾಲ: ಕ್ರಿ.ಶ ೮೮೮) ಆಧರಿಸಿ ಈ ನಿರ್ಧಾರಕ್ಕೆ ಬರಲು ಸಾಧ್ಯವಿದೆ. ಹತ್ತನೆಯ ಶತಮಾನದ ಶಾಸನದಲ್ಲಿ(ಗೋಪಾಲ್, ಶಾಸನ ಸಂಖ್ಯೆ: ೯೮ ಕಾಲ: ಕ್ರಿ.ಶ ೯೭೮) ಎಂಟು ಒಕ್ಕಲುಗಳ ಪ್ರಯೋಗವಿದೆ. ಹಳ್ಳಿಗಳು ಒಕ್ಕಲುಗಳ ಸಮೂಹದಿಂದ ರಚನೆಗೊಂಡಿರ ಬಹುದೆಂದು ಭಾವಿಸಬಹುದಾಗಿದೆ.

## ೨.೨. ಒಕ್ಕಗಳ ಸ್ವರೂಪ ಮತ್ತು ಬೆಳವಣಿಗೆ

ಕೊಡಗಿನ ಭೌಗೋಳಿಕ ಪರಿಮಿತಿಯೊಳಗೆ ಅವಿಭಕ್ತಕುಟುಂಬಗಳು ಒಕ್ಕಗಳೆಂದು ಗುರುತಿಸಿ ಕೊಳ್ಳುವ ಪ್ರಕ್ರಿಯೆಯಲ್ಲಿ ಮತ್ತು ಅದರ ಬೆಳವಣಿಗೆಯ ಹಂತಗಳಲ್ಲಿ ಅನೇಕ ಪೂರಕವಾದ ಅಂಶಗಳ ಕೆಲಸ ಮಾಡಿದವು. ಆರಂಭಿಕ ಹಂತಗಳಲ್ಲಿ ಅವಿಭಕ್ತ ಕುಟುಂಬಗಳು ವಾಸಕ್ಕೆ ತಕ್ಕುದಾದ ವಿಶಾಲವಾದ ಮನೆ, ಜೀವನೋಪಾಯಕ್ಕಾಗಿ ಕೃಷಿ–ಭೂಹಿಡುವಳಿ, ಕುಟುಂಬದ ಸದಸ್ಯರ ರಕ್ಷಣೆ ಮೊದಲಾದ ಮೂಲಭೂತ ಅಂಶಗಳ ಕಡೆಗೆ ಗಮನಹರಿಸಬೇಕಾದ ಅನಿವಾರ್ಯತೆ ಇತ್ತು. ವಿಜಯನಗರದ ಪತನದ ನಂತರ ಸ್ವತಂತ್ರವಾದ ಅನೇಕ ನಾಯಕರಲ್ಲಿ ಕೊಡಗನ್ನು ನಿಯಂತ್ರಿಸುತ್ತಿದ್ದವರೂ ಅನೇಕರಿದ್ದರು, ಹೀಗೆ ಕೊಡಗನ್ನು ಹಿಡಿತದಲ್ಲಿಟ್ಟುಕೊಂಡಿದ್ದ ಅನೇಕ ನಾಯಕರು ತಮ್ಮ ಹಿಡಿತದಲ್ಲಿರುವ ಭೂಪ್ರದೇಶಗಳಲ್ಲಿ ಗುಂಪಾಗಿ ಜೀವಿಸುತ್ತಿದ್ದ ಜನರನ್ನು ವಿಭಜಿಸಿ ಜಮೀನುಗಳನ್ನು ಕೊಟ್ಟಿರುವ ಬಗ್ಗೆ ಪ್ರಸ್ತಾಪವಿದೆ. ರೈಸ್ ಅವರು ಕರೆದ 'ಕೂರ್ಗ್ ಪ್ರಾಪರ್'(ರೈಸ್, ೨೦೦೪(೧೮೭೮):೨೩೭)ನಲ್ಲಿ ಊರುಗುಪ್ಪೆಗಳು ಅಷ್ಟೇನು ಕಂಡು ಬಂದಿಲ್ಲವಾದರೂ ಕುಶಾಲ ನಗರ, ಶ್ರೀಮಂಗಲ ಮೊದಲಾದ ಕಡೆಗಳಿಂದ ವಲಸೆ ಬಂದಿರುವ ಸಾಧ್ಯತೆ ಇರುತ್ತದೆ (ಕೃಷ್ಣಯ್ಯ, ೧೯೭೪(೨೦೧೪): ೬೨).

ಪೂರ್ವದಲ್ಲಿ ಒಟ್ಟಾಗಿ ಜನ ವಾಸಿಸುತಿದುದನ್ನು ಊರುಗುಪ್ಪೆ ಎನ್ನುತ್ತಿದ್ದರು. ಕೊಡಗನ್ನು ಆಳುತ್ತಿದ್ದ ಮಧ್ಯಕಾಲೀನ ನಾಯಕರಲ್ಲಿ ಅಂಜಿಗೇರಿ ನಾಡಿನ ಅಚ್ಚುನಾಯಕ, ಅವನ ತಂದೆ ಚಿಟ್ಯಪ್ಪನಾಯಕ ಮತ್ತು ತಾವುನಾಡಿನ ಕರ್ಣೇಂಬಾಹು, ಬೆಪ್ಪುನಾಡಿನ ಉತ್ತನಾಯಕ, ಕಡಿಯತ್ತು ನಾಡಿನ ಬಾವಲಿಯ ಕೊಳ್ಳಕೊಂಗಿನಾಯಕ ಪ್ರಮುಖರು. ಹತ್ತುಗಟ್ಟೆನಾಡಿನಲ್ಲಿ ಮಾಚಂಕಗಳಮನೆ, ತಾವಳಗೇರಿಯಲ್ಲಿ ಕೈಬಿಲಿಮನೆ, ಹತ್ತೂರಿನಲ್ಲಿ ಮುಕ್ಕಾಟಿರ ಮನೆಯವರು ಒಡೆಯರಾಗಿದ್ದರೆಂದು ತಿಳಿದುಬರುತ್ತದೆ. ಇವು ಆ ಕಾಲದ ಪ್ರಮುಖ ಮನೆತನಗಳು ಮಾತ್ರವಲ್ಲ, ಇಂದಿಗೂ ಅದೇ

ಹೆಸರಿನಲ್ಲಿ ಉಳಿದುಬಂದಿವೆ(ಗೋಪಾಲ್, ಶಾಸನ ಸಂಖ್ಯೆ: ೯೮, ಕಾಲ: ಕ್ರಿ.ಶ. ೯೭೮). ಆ ಕಾಲದಲ್ಲಿ ಕೊಡಗನ್ನು ಆಳುತ್ತಿದ್ದ ನಾಯಕರು ಊರುಗುಪ್ಪೆಗಳನ್ನು ಒಡೆದು ಪ್ರತಿ ಒಕ್ಕಗಳಿಗೆ ಅದರ ಸುತ್ತಮುತ್ತಲಿನ ವಿಶಾಲ ಭೂಮಿಯ ಹಕ್ಕನ್ನು ನೀಡುವ ಮೂಲಕ ಪಶುಸಂಗೋಪನೆ ಮತ್ತು ಕೃಷಿ ಬೆಳವಣಿಗೆಗೆ ಪ್ರೋತ್ಸಾಹಿಸಿದರು. ಹೆಚ್ಚು ಕೃಷಿ ಉತ್ಪಾದನೆಯ ಮೂಲಕ ಕಂದಾಯದ ಪ್ರಮಾಣವನ್ನು ಹೆಚ್ಚು ಸಂಗ್ರಹಿಸುವುದು ಇದರ ಉದ್ದೇಶವಾಗಿತ್ತು(ಚಿಣ್ಣಪ್ಪ, ೨೦೧೪: ೨೬). ಹೀಗೆ ನಾಯಕರ ಆಳ್ವಿಕೆ ಕೊಡಗಿನ ಸಾಮಾಜಿಕ ಜೀವನದ ಮೇಲೆ ಪರಿಣಾಮ ಬೀರುತ್ತಾ ಮುಂದುವರಿದು ಖಾಸಗಿ ಸ್ವತ್ತಿನ ಪರಿಕಲ್ಪನೆ ಬೆಳೆಯಿತು. ಕೃಷಿಯ ಅವಲಂಬನೆ ಅನಿವಾರ್ಯ ಸ್ಥಿತಿಯಾಗಿ ಒಕ್ಕದೊಳಗಿನ ಜೀವನಕ್ರಮವೂ ಬದಲಾಗುತ್ತಾ ಬಂದಿತು. ಹಾಲೇರಿ ರಾಜರ ಕಾಲದಲ್ಲಿ ಜಮ್ಮ ಜಹಗೀರುಗಳಂತಹ ಆಸ್ತಿಗಳನ್ನು ರಾಜರು ಕೊಡಲಾರಂಭಿಸಿದ ಮೇಲೆ ಕೊಡಗಿನಲ್ಲಿ ಒಕ್ಕದ ಕಟ್ಟುಪಾಡುಗಳು ಮತ್ತಷ್ಟು ಬಲಿಷ್ಠಗೊಂಡವು.

ಕೊಡಗಿನ ಸಾಮಾಜಿಕ ಜನಜೀವನವು 'ಒಕ್ಕ' ಅಥವಾ 'ಅವಿಭಕ್ತ ಕುಟುಂಬ'ವಾಗಿ ರೂಪುಗೊಂಡಾಗ ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಒಕ್ಕಗಳು ದೃಢವಾಗುತ್ತಾ ಬೆಳೆಯಿತು. ಹೀಗೆ ಸದೃಢವಾಗುತ್ತಾ ಬೆಳೆದ ಕೊಡಗಿನ ಅವಿಭಕ್ತ ಕುಟುಂಬಗಳಲ್ಲಿ ಗಮನಿಸಬಹುದಾದ ಮೂರು ಪ್ರಧಾನ ಅಂಶಗಳೆಂದರೆ–ಒಂದು 'ಒಕ್ಕ', ಎರಡು 'ಐನ್‌ಮನೆ' ಮೂರು 'ಭೂಹಿಡುವಳಿ'. ಇವಲ್ಲದೆ, ಇವೆಲ್ಲದರೊಂದಿಗಿನ ಒಂದು ಭಾವನಾತ್ಮಕವಾದ ನಂಟು ಆ 'ಒಕ್ಕ'ದ ಪ್ರತಿಯೊಬ್ಬ ಸದಸ್ಯನಲ್ಲೂ ಇರುತ್ತದೆ. ಅದೇ ಅವನ ಅಸ್ಮಿತೆ ಕೂಡ ಆಗಿರುತ್ತದೆ.

ಈಗಿನ ಕೊಡಗು ಜಿಲ್ಲೆಯ ಭೌಗೋಳಿಕ ರೂಪುರೇಷೆಗಳು ಹಾಗೂ ಸಾಂಸ್ಕೃತಿಕ ಕೊಡುಕೊಳ್ಳುವಿಕೆಗಳು ೧೯ನೇ ಶತಮಾನದ ಆದಿಭಾಗದಲ್ಲಿ ಭಿನ್ನವಾಗಿದ್ದು ಲಿಂಗಾಯತ ಅರಸರ ಆಳ್ವಿಕೆಗೆ ಕೊಡಗು ಒಳಪಟ್ಟಿದ್ದರೂ, ಕೊಡಗಿನ ಕನ್ನಡವು ಆಡಳಿತ ಭಾಷೆಯಾಗಿದ್ದರೂ ಜನಮನದಲ್ಲಿ ಕೇರಳದ ಮಲಬಾರ್ ಪ್ರಾಂತ್ಯದ ಪ್ರಭಾವವು ನಿಚ್ಚಳವಾಗಿತ್ತು. ಸಾಂಸ್ಕೃತಿಕ, ಸಾಮಾಜಿಕ ಹಾಗೂ ಧಾರ್ಮಿಕ ವಿಚಾರಗಳು ಜನಮನದೊಳಗೆ ಆಡಳಿತ ಮಾಡುತ್ತಿದ್ದವು. ಆದರೆ ರಾಜಕೀಯವಾಗಿ ಮಾತ್ರ ಕನ್ನಡ ಭಾಷೆ ಮಾತನಾಡುವ ಲಿಂಗಾಯತ ಅರಸರ ಆಳ್ವಿಕೆ ಒಳಪಟ್ಟಿದ್ದರಿಂದ ಸಹಜವಾಗಿಯೇ ಕೊಡಗಿನಲ್ಲಿ ಎಲ್ಲ ಸಮುದಾಯಗಳಿಗೂ ತಮ್ಮ ಐಡೆಂಟಿಟಿಯ ಪ್ರಶ್ನೆ ಯಾವತ್ತೂ ಪ್ರಶ್ನೆಯಾಗಿಯೇ ಉಳಿಯಿತು. ಇತ್ತೀಚಿನ ದಶಕಗಳಲ್ಲಿ ತಮ್ಮ ಮೂಲದ ಪರಿಶೋಧನೆಯಲ್ಲಿ ತೊಡಗಿದ ಕೊಡಗರಿಗೆ ತಮ್ಮ ಬೇರುಗಳು ಕೇರಳದ ಮಲಬಾರ್ ಪ್ರಾಂತ್ಯದಲ್ಲಿ ಕಾಣಲಾರಂಭಿಸಿದವು. ಆ ಸಂದರ್ಭದಲ್ಲಿ ತಮ್ಮನ್ನು ತಾವು ಕೇರಳೀಯರ ಜೊತೆಗೆ ಗುರುತಿಸಿಕೊಳ್ಳಲಾಗದೆ ಈ ಸಮುದಾಯಗಳು ದಂದ್ವದಲ್ಲಿ ಉಳಿದವು.

ಸಾಮಾಜಿಕವಾಗಿ ಕೊಡಗು ಭಾಷಿಕ ಸಮುದಾಯಗಳನ್ನು ಗಮನಿಸಿದಾಗ ಮಲಬಾರ್ ಪ್ರಾಂತ್ಯದ ಸಮಾಜಗಳ ಪ್ರಭಾವಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಒಳಗಾಗಿರುವುದು ಕಂಡುಬರುತ್ತದೆ.

ಉದಾಹರಣೆಗೆ ಮಲಬಾರ್ ಪ್ರಾಂತ್ಯದಲ್ಲಿ ಕಂಡುಬರುವ 'ತರವಾಡು' ಎನ್ನುವ ಮನೆಗಳು ಹಲವಾರು ಕುಟುಂಬಗಳಿಗೆ ಮೂಲಸ್ಥಾನವಾಗಿರುತ್ತದೆ. ಕೊಡಗಿನಲ್ಲಿ ಕಾಣಬರುವ ಕುಟುಂಬ (ಒಕ್ಕ)ಗಳ 'ಐನ್‌ಮನೆ'ಯು ಮಲಬಾರ್ ಪ್ರಾಂತ್ಯದಲ್ಲಿ ಕಂಡುಬರುವ ನಾಯರ್ ಸಮುದಾಯದ ಮಾತೃಪ್ರಧಾನ ಕುಟುಂಬವ್ಯವಸ್ಥೆಯ 'ತರವಾಡ್'[೬] ಹಾಗೂ ನಂಬೂದರಿ ಸಮುದಾಯದ ಪಿತೃಪ್ರಧಾನ ಕುಟುಂಬವ್ಯವಸ್ಥೆಯ 'ಇಲ್ಲಂ'[೭]ಗಳಂತೆಯೇ ಒಂದೇ ರೀತಿಯ ಗುಣಲಕ್ಷಣಗಳನ್ನು ಹೊಂದಿದೆ(ಶ್ರೀನಿವಾಸ್ ೧೯೮೯(೧೯೫೨):೪೯). ಈ ತರವಾಡುಗಳಿಂದ ಕ್ರಮೇಣ ವಿಭಿನ್ನ ಕಾರಣಗಳಿಂದ ಚದುರಿ ಹೋದ ಅನೇಕ ಕುಟುಂಬಗಳು ಮತ್ತೆ ಅದೇ ಮೂಲಸ್ಥಾನದ ಸಂಬಂಧ ಇಟ್ಟುಕೊಂಡಿರುವುದನ್ನು ಮಲಬಾರ್ ಪ್ರಾಂತ್ಯದಲ್ಲಿಯೂ ಕಾಣಬಹುದು. ಹಾಗೆಯೇ ಕೊಡಗಿನ ಅನೇಕ ಮನೆತನಗಳಲ್ಲಿ ತಾವು ಕೇರಳದ ನಾಯರ್ ವಂಶಸ್ಥರೆಂಬ ಪ್ರತೀತಿ ಇವತ್ತಿಗೂ ಇದೆ. ಹಾಗಾದರೆ ಕೊಡಗಿನ ಮೇಲ್ವರ್ಗದ ಸಮುದಾಯಗಳಿಂದ ಹಿಡಿದು ತಳವರ್ಗದ ಸಮುದಾಯಗಳವರೆಗೆ ಸಾಕಷ್ಟು ವಲಸೆ ಬಂದಿರಬಹುದಾದ ಸಾಧ್ಯತೆಗಳಿವೆ. ಈ ಅಭಿಪ್ರಾಯಕ್ಕೆ ಪೂರಕವಾಗಿ ಅಮ್ಮ ಕೊಡವರು ಕೇರಳದ ತಾಯಿಕಾಟ್ ತಂಬಿರಾನ್ ಎನ್ನುವ ಬ್ರಾಹ್ಮಣ ವಂಶಸ್ಥರ ಸಂಬಂಧಿಕರೆಂಬ ಪ್ರತೀತಿ ಇದೆ(ಶ್ರೀನಿವಾಸ್, ೧೯೮೯(೧೯೫೨):೩೪). ಇದೇ ರೀತಿ ನಡಿಕೇರಿಯಂಡ ಕುಟುಂಬದವರನ್ನು 'ನಾಯನ್ಮಾರ್ ನಡಿಕೇರಿಯಂಡ' ಎಂದು ಕರೆಯಲ್ಪಡುವುದನ್ನೂ ಗಮನಿಸಬಹುದು. ಅಲ್ಲದೆ ಪಣಿಕರು, ಬಣ್ಣರು, ಕೋಲೆಯರು, ಕೋಯವರು, ಕಾಪಳರು, ಕೊಡವನಾಯರ್ ಮೊದಲಾದ ಸಮುದಾಯಗಳು ಕೇರಳದ ಸಮಾನಾಂತರ ಸಮುದಾಯಗಳೊಡನೆ ಇವತ್ತಿಗೂ ಸಾಂಸ್ಕೃತಿಕ ಹಾಗೂ ವೈವಾಹಿಕ ಸಂಬಂಧಗಳನ್ನಿಟ್ಟು ಕೊಂಡಿರುವುದನ್ನು ಗಮನಿಸಿದರೆ, ಕೊಡಗಿನ ಸಾಮಾಜಿಕ ಸ್ತರವಿನ್ಯಾಸದ ತಾಯಿಬೇರುಗಳನ್ನು ಮಲಬಾರ್ ಪ್ರಾಂತ್ಯದಲ್ಲಿ ಕಾಣಬಹುದು.

ಹಾಗೆಯೇ ಧಾರ್ಮಿಕ ನಂಬಿಕೆಗಳ ಹಾಗೂ ಪೂಜಾ ವಿಧಿ, ವಿಧಾನಗಳ ಮತ್ತು ಹಬ್ಬ ಮೊದಲಾದ ಉತ್ಸವಗಳ ಆಚರಣೆಯನ್ನು ಗಮನಿಸಿದರೆ ಮಲಬಾರ್ ಪ್ರಾಂತ್ಯದ ದಟ್ಟ ಪ್ರಭಾವವಿದೆ. ಕೊಡಗಿನ ಉದ್ದಗಲಕ್ಕೂ ಮಾರ್ಚ್, ಏಪ್ರಿಲ್ ತಿಂಗಳಲ್ಲಿ ಕಂಡುಬರುವ ಎಲ್ಲ ಊರ ಹಬ್ಬ, ನಾಡು ಹಬ್ಬಗಳಿಗೂ ಕೇರಳದ ಮಲಬಾರ್ ಮೂಲದ ದೇವರುಗಳಿಗೂ ನೇರ ಸಂಬಂಧ ವಿರುವುದನ್ನು ಗುರುತಿಸಬಹುದು. ಚಾಮುಂಡಿ ದೇವಿಯ ನೆಲೆ ಪ್ರತಿ ಊರಿನಲ್ಲೂ ಇದೆ. ಈಶ್ವರ ದೇವರು ಬೈತೂರಪ್ಪನಾಗಿ ಕೇರಳದಲ್ಲಿಯೂ ಕೊಡಗಿನಲ್ಲಿಯೂ ಕಾಣಿಸಿಕೊಳ್ಳುವನು. ಕೊಡಗಿನಿಂದ ಎತ್ತುಗಳ ಮೇಲೆ ಅಕ್ಕಿ ಮೊದಲಾದ ದೇವರ ಸೇವೆಯ ಸಾಮಗ್ರಿಗಳನ್ನು ಏರಿಕೊಂಡು ಕೊಡಗಿನ ಮನೆ ಮನೆಯಿಂದ ಬೈತೂರು, ಪಯ್ಯಾವೂರು, ತಾಳದ ಚಾಮುಂಡಿ ಮೊದಲಾದ ಕೇರಳದ ದೇವಾಲಯಗಳಿಗೆ ಸೇವೆ ಸಲ್ಲಿಸಿ ಬರುವುದು ಇಂದಿಗೂ ರೂಢಿಯಲ್ಲಿದೆ. ಇದಲ್ಲದೆ, ನಿಲೇಶ್ವರ ಮತ್ತು ಕಾಳೇಕಾಟ್ ತಂತ್ರಿಗಳು ಕೊಡಗಿನ ಸಂಸ್ಕೃತಿಯಲ್ಲಿ ತಮ್ಮ ತಂತ್ರ, ಮಂತ್ರ ಹಾಗೂ ಯಂತ್ರ ವಿದ್ಯೆಗಳ ಪ್ರಭಾವವನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ಹಾಗಾಗಿ ಕೊಡಗಿನ ಧಾರ್ಮಿಕ ವ್ಯವಸ್ಥೆ ಹಾಗೂ ಸಾಮಾಜಿಕ ವ್ಯವಸ್ಥೆಗೆ ನಿಕಟವಾದ ಸಂಬಂಧ

ಹೊಂದಿರುವ ಮಲಬಾರ್ ಪ್ರಾಂತ್ಯದ ಸಂಸ್ಕೃತಿಯು ಕೊಡಗಿನ ಒಕ್ಕ ವ್ಯವಸ್ಥೆಯನ್ನು ನಿರ್ಧರಿಸುವಲ್ಲಿ ನಿರ್ದಿಷ್ಟ ಪಾತ್ರ ವಹಿಸಿದೆ.

ಇಷ್ಟೆಲ್ಲ ಪ್ರಭಾವ ಹಾಗೂ ಪ್ರೇರಣೆಗಳು ಕೊಡಗಿನ ಸಮುದಾಯಗಳ ಮೇಲೆ ಶತಮಾನಗಳಿಂದ ಆಗಿರುವುದು ನಿಜವಾದರೂ, ಲಿಂಗಾಯತ ಅರಸರ ಕಾಲದಲ್ಲಿ ತೆರಿಗೆ ನಿರ್ಧಾರ ಮಾಡುವ ಸಂದರ್ಭದಲ್ಲಿ ಒಂದೊಂದು ಕುಟುಂಬವನ್ನು ಒಂದೊಂದು ಒಕ್ಕವನ್ನಾಗಿ ಪರಿಗಣಿಸಲಾಯಿತು ಎನ್ನುವುದಕ್ಕೆ ಕೊಡಗಿನ ಅರಸರೇ ಸಾಕಷ್ಟು ಒಕ್ಕನಾಮಗಳನ್ನು ಕೊಟ್ಟಿರುವ ಉದಾಹರಣೆಗಳಿವೆ (ಅದಕ್ಕೂ ಮೊದಲೇ ಸಾಕಷ್ಟು ಒಕ್ಕನಾಮಗಳಿದ್ದವು). ಹಾಗಾಗಿ ರಾಜಕೀಯವಾಗಿಯೂ ೧೬ನೇ ಶತಮಾನದಿಂದೀಚೆಗೆ ಒಕ್ಕ ಧರ್ಮವನ್ನು ಹಂತಹಂತವಾಗಿ ಘೋಷಿಸಲಾಯಿತು. ಹಲವಾರು ಒಕ್ಕಗಳಿಗೆ ಆ ಕಾಲಘಟ್ಟದಲ್ಲಿ ಪ್ರಚಲಿತದಲ್ಲಿದ್ದ ಸ್ಥಳನಾಮಗಳು, ವ್ಯಕ್ತಿನಾಮಗಳು, ವಸ್ತುನಾಮಗಳು ಮತ್ತು ಪ್ರಸಂಗಗಳು ಒಕ್ಕದ ಹೆಸರುಗಳೊಂದಿಗೆ ಮಿಳಿತವಾಗಿ ಒಕ್ಕನಾಮ ಕ್ರಮೇಣ ದೃಢವಾಯಿತು ಎನ್ನಬಹುದು.

ಕೊಡಗಿನ 'ಒಕ್ಕ' ಪದ್ಧತಿಯನ್ನು ಪರಿಶೀಲಿಸುವ ಮೊದಲು ಒಕ್ಕದ ಅರ್ಥವನ್ನು ಅರಿಯಬೇಕು. 'ಒಕ್ಕ' ಪದಕ್ಕೆ ನಿಘಂಟಿನಲ್ಲಿ ಒಂದಾಗು; ಐಕ್ಯತೆ; ಒಡನೆ; ಒಡಗೂಡು-ಒಂದುಗೂಡುವುದು ಇತ್ಯಾದಿ ಅರ್ಥಗಳಿವೆ(ಮುತ್ತಣ್ಣ, ೧೯೮೮: ೨೭).

ಭಾರತೀಯ ಸಮಾಜದಲ್ಲಿ ಸಮಾಜಶಾಸ್ತ್ರಜ್ಞರು ಸಾಮಾನ್ಯವಾಗಿ ಎರಡು ರೀತಿಯ ಕುಟುಂಬ ವ್ಯವಸ್ಥೆಗಳನ್ನು ಗುರುತಿಸುತ್ತಾರೆ. ಒಂದು: ಅವಿಭಕ್ತ ಕುಟುಂಬ ವ್ಯವಸ್ಥೆ. ಮತ್ತೊಂದು: ವಿಭಕ್ತ ಕುಟುಂಬ ವ್ಯವಸ್ಥೆ. ಕೊಡಗಿನ ಒಕ್ಕಗಳು ಅವಿಭಕ್ತ ಕುಟುಂಬಗಳೆಂದು ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ(ಶ್ರೀನಿವಾಸ್, ೧೯೮೯(೧೯೫೨):೧೨೪), (ಮುತ್ತಣ್ಣ, ೧೯೫೩:೩೦೯), (ತಂಬಂಡ, ೨೦೦೦:೨೬). ಈ ಹಿನ್ನೆಲೆಯಲ್ಲಿ ಅವಿಭಕ್ತ ಕುಟುಂಬದ ಅರ್ಥ, ಪರಿಕಲ್ಪನೆಗಳ ಬಗೆಗೆ ಸಮಾಜಶಾಸ್ತ್ರಜ್ಞರು ನೀಡಿರುವ ವಿವರಣೆಗಳನ್ನು ಈ ಕೆಳಗಿನಂತೆ ನೋಡಬಹುದು.

**ಕಾಲಿನ್ಸ್ ಡಿಕ್ಷನರಿ ಆಫ್ ಸೋಷಿಯಾಲಜಿಯ ಪ್ರಕಾರ:** "ಒಂದೇ ಸೂರಿನಡಿ ಎರಡಕ್ಕೂ ಹೆಚ್ಚಿನ ತಲೆಮಾರಿನ ರಕ್ತಸಂಬಂಧಿಕರು ಒಟ್ಟುಗೂಡಿ ಜೀವನ ಸಾಗಿಸುವುದೇ ಅವಿಭಕ್ತ ಕುಟುಂಬ" ಎನ್ನಲಾಗಿದೆ(ಜರ್ರಿ ಮತ್ತು ಜರ್ರಿ, ೧೯೯೫(೧೯೯೧):೨೨೩). ಇಲ್ಲಿ ಅವಿಭಕ್ತ ಕುಟುಂಬವನ್ನು ವಿಸ್ತೃತ ಕುಟುಂಬದ ಅರ್ಥದಲ್ಲಿ ಬಳಸಿರುವುದನ್ನು ಕಾಣಬಹುದಾಗಿದೆ. ಇರಾವತಿ ಕರ್ವೆಯವರ ಪ್ರಕಾರ ಅವಿಭಕ್ತ ಕುಟುಂಬ ಎಂದರೆ: "ಒಂದು ಸೂರಿನಡಿಯಲ್ಲಿ ವಾಸಿಸುವ, ಒಂದೇ ಅಡುಗೆ ಮನೆಯಲ್ಲಿ ತಯಾರಾದ ಆಹಾರವನ್ನು ಸ್ವೀಕರಿಸುವ, ಕುಟುಂಬದ ಆಸ್ತಿಯ ಸ್ವಾಮ್ಯತೆ ಸಾಮೂಹಿಕ ವಾಗಿರುವ, ಪೂಜಾ ವಿಧಿ-ವಿಧಾನಗಳಲ್ಲಿ ಸಮಸ್ತರೂ ಭಾಗವಹಿಸುವ, ರಕ್ತಸಂಬಂಧಿಗಳ ಸಮೂಹವಾಗಿದೆ"(ಅಹುಜಾ, ೨೦೦೯(೧೯೯೯):೯೮) ಎಂದಿದ್ದಾರೆ. ಕರ್ವೆ ಅವರ ವ್ಯಾಖ್ಯಾನವು ಅವಿಭಕ್ತ ಕುಟುಂಬ ಎಂಬುದು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿರುವ

ಒಂದೇ ಸಮುದಾಯಕ್ಕೆ ಸೇರಿದವರು ಒಟ್ಟಾಗಿ ಒಂದೆಡೆ ಬದುಕುವುದನ್ನು ನಿರೂಪಿಸುತ್ತದೆ. ಸಾಮುದಾಯಿಕ ಕೂಡು ಜೀವನವನ್ನು ಪ್ರತಿನಿಧಿಸುತ್ತಿದೆ.

ಸಮಾಜವಿಜ್ಞಾನಗಳ ಪಾರಿಭಾಷಿಕ ಪದಕೋಶದ ಪ್ರಕಾರ: "ಒಂದೇ ಮನೆಯಲ್ಲಿ ವಾಸಿಸುತ್ತಿದ್ದು, ಒಂದೇ ಒಲೆಯ ಅಡುಗೆ ಊಟ ಸೇವಿಸುತ್ತಿದ್ದು, ಕುಟುಂಬದ ಆಸ್ತಿಯ ಮೇಲೆ ಸಮಾನ ಒಡೆತನವನ್ನು ಹೊಂದಿದ್ದು, ಪೂಜಾಕಾರ್ಯಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಿದ್ದು, ಮೂರು ನಾಲ್ಕು ಪೀಳಿಗೆಗಳಿಗೆ ಸೇರಿದ ಒಂದೇ ರಕ್ತಸಂಬಂಧ ಹೊಂದಿದ ಸಮೂಹ" ಎಂದು ಅವಿಭಕ್ತ ಕುಟುಂಬದ ಬಗೆಗೆ ಅರ್ಥವಿವರಣೆ ಇದೆ(ದಾಮ್ಲೆ (ಸಂ.), ೨೦೦೩:೨೫೦). ಈ ಅಭಿಪ್ರಾಯ ಕೂಡ ಮೇಲಿನ ವ್ಯಾಖ್ಯಾನವನ್ನೇ ಸಮರ್ಥಿಸುವಂತಿದೆ. ರಾಮ್ ಅಹುಜಾ ಅವರ(ಅಹುಜಾ, ೨೦೦೮(೧೯೯೯):೧೦೧) ಪ್ರಕಾರ: "ಭಾರತದಲ್ಲಿ ಕೂಡು ಕುಟುಂಬ ವ್ಯವಸ್ಥೆ ಕಣ್ಮರೆಯಾಗದು ಮತ್ತು ಜನರ ಮಾನಸಿಕ ಪರಿಧಿಯಿಂದ ಅವಿಭಕ್ತ ಕುಟುಂಬವು ಕಳೆದುಹೋಗಿದೆ ಎಂದು ಊಹಿಸಲಾಗದು. ಅವಿಭಕ್ತ ಕುಟುಂಬಗಳ ರೂಪ ಮಾತ್ರ ಬದಲಾಗುತ್ತಿದೆ. ದೊಡ್ಡ ಅವಿಭಕ್ತ ಕುಟುಂಬಗಳ ಬದಲು ಎರಡು ತಲೆಮಾರಿನ ಕಿರು ಅವಿಭಕ್ತ ಕುಟುಂಬಗಳು ಸ್ಥಳೀಯವಾಗಿ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ಮಾತ್ರ ಕಾಣಬಹುದು." ಅಹುಜಾ ಅವರ ವ್ಯಾಖ್ಯಾನ ಮೇಲಿನ ವ್ಯಾಖ್ಯಾನಗಳಿಗಿಂತ ಭಿನ್ನವಾಗಿದ್ದು ಅವಿಭಕ್ತ ಕುಟುಂಬಗಳು ಅಳಿದಿರುವುದಿಲ್ಲ ಎಂಬುದನ್ನು ಸಮರ್ಥಿಸುವಂತೆ ಕಾಣುವ ಈ ವ್ಯಾಖ್ಯಾನದಲ್ಲಿ ಅದರ ಸ್ವರೂಪ ಬದಲಾಗಿದೆ ಎಂದು ಹೇಳುವುದನ್ನು ಕಾಣಬಹುದು.

ಬೇರೆ ಬೇರೆ ಕಾಲಘಟ್ಟದಲ್ಲಿ ನಿಂತು ನೋಡುವ ಒಬ್ಬೊಬ್ಬ ಸಮಾಜಶಾಸ್ತ್ರಜ್ಞರಿಗೂ ಕುಟುಂಬದ ಸ್ವರೂಪ ಭಿನ್ನವಾಗಿ ಕಾಣುವುದನ್ನು ಮೇಲಿನ ವ್ಯಾಖ್ಯಾನಗಳಲ್ಲಿ ಗುರುತಿಸಬಹುದು. ಆದರೆ ಕೊಡಗಿನ ಕುಟುಂಬಗಳಾದ ಒಕ್ಕಗಳ ಸ್ವರೂಪವನ್ನು ಕುರಿತು ಈವರೆಗೆ ಅಧ್ಯಯನ ನಡೆಸಿರುವ ವಿದ್ವಾಂಸರೆಲ್ಲರೂ ಅವಿಭಕ್ತ ಕುಟುಂಬ ಎಂಬ ತೀರ್ಮಾನಕ್ಕೆ ಬಂದಿದ್ದಾರೆ(ಶ್ರೀನಿವಾಸ್, ೧೯೮೯ (೧೯೫೨):೧೨೪), (ಮುತ್ತಣ್ಣ, ೧೯೫೩:೩೦೯). ಆದರೂ, ಇಂದು ಕೊಡಗಿನ ಒಕ್ಕಗಳು ಅವಿಭಕ್ತ ಕುಟುಂಬಗಳಾಗಿ ಉಳಿದಿವೆಯೇ, ಇಲ್ಲವೇ ಎಂದು ಮರುವ್ಯಾಖ್ಯಾನಿಸಬೇಕಾದ ಸಂದರ್ಭ ಒದಗಿದೆ. ಏಕೆಂದರೆ, ಜಾಗತೀಕರಣವು ಕೊಡಗಿನ ಪರಿಸರವನ್ನು ಆವರಿಸಿ ಎರಡು ದಶಕಗಳೇ ಕಳೆದಿವೆ. ಈ ಅವಧಿಯಲ್ಲಿ ಕೊಡಗಿನ ಒಕ್ಕಗಳ ಬದಲಾಗುತ್ತಿರುವ ಸ್ವರೂಪವನ್ನು ಗಂಭೀರವಾಗಿ ವಿದ್ವಾಂಸರು ಗಮನಿಸಿದಂತೆ ಕಾಣುತ್ತಿಲ್ಲ. ಈ ಹಿನ್ನೆಲೆಯಲ್ಲಿ ಒಕ್ಕಗಳ ಸ್ವರೂಪದ ಮರುವ್ಯಾಖ್ಯಾನವು ಅವಶ್ಯವಾಗಿದೆ.

ಕೊಡಗಿನ ಕೌಟುಂಬಿಕ ವ್ಯವಸ್ಥೆಯಲ್ಲಿ ಪ್ರತಿಯೊಂದು ಮನೆತನವು ತನ್ನದೇ ಆದ ಚಾರಿತ್ರಿಕ ಘಟನೆಯ ಹಿನ್ನೆಲೆಯ ಹೆಸರನ್ನು ಹೊಂದಿರುತ್ತದೆ. ಈ ಹಿನ್ನೆಲೆಯಲ್ಲಿ ಕೊಡವ ಕುಟುಂಬಗಳ ಮನೆಪೆದ(ಪೆದ ಎಂದರೆ ಹೆಸರು) ಕುರಿತಂತೆ ತಿಳಿದುಕೊಳ್ಳುವುದು ಅವಶ್ಯವಾಗಿದೆ. ಕೊಡಗಿನ

ಒಕ್ಕದ ಹೆಸರುಗಳ ಬಗ್ಗೆ ವಾಸ್ತವಾಂಶಗಳು ಲಭ್ಯವಿರದಿದ್ದರೂ ಕೊಡವರ ಕೌಟುಂಬಿಕ ಹಿನ್ನೆಲೆಯನ್ನು ಅರಿಯಲು ನಮಗೆ ಜನಪದರ ಕಥೆ, ಐತಿಹ್ಯಗಳೂ ಸಾಕಷ್ಟು ನೆರವಾಗುತ್ತವೆ.

ಕೊಡಗಿನ 'ಒಕ್ಕ' ವ್ಯವಸ್ಥೆಯು ಕೊಡವರಲ್ಲಿ ಮಾತ್ರವಲ್ಲದೆ ಕೃಷಿಕೇಂದ್ರಿತ ಸಮುದಾಯಗಳಾದ ಅಮ್ಮ, ಹೆಗ್ಗಡೆ, ಜಮ್ಮ ಮಾಪಿಳ್ಳೆ ಹಾಗೂ ಗೌಡ, ಕುಶಲಕರ್ಮಿ ಸಮುದಾಯಗಳಾದ ಐರಿ, ಕಣಿಯ, ಕಾಪಾಳ, ಕುಡಿಯ, ಕೋಯವ, ಕೋಲೆಯ, ಗೊಲ್ಲ, ನಾಯರ್, ನಾಯಿಂದ, ಪಣಿಕ, ಬಣ್ಣ, ಬಾಣಿಯ. ಬೂಣೆಪಟ್ಟ, ಮಡಿವಾಳ, ಮಲಿಯ ಮತ್ತು ಕೃಷಿಕಾರ್ಮಿಕ ಸಮುದಾಯಗಳಾದ ಕೆಂಬಟ್ಟಿ, ಮಾರಂಗಿ, ಮೇದ, ಮೊದಲಾದ ಸಮುದಾಯಗಳಲ್ಲಿಯೂ ಕಂಡುಬರುತ್ತದೆ ಎಂಬುದನ್ನು ಈಗಾಗಲೇ ಈ ಹಿಂದೆ ಚರ್ಚಿಸಲಾಗಿದೆ.

'ಕೆಂಬಟ್ಟಿ ಸಮುದಾಯವು' ಕೊಡಗಿನ ಸಾಂಸ್ಕೃತಿಕ ಮತ್ತು ಸಂಪ್ರದಾಯಗಳ ಅಧ್ಯಯನದ ದೃಷ್ಟಿಯಿಂದ ಮುಖ್ಯವಾದ ಸಮುದಾಯವಾಗುತ್ತದೆ. ಕೊಡಗಿನ ಎಲ್ಲ ಸಮುದಾಯಗಳಿಗಿಂತ ಇವರ ಸಂಸ್ಕೃತಿಯಲ್ಲಿ ಪುರಾತನತೆಯನ್ನು ಗುರುತಿಸಬಹುದಾಗಿದ್ದು, ಇವರ ಭಾಷೆ, ಸಂಸ್ಕೃತಿ, ಸಂಪ್ರದಾಯ ಮತ್ತು ಆಚರಣೆಗಳು ಉಳಿದ ಸಮುದಾಯಗಳಿಂದ ಅನುಕರಿಸಲ್ಪಟ್ಟಿರಬಹುದು ಎಂಬ ವಿಚಾರಗಳು ಇದೆ. ಹಾಗಾಗಿ ಈ ಅಧ್ಯಯನದಲ್ಲಿ ಈ ಆಯಾಮವನ್ನು ವಿಮರ್ಶಿಸುವ ದೃಷ್ಟಿಕೋನವಿದೆ.

ಕೊಡವರ 'ಮನೆಪೆದ'ಗಳನ್ನು ಕುರಿತಂತೆ ಯಾವುದೇ ಐತಿಹಾಸಿಕ ದಾಖಲೆಗಳು ನಮಗೆ ದೊರೆಯದಿದ್ದರೂ, ಜನಪದರ ಕಥೆಗಳು 'ಮನೆಪೆದ'ಗಳು ರೂಪುಗೊಂಡ ಬಗೆಗೆ ಮಾಹಿತಿಗಳನ್ನು ಒದಗಿಸುತ್ತವೆ ಎಂದು  ಕೊಡಗಿನ ಲೇಖಕರಾದ ಸಿ.ಪಿ. ಬೆಳ್ಳಿಯಪ್ಪ ಅವರು ತಮ್ಮ 'ಟೇಲ್ ಆಫ್ ಎ ಟೈಗರ್ಸ್ ಟೈಲ್' ಕೃತಿಯಲ್ಲಿ ವಿವರಿಸಿದ್ದಾರೆ. ಅವರ ಕೃತಿಯಲ್ಲಿ ಕೆಲವು ಕಾಲ್ಪನಿಕ ವಿವರಗಳು ಉದ್ಧೃತವಾಗಿದೆ. ಕೊಡಗಿನ ಒಕ್ಕನಾಮಗಳಿಗೆ ಸಂಬಂಧಿಸಿದಂತೆ ಅವರು ಈ ಕೆಳಗಿನ ಕಥೆಯನ್ನು ಅನಾವರಣಗೊಳಿಸುತ್ತಾರೆ –

> ಕೊಡವರು ತಮ್ಮ ಮೊದಲ ರಾಜನನ್ನು ಎಂದು ಅಂಗೀಕರಿಸಿದರೋ ಅಂದಿನಿಂದಲೇ ಆ ರಾಜನಿಗೆ ಈ ವಿಭಿನ್ನ ಕುಟುಂಬಗಳನ್ನು ಗುರುತಿಸಲು ಕಷ್ಟವಾಯಿತು. ಆಗ ರಾಜನು ತನ್ನ ಮಂತ್ರಿಗಳನ್ನು ಕರೆದು ಇದಕ್ಕೊಂದು ಪರಿಹಾರಸೂತ್ರ ಕಂಡು ಹಿಡಿಯುವಂತೆ ಸೂಚಿಸಿದನು. ಆಗ ಮಂತ್ರಿಗಳು ನಾಡಿನ ಎಲ್ಲ ಕುಟುಂಬಗಳ ಮುಖ್ಯಸ್ಥರನ್ನು ಕರೆದು ನಿಮ್ಮ ನಿಮ್ಮ ಕುಟುಂಬಗಳಿಗೆ ರಾಜರು ಹೆಸರಿಡಲು ಬಯಸಿದ್ದಾರೆ ಎಂದು ತಿಳಿಸಿದರು. ಅದರಂತೆ ಮನೆತನಗಳಿಗೆ ಹೆಸರು ನೀಡುವ 'ನಾಮಕರಣ ಸಮಾರಂಭ'ಕ್ಕೆ ದಿನಾಂಕವೊಂದು ನಿಗದಿಯಾಯಿತು.
>
> ಅದೊಂದು ಮಹತ್ವದ ಸಂಭ್ರಮಾಚರಣೆಯ ಸಂದರ್ಭವಾಗಿ ಅರಮನೆಯ ಅಂಗಳದಲ್ಲಿ ಬಹುದೊಡ್ಡ ಮಂಟಪವೊಂದು ನಿರ್ಮಾಣವಾಯಿತು. ಮನೆತನದ ಪ್ರಮುಖ ಸದಸ್ಯರು ನಾಡಿನ ಎಲ್ಲ ಕಡೆಯಿಂದ ಆಗಮಿಸಿದರು. ಗದ್ದಲ, ಗಡಿಬಿಡಿಗಳಿಲ್ಲದ ಮಂಟಪವನ್ನು

ಪ್ರವೇಶಿಸಿದ ರಾಜನು ಮುಖ್ಯ ಆಸನದಲ್ಲಿ ಆಸೀನನಾದನು. ನಂತರ ಸರದಿಯ ಸಾಲಿನಲ್ಲಿ ನಿಂತ ಮೊದಲ ವ್ಯಕ್ತಿಯನ್ನು ಕುರಿತು 'ನೀನು ಎಲ್ಲಿ ವಾಸವಾಗಿದ್ದೀಯೆ?' ಎಂದು ಕೇಳಿದನು. ಆಗ ಆ ವ್ಯಕ್ತಿ ನನ್ನ ಅಪ್ಪನ ಮನೆಯಲ್ಲಿ ವಾಸವಾಗಿದ್ದೇನೆ ಎಂದನು. ಕ್ಷಣಕಾಲ ಯೋಚಿಸಿದ ರಾಜ ನೀನು ನಿನ್ನ ಅಪ್ಪನ ಮನೆಯಲ್ಲಿ ವಾಸವಾಗಿರುವುದರಿಂದ ನಿನ್ನ ಕುಟುಂಬಕ್ಕೆ ಮನೆ-ಅಪ್ಪಂಡ(ಅಪ್ಪಂಡ ಎಂದರೆ ತಂದೆ. ಮನೆಯಪ್ಪಂಡ ಎಂದರೆ ತಂದೆಯ ಮನೆ) ಎಂಬ ಹೆಸರು ನೀಡಿದ್ದೇನೆ. ನೀನು ಮುಂದೆ ಹೆಚ್ಚು ಹೆಚ್ಚು ಮನೆಗಳನ್ನು ಕಟ್ಟಿ ಅಭಿವೃದ್ಧಿ ಹೊಂದು ಎಂದು ಹಾರೈಸಿದನು.

ನಂತರ ಮುಂದೆ ಬಂದ ಮತ್ತೊಬ್ಬ ವ್ಯಕ್ತಿಯನ್ನು ಕುರಿತು ರಾಜನು 'ನಿನಗೆ ಎಷ್ಟು ಮಕ್ಕಳು?' ಎಂದು ಕೇಳಿದನು. ಅದಕ್ಕಾತ ಆರು ಮಕ್ಕಳು ಎಂದು ಉತ್ತರಿಸಿದ. ನೀನು ಆರು ಮಕ್ಕಳ ತಂದೆಯೋ, ಒಳ್ಳೆಯದು ನಿನ್ನ ಕುಟುಂಬಕ್ಕೆ 'ಅಪ್ಪ-ಆರಂಡ' ಎಂದು ಹೆಸರಿಸಿದ್ದೇನೆ ಎಂದು ಹೇಳಿ(ಅಪ್ಪ ಎಂದರೆ ತಂದೆ ಆರಂಡ ಎಂದರೆ ಆರು(೬). ಮುಂದೆ ಅದು ಅಪ್ಪಾರಂಡ ಆಯಿತು.) ನಿನ್ನ ಕುಟುಂಬ ಸೌಖ್ಯವಾಗಿ ಬೆಳೆಯಲಿ ಎಂದು ಆಶೀರ್ವದಿಸಿದನು.

ಬುದ್ಧಿವಂತರಾದ ಮೂವರು ಅಣ್ಣ-ತಮ್ಮಂದಿರು ರಾಜನ ಮುಂದೆ ಬಂದು ನಿಂತಾಗ ಒಬ್ಬ ಮಂತ್ರಿ ರಾಜನ ಕಿವಿಯಲ್ಲಿ ಈ ಮೂವರು ಅವರ ತಂದೆಗಿಂತ ಬುದ್ಧಿವಂತರು ಎಂದು ಪಿಸುಮಾತಿನಲ್ಲಿ ಹೇಳಿದನು. ಅದಕ್ಕೆ ರಾಜನು ಮೂವರು ಅಣ್ಣ-ತಮ್ಮಂದಿರನ್ನು ಕುರಿತು ನೀವು ನಿಮ್ಮ ತಂದೆಯಂತೆ ಬುದ್ಧಿವಂತರಾಗಿರುವುದರಿಂದ ನಿಮ್ಮ ಮನೆತನಕ್ಕೆ 'ಮಂಡೆ ಅಪ್ಪಂಡ'(ಮಂಡೆ ಎಂದರೆ ತಲೆಬುದ್ಧಿ) ಎಂದು ಹೆಸರಿಸಿರುವುದಾಗಿ ತಿಳಿಸಿದನು.

ಸರದಿಯಂತೆ ಒಬ್ಬ ಯುವಕ ತನ್ನ ಇಬ್ಬರು ಮಕ್ಕಳೊಡನೆ ಬಂದಾಗ ರಾಜನು ಈ ಮಕ್ಕಳು ಯಾರು ಎಂದು ಕೇಳಿದ್ದಕ್ಕೆ ಆ ಇಬ್ಬರು ನನ್ನ ಮಕ್ಕಳು ಎಂದು ಹೇಳಿದ. ಅದಕ್ಕೆ ರಾಜನು ನೀನು ಚಿಕ್ಕವಯಸ್ಸಿನಲ್ಲಿಯೇ ತಂದೆಯಾಗಿರುವುದರಿಂದ ನಿನಗೆ 'ಚೆರಿಯ ಅಪ್ಪಂಡ'(ಚೆರಿಯ ಎಂದರೆ ಚಿಕ್ಕ) ಎಂದು ಹೆಸರಿಸಿ ಅಭಿವೃದ್ಧಿ ಹೊಂದು ಎಂದು ಹರಸಿದನು.

ನಂತರ ಬಂದ ವ್ಯಕ್ತಿ ರಾಜನಿಗೆ ಒಂದು ದೊಡ್ಡ ಹಲಸಿನ ಹಣ್ಣನ್ನು ಉಡುಗೊರೆಯಾಗಿ ತಂದಿದ್ದ. ಅದನ್ನು ಸ್ವೀಕರಿಸಿದ ರಾಜನಿಗೆ ಆತನ ಮನೆತನಕ್ಕೆ ಹೆಸರು ನೀಡಲು ಸುಲಭವಾಯಿತು. ಆತನ ಮನೆತನಕ್ಕೆ 'ಚಕ್ಕೆರ'(ಚಕ್ಕೆ ಎಂದರೆ ಹಲಸಿನ ಹಣ್ಣು) ಎಂದು ಹೆಸರಿಸಿದನು.

ಅಂತೆಯೇ ಬಾಳೆಹಣ್ಣು ತಂದವನ ಕುಟುಂಬಕ್ಕೆ 'ಬಾಳೆರ' ಎಂದೂ, ಮಾವಿನ ಹಣ್ಣು ತಂದವನ ಕುಟುಂಬಕ್ಕೆ 'ಮಾಂಗೇರ' ಎಂದೂ, ಹಂದಿ ಮಾಂಸದ ತುಂಡುಗಳನ್ನು ತಂದವನ ಕುಟುಂಬಕ್ಕೆ 'ಪಂದಿಯಂಡ 'ಎಂದೂ ನಾಮಕರಣ ವಾಯಿತು.

ವಯೋವೃದ್ಧನೊಬ್ಬ ಊರುಗೋಲು ಹಿಡಿದು ರಾಜನ ಬಳಿ ಬರುವಾಗ ಊರುಗೋಲು ಜಾರಿ ಬೀಳುವವನಿದ್ದ. ಸುತ್ತಲಿನ ಜನ ಇದನ್ನು ನೋಡಿ "ಬಿದ್ದ, ಬಿದ್ದ, ಬಿದ್ದ" ಎಂದು ಕೂಗಲಾರಂಭಿಸಿದರು. ವೃದ್ಧ ಇನ್ನೇನು ನೆಲಕ್ಕೆ ಅಪ್ಪಳಿಸಬೇಕು ಎನ್ನುವಷ್ಟರಲ್ಲಿ

ಕೆಲವರು "ಪುಡಿ, ಪುಡಿ, ಪುಡಿರ" ಎಂದು ಕಿರುಚತೊಡಗಿದರು. ಆಗ ಹಳ್ಳಿಗಾಡಿನ ಗಟ್ಟಿಗನೊಬ್ಬ ಅವನನ್ನು ಹಿಡಿದುಕೊಂಡ. ಇದನ್ನೆಲ್ಲ ನೋಡುತ್ತಿದ್ದ ರಾಜ ಆ ವೃದ್ಧನ ಕುಟುಂಬಕ್ಕೆ 'ಬಿದ್ದಂಡ' ಎಂದು ಹೆಸರಿಸಿರುವುದಾಗಿ ತಿಳಿಸಿದನು.

ವೃದ್ಧನನ್ನು ಹಿಡಿದ ಹಳ್ಳಿಗನನ್ನು ಕುರಿತು 'ಪುಡಿರ' ಎಂದು ನಿಮ್ಮ ಕುಟುಂಬಕ್ಕೆ ಹೆಸರು ಕೊಡುವುದಾಗಿ(ಪುಡಿರ ಎಂದರೆ ಹಿಡಿದವನು) ರಾಜನು ಹೇಳಿದಾಗ ಆ ಹಳ್ಳಿಗನು ಛೆ, ಛೆ, ನನ್ನ ಕುಟುಂಬಕ್ಕೆ ಇಂಥ ಹೆಸರು ನೀಡುವುದೇ ಎಂದು ಪ್ರಶ್ನಿಸಿದನು. ಇದು ನಾಮಕರಣ ಸಮಾರಂಭದಲ್ಲಿ ರಾಜನಿಗೆ ಕೇಳಿದ ಮೊದಲ ಪ್ರಶ್ನೆಯಾಗಿತ್ತು. ಇದರಿಂದ ರಾಜನಿಗೆ ಸ್ವಲ್ಪ ಕೋಪ ಬಂದಿತು. ಕ್ಷಣಕಾಲ ಯೋಚಿಸಿದ ರಾಜ ಹಾಗಾದರೆ ನಿಮ್ಮ ಕುಟುಂಬಕ್ಕೆ 'ಚೆಪ್ಪುಡಿರ'(ಛೆ.ಪುಡಿರ) ಎಂದು ಹೆಸರಿಸುತ್ತೇನೆ ಎನ್ನುತ್ತಾರೆ.

ಇಷ್ಟಾದರೂ ಸರದಿಯ ಸಾಲು ದೊಡ್ಡದೇ ಇತ್ತು. ಸಾಲಿನ ಮಧ್ಯೆ ಮುದುಕನೊಬ್ಬ ಬೇಸರದಿಂದ ತನ್ನ ಊರುಗೋಲಿನಿಂದ ನೆಲವನ್ನು ಕುಟ್ಟುತ್ತಿದ್ದ. ಈ ಶಬ್ದವು ರಾಜನಿಗೆ ಕಿರಿಕಿರಿ ಉಂಟುಮಾಡಿತು. ಆತನನ್ನು ಕರೆಸಿದ ರಾಜ ನೆಲವನ್ನು ಕುಟ್ಟಬೇಡವೆಂದು ಹೇಳುವಾಗ ಏನೋ ಹೊಳೆದಂತಾಗಿ ನಿನ್ನ ಕುಟುಂಬಕ್ಕೆ 'ಕುಟ್ಟಂಡ' ಎಂದು ಹೆಸರು ನೀಡಿದ್ದೇನೆ ಎಂದನು. ಕುಟ್ಟು ಎಂದರೆ ಕುಟ್ಟುವುದು. ಅಂಡ ಎಂದರೆ ಕುಟ್ಟಬೇಡ ಎಂದರ್ಥ.

ಇಲ್ಲಿಗೆ ಅಂದಿನ ನಾಮಕರಣ ಕಾರ್ಯಕ್ರಮವನ್ನು ಕೊನೆಗೊಳಿಸಿ ಮುಂದಿನ ದಿನವೊಂದನ್ನು ನಿಗದಿ ಮಾಡಿ ನಾಮಕರಣ ಮಾಡಲು ರಾಜನು ನಿರ್ಧರಿಸಿ ಹೊರಟನು. ಆಗ ಸರದಿಯಲ್ಲಿದ್ದ ವ್ಯಕ್ತಿಯೊಬ್ಬ 'ರಾಜ, ನಾನಿನ್ನೂ ಇದ್ದೇನೆ' ಎಂದು ಕೈಮುಗಿದು ಕೇಳಿಕೊಂಡನು. 'ನೀನಿನ್ನೂ ಇದ್ದೀಯೇನೋ, ಸರಿ ಹಾಗಾದರೆ ನಿನ್ನ ಕುಟುಂಬದ ಹೆಸರು 'ಉಳ್ಳಿಯಡ"(ಉಳ್ಳಿಯ ಎಂದರೆ ಇನ್ನೂ ಇರುವೆಯಾ ಎಂದರ್ಥ).

ರಾಜ ಮಂಟಪದಿಂದ ಹೊರ ಹೊರಟಾಗ ಒಬ್ಬ ವ್ಯಕ್ತಿ ಓಡಿ ಬಂದು ರಾಜ ಇಂದೇ ನನ್ನ ಕುಟುಂಬಕ್ಕೆ ಹೆಸರಿಸಬೇಕೆಂದು ವಿನಂತಿಸಿಕೊಂಡ. ರಾಜನಿಗೆ ನಾಮಕರಣ ಮಾಡುವ ಮನಸ್ಥಿತಿ ಇರಲಿಲ್ಲ. ರಾಜ ಕೈ ಮುಗಿದು ಮದಿ ಮಾಡ್ರಿರ ಎಂದನು(ಮದಿ ಮಾಡ್ರಿ ಎಂದರೆ ಸಾಕು ಎಂದರ್ಥ). ಆದರೆ ಆತ ರಾಜ ನನ್ನ ಕುಟುಂಬಕ್ಕೆ 'ಮಾಡಿ-ರಿರ' ಎಂದು ಹೆಸರು ಕೊಟ್ಟರೆಂದು ಭಾವಿಸಿದ. ಅಂದಿನಿಂದ ಆ ಮನೆತನ 'ಮದ್ರಿರ' ಮನೆತನವಾಯಿತು.

ನಂತರ ರಾಜನು ಅರಮನೆಯನ್ನು ಪ್ರವೇಶಿಸುವಾಗ ಅರಮನೆಯಲ್ಲಿ ಕೆಲಸ ಮಾಡುವಾತನೊಬ್ಬ ರಾಜನಿಗೆ ತನಗೊಂದು ಒಳ್ಳೆಯ ಮನೆತನದ ಹೆಸರು ನೀಡುವಂತೆ ಕೋರಿದ. ರಾಜ ಆ ಮನೆತನಕ್ಕೆ ಕೋಟೆರ ಎಂದು(ಕೋಟೆ-ರ) ಕರೆದನು. ಅಂದಿನಿಂದ ಆ ಮನೆತನವನ್ನು ಕೋಟೆರ ಮನೆ ಎಂದು ಕರೆಯಲಾಯಿತು"(ಬೆಳ್ಳಿಯಪ್ಪ: ೧೩-೧೫) (ಭಾವಾನುವಾದ ಸಂಶೋಧಕರದ್ದು).

ಈ ಮೇಲಿನ ವಿವರಗಳನ್ನು ಸಿ.ಪಿ.ಬೆಳ್ಳಿಯಪ್ಪ ಅವರು ಕೊಡಗಿನಲ್ಲಿ ಚಾಲ್ತಿಯಲ್ಲಿರುವ ಐತಿಹ್ಯ, ಕಟ್ಟುಕಥೆಗಳು ಮತ್ತು ಜಾನಪದ ಹಾಡು ಅಥವಾ ಕಥೆಗಳಿಂದ ಸಂಗ್ರಹಿಸಿದಂತೆ

ತೋರುತ್ತದೆ. ಕೊಡಗು ಲಿಂಗಾಯತ ಅರಸರ ಕಾಲದಲ್ಲಿ ತೆರಿಗೆ ನಿಗದಿಪಡಿಸುವ ಅಥವಾ ಮಿಲಿಟರಿ ಸೇವೆ'ಯನ್ನು ಪಡೆಯುವ ದೃಷ್ಟಿಯಲ್ಲಿ ಒಬ್ಬೊಬ್ಬ ವ್ಯಕ್ತಿಗೂ ಒಂದೊಂದು ಮನೆತನವನ್ನು ಕೊಟ್ಟು ಜಮ್ಮ ಜಹಗೀರನ್ನು ಕೊಟ್ಟಿರುವುದು ಭಾಗಶಃ ನಿಜವಾದರೂ, ಅರಸರ ಆಳ್ವಿಕೆಗೆ ಮೊದಲೇ ಕೊಡಗಿನಲ್ಲಿ ಮನೆತನ ಅಥವಾ 'ಒಕ್ಕ'ಗಳು ಅಸ್ತಿತ್ವದಲ್ಲಿ ಇದ್ದುದಕ್ಕೆ ಸಾಕಷ್ಟು ಪುರಾವೆಗಳಿವೆ. ಒಕ್ಕನಾಮಗಳುಳ್ಳ ಮನೆತನಗಳು ಕ್ರಮೇಣ ಒಂದು ವ್ಯವಸ್ಥೆಯಾಗಿ ಬೆಳೆದುಬಂದವು ಎಂದರೆ ತಪ್ಪಾಗಲಾರದು.

ಈ ರೀತಿಯ ಐತಿಹ್ಯಗಳು, ಕಥೆಗಳು, ಒಕ್ಕನಾಮ(ಮನೆಪೆದ)ಗಳ ನಿಷ್ಪತ್ತಿಯ ಹಿನ್ನೆಲೆಯನ್ನು ಅರ್ಥೈಸಿಕೊಳ್ಳಲು ಸಹಾಯ ಮಾಡುವುವು. ಅಷ್ಟೇ ಅಲ್ಲದೆ, ಕೊಡಗಿನ ಭೌಗೋಳಿಕ ಪರಿಸರದ ಅಂಶಗಳನ್ನು, ವೃತ್ತಿಗಳನ್ನು, ಮೂಲನೆಲೆ ಮೊದಲಾದವುಗಳನ್ನು ಆಧರಿಸಿ ಮನೆಪೆದಗಳು ರೂಪುಗೊಂಡಿರುವುದನ್ನು ಅರಿಯಬಹುದು. ಉದಾಹರಣೆಗೆ ವಾಟೇರಿರ ಎಂಬ ಮನೆಪೆದವು 'ವಾಟೈರಿರ' ಎಂಬ ಮೂಲದಿಂದ ಬಂದಿರುವ ಸಾಧ್ಯತೆ ಇದೆ. 'ವಾಟೆ' ಎಂದರೆ ಹೊಳೆದಂಡೆಯಲ್ಲಿ ಹೇರಳವಾಗಿ ಬೆಳೆಯುವ ಚಿಕ್ಕಜಾತಿಯ ಬಿದಿರು. 'ಐರಿರ' ಎಂದರೆ ಮಾಡುವವರು ಅಥವಾ ಹೆಣೆಯುವವರು. ಈ ಹಿನ್ನೆಲೆಯಲ್ಲಿ ವಾಟೇರಿರ ಒಕ್ಕದ ಪದನಾಮ ನಿಷ್ಪತ್ತಿಯಾಗಿರುವ ಸಾಧ್ಯತೆ ಇದೆ. ಹೀಗಾಗಿ ವಾಟೆಗೂ ಈ ಮನೆತನದ ವೃತ್ತಿ ಅಥವಾ ಪ್ರವೃತ್ತಿಗೂ ಸಂಬಂಧ ಕಲ್ಪಿಸಬಹುದು.

ಐಚೆಟ್ಟಿರ, ಕೊಂಗೆಟ್ಟಿರ, ಬದ್ದಂಜೆಟ್ಟಿರ, ಪೊನ್ನಚೆಟ್ಟಿರ ಮುಂತಾದ ಮನೆಪದಗಳಲ್ಲಿ **ಚೆಟ್ಟಿರ** ಪದವನ್ನು ಗುರುತಿಸುವಾಗ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ **ಶೆಟ್ಟಿ** ಪದ ಚೆಟ್ಟಿಯಾಗಿ ಪ್ರಯೋಗ ವಾಗಿರುವುದನ್ನು ಕಾಣಬಹುದು(ರಿಕ್ತರ್, ೧೮೮೭). ಶೆಟ್ಟಿ ಜನಾಂಗಕ್ಕೂ ಈ ಮನೆತನಗಳಿಗೂ ಯಾವುದೋ ಪೂರ್ವಾಪರ ಸಂಬಂಧಗಳಿರಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಕೊಂಗೆಟ್ಟಿರ ಎಂಬುದು ಒಂದು ಒಕ್ಕದ ಹೆಸರಾಗಿದ್ದು, 'ಕೊಂಗು+ಚೆಟ್ಟಿ' ಇಂದ ನಿಷ್ಪನ್ನಗೊಂಡಿದೆ. ಕೊಂಗು ಎಂಬ ಶ್ರೇಷ್ಠಿ(ವರ್ತಕ) ಈ ಮನೆತನದೊಂದಿಗೆ ಸಂಬಂಧ ಹೊಂದಿರಬಹುದು. ಇಂದಿಗೂ ಕೊಂಗು ಹೆಸರಿನ ವ್ಯಕ್ತಿನಾಮಗಳು ಮತ್ತು ಒಕ್ಕನಾಮಗಳು ಕೊಡಗಿನ ಪರಿಸರದಲ್ಲಿವೆ. ಆದ್ದರಿಂದ ಆ ಚೆಟ್ಟಿ(ಶ್ರೇಷ್ಠಿ) ಕೊಂಗು ಪ್ರದೇಶದವನಾಗಿರಬಹುದು. ಇಂದಿಗೂ ಈ ಮನೆತನ ಕೊಡವರಲ್ಲಿ ಒಂದು ಪ್ರಮುಖ ಒಕ್ಕವಾಗಿರುವುದನ್ನು ಕಾಣಬಹುದು. ಈ ರೀತಿಯಾಗಿ ಒಕ್ಕಗಳು ಸೃಷ್ಟಿಯಾಗಿರುವುದನ್ನು ಉಳಿದ ಒಕ್ಕಗಳ ಸಂದರ್ಭದಲ್ಲಿಯೂ ಕಾಣಬಹುದು. ಪಾಲೆಯಡ, ಪಾಲೆಯಂಡ, ಪಾಲೆಂಗಡ ದಕ್ಷಿಣ ಕನ್ನಡದಿಂದ ಕೊಡಗಿಗೆ ಕೆಲಸಗಾರರಾಗಿ ಬಂದಿರುವ ಪಾಲೆ ಅಥವಾ ಕೊರಗ ಜನಾಂಗದವರಿಗೂ ಮೇಲಿನ ಮನೆತನಗಳಿಗೂ ಯಾವುದೋ ಸಾಂಸ್ಕೃತಿಕ ಅಥವಾ ಇನ್ನಾವುದೋ ನೆಲೆಯ ಸಂಬಂಧವಿರಬಹುದು. ಚೌರಿರ ಎನ್ನುವ ಒಕ್ಕದ 'ಚೌರಿ' ಪದವು ಚವರಿ(ಚಾಮರ) ಎಂಬ ಪದದೊಟ್ಟಿಗೆ ಸಂಬಂಧ ಪಡೆಯುವುದರಿಂದ ಈ ಕುಟುಂಬ ಚಾಮರಸಂಬಂಧಿ ಕಾರ್ಯದಲ್ಲಿ ತೊಡಗಿರಬಹುದು. ಇಲ್ಲವೆ, ಅಂಥದೇ ಕಾರ್ಯ ಸಂಬಂಧಿ

ಕ್ರಿಯೆಯಲ್ಲಿ ತೊಡಗಿರುವ ಈ ಕುಟುಂಬಕ್ಕೆ ಹೊಂದಿಕೆಯಾಗಬಹುದಾದ ಸಂಭವವಿದೆ. ನಡಿಕೇರಿಯಂಡ ಕುಟುಂಬ ಹೊಂದಿರುವ 'ನಡಿಕೇರಿ' ಪದ ನಡುಕೇರಿ ಪದಕ್ಕೆ ಸಂವಾದಿಯಾಗಿ ಪ್ರಯೋಗವಾಗಿರಬಹುದು. ಹೀಗಾಗಿ ಈ ಕುಟುಂಬದವರು ನಡುಕೇರಿಯಿಂದ ಅಂದರೆ ಮೊದಲು ಕೇರಿಯ ಮಧ್ಯದಲ್ಲಿ ವಾಸವಿದ್ದವರಾಗಿ ನಂತರ ವಿಸ್ತರಿಸಿಕೊಂಡಿರಬಹುದು ಎಂದು ಊಹಿಸಬಹುದು. ಹಾಗೆಯೇ ಕೊಡಗಿನ ಜಾನಪದ ಹಾಡು 'ಬಾಳೋ ಪಾಟ್'ನಲ್ಲಿ 'ನಾಯನ್ಮಾರ್ ನಡಿಕೇರಿಯ' ಎಂದು ಉಲ್ಲೇಖವಿರುವುದರಿಂದ ನಡಿಕೇರಿಯಂಡ ಕುಟುಂಬದ ಮೂಲಪುರುಷನು ಮಲಬಾರ್ ನಾಯನ್ಮಾರ್ ಅಥವಾ ನಾಯರ್ ಜನಾಂಗಕ್ಕೆ ಸೇರಿದವನಾಗಿದ್ದಿರಬಹುದೆಂದು ಊಹಿಸಬಹುದು. ಆದರೆ, ಇತ್ತೀಚಿನ ಸಂಶೋಧನೆಯಲ್ಲಿ ನಡಿಕೇರಿ ಎನ್ನುವ ಊರು ದಕ್ಷಿಣ ಕೊಡಗಿನಲ್ಲಿ ಇದ್ದು, ಅಲ್ಲಿ ನಾಯಿಂದ ಸಮುದಾಯದವರು ಬಹುಸಂಖ್ಯೆಯಲ್ಲಿ ಇದ್ದ ಕಾರಣ ನಾಯಿಂದರ ಕೇರಿ> ನಡುಕೇರಿ> ನಡಿಕೇರಿ ಎಂದಾಯಿತು ಎನ್ನಲಾಗಿದೆ(ಲಲಿತ, ೨೦೧೫:೨೫೭). ಈ ಊರಿನಿಂದ ನಡಿಕೇರಿಯಂಡ ಒಕ್ಕದ ಮೂಲಪುರುಷರು ಬಂದಿರಬಹುದು ಎಂಬ ಅಭಿಪ್ರಾಯವೂ ಇದೆ. ಕಲಿಯಾಟಂಡ ಒಕ್ಕನಾಮದಲ್ಲಿ 'ಕಲಿ' ಎಂದರೆ ವೀರ, ಹೋರಾಟಗಾರ ಎಂದರ್ಥ ದೊರೆಯುವುದ ರಿಂದ ಈ ಕುಟುಂಬವು ಹೋರಾಟಗಾರರನ್ನು ಹೊಂದಿದ್ದ ಕುಟುಂಬವಾಗಿರಬಹುದು. ಇಲ್ಲವೇ ಕಲಿ ಎನ್ನುವುದು ಲರ್ನಿಂಗ್ ಎನ್ನುವ ಅರ್ಥವನ್ನೂ ಪಡೆಯುವುದರಿಂದ ಕಲಿಯುವ ಕ್ರಿಯೆಯಲ್ಲಿ ಈ ಕುಟುಂಬ ಸದಸ್ಯರು ಆಸಕ್ತಿ ತೋರುತ್ತಿದ್ದುದು ಕಾರಣವಿರಬಹುದು. ನುಚ್ಚಿಮಣಿಯಂಡ ಒಕ್ಕದ ಹೆಸರಿನಲ್ಲಿ 'ನುಚ್ಚಿಮಣಿ' ಅಕ್ಕಿಯ ನುಚ್ಚನ್ನು ಅರ್ಥೈಸುವ ನೆಲೆಯಲ್ಲಿ ನೋಡುವಾಗ ಈ ಕುಟುಂಬ ಚಿಕ್ಕ ಚಿಕ್ಕ ಘಟಕಗಳಾಗಿ ವಿಭಾಗವಾಗಿರುವ ಇಲ್ಲವೇ ಚಿಕ್ಕ ಘಟಕಗಳು ಒಕ್ಕವಾಗಿರುವ ಸಂಭವವನ್ನು ಕಲ್ಪಿಸಬಹುದಾಗಿದೆ. ಬಿದ್ದಾಟಂಡ, ಕಲ್ಯಾಟಂಡ, ಬಲ್ಯಾಟಂಡ ಮೊದಲಾದ ಒಕ್ಕಗಳನ್ನು ಗಮನಿಸಿದಾಗ ಮಲೆಯಾಳ ಭಾಷೆಯಲ್ಲಿ ಬಲ್ಯ(ಬಲಿಯ) ಎಂದರೆ ದೊಡ್ಡ ಮನೆತನ. ಇಲ್ಲಿ **ಯಾಟ** ಎಂದರೆ ಅಣ್ಣ. ಹೀಗಾಗಿ ಈ ಕುಟುಂಬದ ಹಿರಿಯರನ್ನು ಅಣ್ಣನೆಂದು ಸಂಬೋಧಿಸುತ್ತಲೇ ಆ ಕುಟುಂಬಕ್ಕೆ ಯಾಟಂಡ ಪದ ಪ್ರಯೋಗವಾಗಿರುವ ಸಂಭವನೀಯತೆ ಹೆಚ್ಚು(ರಿಕ್ಟರ್, ೧೮೮೭). ಹಾಗಾಗಿ ಇಲ್ಲಿ ಮಲಯಾಳಂ ಮೂಲವನ್ನು ಕಾಣಬಹುದು. ಜೈನಿರ ಒಕ್ಕವು ಗೌಡ ಸಮುದಾಯದ ಒಕ್ಕವಾದರೂ, ಅವರು ಅರೆಭಾಷೆಯನ್ನಾಡದೆ 'ಕೊಡವ' ಭಾಷೆಯನ್ನೇ ಸಂಪೂರ್ಣವಾಗಿ ಮನೆ ಭಾಷೆಯಾಗಿಯೇ ಬಳಸುತ್ತಾರೆ. ಬಹುಶಃ ಹಾಸನ ಮೂಲಕ ಗೌಡ ಸಮುದಾಯವು(ಗಂಗ ವಂಶದ ದೊರೆಗಳ ಆಳ್ವಿಕೆಯ ಕಾಲದಲ್ಲಿ ಗೌಡರು ಜೈನಧರ್ಮವನ್ನು ಅನುಸರಿಸುತ್ತಿದ್ದರು) ಚೇಲವಾರ ಗ್ರಾಮದಲ್ಲಿ ನೆಲೆ ನಿಂತಂತಿದೆ. ಕೊಡವರ ನಡುವೆಯೇ ಉಳಿದ ಈ ಜನರು ಮನೆಭಾಷೆಯನ್ನು ಕಾಲಾನಂತರದಲ್ಲಿ ಮರೆತು ಸಮಾಜದಲ್ಲಿ ಬಳಕೆಯಲ್ಲಿದ್ದ ಕೊಡವ ಭಾಷೆಯನ್ನೇ ಬಳಸುತ್ತಾ ಬಂದಂತೆ ಕಾಣುತ್ತದೆ. ಹೀಗೆ ಕೊಡವ ಭಾಷೆಯನ್ನೇ ಮಾತೃಭಾಷೆಯನ್ನಾಗಿಸಿಕೊಂಡಿರುವ ಮತ್ತೊಂದು ಅರೆಭಾಷೆ ಗೌಡ ಸಮುದಾಯದ ಇನ್ನೊಂದು ಒಕ್ಕ ಎಂದರೆ 'ಕೊಂಬನ' ಮನೆತನ. ತುಳುನಾಡಂಡ ಮನೆತನದವರು ದಕ್ಷಿಣಕನ್ನಡದಿಂದ

ಬಂದವರಾಗಿರಬಹುದು. ಅಲ್ಲಿ ತುಳು ಭಾಷೆ ಪ್ರಧಾನವಾಗಿದೆ. ಕೊಡವ ಮನೆತನದವರಾದ ಈ ಒಕ್ಕಕ್ಕೂ ತುಳುನಾಡಿನ ಜನರಿಗೂ ಸಂಬಂಧವಿರಬಹುದು ಎಂದೂ ಊಹಿಸಬಹುದಾಗಿದೆ.

ತಟ್ಟಂಡ ಮನೆತನದವರು 'ಐರಿ' ಸಮುದಾಯಕ್ಕೆ ಸೇರಿದೆ. 'ತಟ್ಟ' ಎಂದರೆ ಕೊಡಗು ಭಾಷೆಯಲ್ಲಿ 'ಅಕ್ಕಸಾಲಿಗ' ಎನ್ನುವ ಅರ್ಥಕೊಡುತ್ತದೆ. ಅಕ್ಕಚಿರ ಎನ್ನುವ ಮನೆತನ ಕೂಡ 'ಐರಿ' ಸಮುದಾಯದಲ್ಲಿದೆ. ಕೊಡಗಿನ ಪರಿಸರದಲ್ಲಿ ಸಾಮಾನ್ಯವಾಗಿ 'ಅಕ್ಕಚಿ' ಎಂದು ಹೆಣ್ಣು ಮಕ್ಕಳಿಗೆ ಹೆಸರಿರುತ್ತದೆ. ಹೆಗ್ಗಡೆ ಸಮುದಾಯದಲ್ಲಿ 'ತೋಟತಂಡ' ಎನ್ನುವ ಮನೆತನವಿದೆ. ಈ ಮನೆತನಕ್ಕೆ ಹೆಚ್ಚಾಗಿ 'ತೋಟ'(ಕೃಷಿ) ಇದ್ದುದರಿಂದ ಈ ಹೆಸರು ಬಂದಿರಬಹುದಾಗಿದೆ. ಬಲ್ಯ ಮಂಡೂರು ಗ್ರಾಮದ 'ಕೊರಕಂಡ' ಮನೆತನ ಹೆಗ್ಗಡೆ ಸಮುದಾಯಕ್ಕೆ ಸೇರಿದೆ. ಕೊರುಕಂಡ ಒಕ್ಕದ ಅರುವ(ಗೆಳೆಯ ಒಕ್ಕ)ರು ಒಂದು ಕಾಲಕ್ಕೆ 'ಒಳಿಪಂಡ' ಒಕ್ಕವಾಗಿತ್ತು. ಈ ಒಕ್ಕವು ಕೂಡ ಹೆಗ್ಗಡೆ ಸಮುದಾಯಕ್ಕೆ ಸೇರಿದುದಾಗಿದ್ದು, ಈಗ ನಿರ್ವಂಶವಾಗಿರುವ ಒಕ್ಕವಾಗಿದೆ. ಕೊಡಗು ಭಾಷೆಯಲ್ಲಿ 'ಒಳಿಪ' ಎಂದರೆ ಅಡಗಿಕೊಳ್ಳುವುದು ಎಂದು ಅರ್ಥ. ಅಂದರೆ ಅಡಗಿಕೊಳ್ಳುವ ಪ್ರವೃತ್ತಿಯಿದ್ದವರ ಮನೆತನ ಎಂದರ್ಥ. ಹೆಗ್ಗಡೆ ಸಮುದಾಯದ ತೋರೆರ, ಮಚ್ಚಂಡ, ತಂಬಂಡ, ಅಚ್ಚಪ್ಪಂಡ, ಚೋವಂಡ, ಅಜ್ಜೇಟಿರ, ಚೋಕಿರ, ಮಂಡೇಡ, ಚಾರಿಮಂಡ, ಪೆಮ್ಮಂಡ, ಬೊಳ್ಯಮಂಡ, ಬೊಪ್ಪಂಡ ಮೊದಲಾದ ಹೆಸರಿನ ಮನೆತನಗಳು ಕೊಡವ ಸಮುದಾಯದಲ್ಲಿಯೂ ಇದೆ. ಕೊಡವ ಸಮುದಾಯದ ಮನೆತನದ ಹೆಸರುಗಳು ಹೆಗ್ಗಡೆ ಸಮುದಾಯವಲ್ಲದೆ ಇನ್ಯಾವ ಸಮುದಾಯದಲ್ಲಿಯೂ, ಅಷ್ಟಾಗಿ ಕಂಡು ಬರುವುದಿಲ್ಲ. ಗೊಲ್ಲ ಸಮುದಾಯದಲ್ಲಿ 'ನಂಬಂಡ' ಎನ್ನುವ ಮನೆತನವಿದೆ. 'ನಂಬಂಡ' ಎಂದರೆ ಕೊಡಗು ಭಾಷೆಯಲ್ಲಿ 'ನಂಬಲಾಗದವರು' ಎಂದರ್ಥ. ಕೆಂಬಟ್ಟಿ ಸಮುದಾಯದ ಒಕ್ಕನಾಮಗಳಲ್ಲಿ 'ಕುಟ್ಟಡ' ಎನ್ನುವ ಪ್ರತ್ಯಯ ಇರುವುದು ಸ್ವಾರಸ್ಯಕರವಾಗಿದೆ. ಮನೆತನಗಳು ಅಥವಾ ಒಕ್ಕಗಳು ಬೆಳವಣಿಗೆ ಹೊಂದುತ್ತಿದ್ದ ಸಂದರ್ಭದಲ್ಲಿ ಒಂದೊಂದು ಕುಟುಂಬಕ್ಕೂ ಅವುಗಳ ಹಿನ್ನೆಲೆ, ವೃತ್ತಿಗಳನ್ನು ನೋಡಿ ಸ್ಥಳೀಯವಾಗಿ ಗುರುತಿಸಿಕೊಳ್ಳಲು ನೆರೆಹೊರೆಯವರು ಕೊಟ್ಟು ಕೊಂಡಿರುವ ಹೆಸರುಗಳು ಕಾಲಕ್ರಮೇಣ ಅವರ 'ಒಕ್ಕನಾಮ'ಗಳಾಗಿ ಅಥವಾ ಮನೆಪೆದಗಳಾಗಿ ಆಡಳಿತ ವ್ಯವಸ್ಥೆಯ ದಾಖಲೆಗಳಲ್ಲಿ ಸೇರಿ ಹೋಗಿದೆ.

ಈ ಸಂದರ್ಭದಲ್ಲಿ "ಕೊಡಗಿನ ಹಾಲೇರಿ ರಾಜವಂಶವು" ಕೃತಿಯ ಕರ್ತೃ ಹಾಗೂ ಸಂಶೋಧಕ ಎಂ.ಜಿ. ನಾಗರಾಜ್ ಅವರ ಈ ಕೆಳಗಿನ ಅಭಿಪ್ರಾಯವು ಉಲ್ಲೇಖಾರ್ಹವಾಗಿದೆ.

> ಕೊಡಗಿನ ಮನೆಪೆದಗಳಲ್ಲಿ ಚೋಳಂಡ, ಚಂಗೇಟಿರ, ಚಂಗೇಪಂಡ, ಬಾಚಮನೆ, ಬಾಚಮ್ಮಂಡ, ಬಾನಂಡ, ಜೈನರ, ಬಾಳಜೆ, ಬಾಚಂಗಡ, ಬಾಚಮಾಡ, ಬಾಚಳ್ಳಿರ, ಬಾಚೆಟ್ಟಿರ, ಬಾಚರಣೆಯಂಡ, ಬಾಚಿನಾಡಂಡ, ಬಾಳೆರ, ಬಾಳೆಯಡ, ಬಾಳೆಕುಟ್ಟಿರ, ಮುದ್ದುರ, ಶಿವಚಾಳಿಯಂಡ, ಇತ್ಯಾದಿ ಮನೆಹೆಸರುಗಳು ಇಂದಿಗೂ ಕಾಣಬರುತ್ತವೆ. ಬಾಚಳ್ಳಿ, ಕಿತ್ತೂರು, ಕೊಂಗೊಳಲಿ, ಹಾನುಗಲ್ಲು, ಬಾಳುಗೋಡು ಇತ್ಯಾದಿ ಸ್ಥಳನಾಮಗಳು

ಶಾಸನೋಕ್ತವಾಗಿದೆ. ಬಹುಶಃ ಚೋಳ, ಕೊಂಗಾಳ್ವ, ಹಾನುಗಲ್ಲು, ಕದಂಬ ಅರಸರ ಅಳಿದುಳಿದ ಇಲ್ಲುಳಿದ ವಂಶಿಕರು ಅರಸೊತ್ತಿಗೆ ಅಳಿದ ಮೇಲೆ ವೀರಶೈವ, ಅಮ್ಮ ಕೊಡವ, ಕೊಡವ, ಗೌಡ ಹಾಗೂ ಹೆಗ್ಗಡೆ ಜನಾಂಗಗಳಲ್ಲಿ ಐಕ್ಯವಾಗಿರುವಂತಿದೆ. ಕಾಲಾಂತರದಲ್ಲಿ ಕೆಲವು ಆ ವಂಶಿಕ ಕುಟುಂಬಗಳು ಮೇಲಿನಂತೆ ಆ ಮನೆಪೆದಗಳನ್ನು ಪಡೆದುಕೊಂಡಂತಿದೆ(ನಾಗರಾಜ್, ಸಂ. ೧, ೨೦೦೪:೫೩೫).

ಕೊಡಗಿನ ಒಕ್ಕ ಪದ್ಧತಿಯನ್ನು ತಿಳಿಯಹೊರಟವರಿಗೆ ವಿವರಣೆಗಳು ದೊರೆಯುವುದು ವಿರಳವೆಂಬುದನ್ನು ಗಮನಿಸಿದ್ದೇವೆ. ಆದರೆ ಒಕ್ಕದ ಎಳೆಗಳು ಸಿಗಬಹುದಾದ ಜನಪದ ಕಥೆಗಳ ಬೆನ್ನು ಹತ್ತಿದಾಗ ಅನೇಕ ಸಂಗತಿಗಳು ತೆರೆದುಕೊಳ್ಳುತ್ತದೆ. ಕೊಡಗಿನ ಒಕ್ಕನಾಮಗಳ ನಿಷ್ಪತ್ತಿಯನ್ನು ಹಿನ್ನೆಲೆಯಾಗಿರಿಸಿಕೊಂಡು ಉದಾಹರಣೆಗೆ ಕೆಲವು ಒಕ್ಕನಾಮಗಳನ್ನು ಈ ರೀತಿ ವರ್ಗೀಕರಿಸಬಹುದು.

### ಒಕ್ಕನಾಮಗಳ ಅರ್ಥ ಹಿನ್ನೆಲೆ ವರ್ಗೀಕರಣ

| ಕ್ರಮ ಸಂಖ್ಯೆ | ಹಿನ್ನೆಲೆ | ಮನೆತನ/ ಒಕ್ಕಗಳ ಹೆಸರು | ಷರಾ |
|---|---|---|---|
| ೧. | ಮೂಲಪುರುಷನ ಹಿನ್ನೆಲೆ | ಅಪ್ಪಾರಂಡ, ಕಟ್ಟೆರ, ಕಲ್ಯಾಟಂಡ, ಮಾಚಂಗಡ | ಅಪ್ಪಾರಂಡ ಅಂದರೆ ಆರು ಮಕ್ಕಳ ತಂದೆಯ ಪರಿವಾರವೇ ಈ ಒಕ್ಕ ಆಗಿದೆ. ಕಟ್ಟೆರ ಮನೆತನದವರು ಪೂರ್ವದಲ್ಲಿ ನಾಯಕರಾಗಿದ್ದರು. ಕಲ್ಯಾಟಂಡ ಮನೆತನದವರು ಕಲ್ಯಾಟ ಪೊನ್ನಪ್ಪನ ಸಂತತಿಯವರು. ಮಾಚಂಗಡ ಮನೆತನದವರು ಮಾಚಂಗಳ ನಾಯಕನ ಮನೆತನದವರಾಗಿರುತ್ತಾರೆ. |
| ೨. | ದೈವಿಕ/ಪೌರಾಣಿಕ | ಕುಳಿಯಕಂಡ, ಪರದಂಡ. ದೇವಿರ, ದೇವಮಕ್ಕಡ | ಕುಳಿಯ ಎಂದರೆ ಒಕ್ಕದ ಭೂಮಿಯನ್ನು ಕಾಯುವ ದೈವದ ಹೆಸರಿನಿಂದ ಕುಳಿಯಕಂಡ ಒಕ್ಕದ ಹೆಸರು ನಿಷ್ಪತ್ತಿಗೊಂಡಿದೆ. ದೇವಿರ ಮತ್ತು ದೇವಮಕ್ಕಡ ಅಂದರೆ ದೇವರ ಮಕ್ಕಳು ಎಂದು ಅರ್ಥ. ಪರದಂಡ ಮನೆತನದವರ ಹೆಸರು ಇಗ್ಗುತ್ತಪ್ಪ ದೇವರಿಂದ ಪಡೆದುದೆಂದು ಪ್ರತೀತಿ ಇದೆ. |
| ೩. | ಸ್ಥಳವಾಚಕ ಹಿನ್ನೆಲೆ | ತಿರುನೆಲ್ಲಿಮಾಡ, ಕಿಕ್ಕೇರಿಯಂಡ, ನಡಿಕೇರಿಯಂಡ, ತುಳುನಾಡಂಡ, ಸುಳ್ಯಡ | ತಿರುನೆಲ್ಲಿ ಎನ್ನುವ ಸ್ಥಳ ಈಗಿನ ವಯನಾಡಿನಲ್ಲಿದೆ. ಇಲ್ಲಿಂದ ವಲಸೆ ಬಂದು ನೆಲೆಸಿದವರು ತಿರುನೆಲ್ಲಿ ಮಾಡ ಒಕ್ಕಕ್ಕೆ ಸೇರಿದವರಿರಬಹುದೆಂದು ಊಹಿಸಬಹುದು. ಕಿಕ್ಕೇರಿಯಂಡ ಮನೆತನದವರು ಕಿಕ್ಕೇರಿ ಪ್ರದೇಶದವರಾಗಿರಬಹುದು. ಕೊಡವ ಭಾಷೆಯಲ್ಲಿ ಕಿಕ್ಕೇರಿ ಎಂದರೆ ತಗ್ಗಾದ ಕೇರಿ |

| | | | |
|---|---|---|---|
| | | | ಎಂದರ್ಥ. ನಡಿಕೇರಿಯಂಡ ಮನೆತನ ವಾಯುವ್ಯ ಕೊಡಗಿನಲ್ಲಿದ್ದು ದಕ್ಷಿಣ ಕೊಡಗಿನ ನಡಿಕೇರಿ ಗ್ರಾಮಕ್ಕೂ ಈ ಮನೆತನಕ್ಕೂ ಸಂಬಂಧವಿರಬಹುದೆಂದು ಊಹಿಸಬಹುದು. ತುಳುನಾಡಂಡ ಮನೆತನದವರಿಗೂ ಈಗಿನ ದಕ್ಷಿಣ ಕನ್ನಡವಾದ ತುಳುನಾಡಿಗೂ ಏನೋ ಸಂಬಂಧವಿದೆ. ಹಾಗೆಯೇ ಸುಳ್ಯಡ ಮನೆತನಕ್ಕೂ ದಕ್ಷಿಣ ಕನ್ನಡದ ಸುಳ್ಯ ಪಟ್ಟಣಕ್ಕೂ ಯಾವುದಾದರು ಸಂಬಂಧ ಇರಬಹುದೆಂದು ಊಹಿಸಬಹುದು. |
| ೪. | ಶಾರೀರಿಕ ಅಂಗ ವೈಶಿಷ್ಟ್ಯದ ಹಿನ್ನೆಲೆ | ಮೂಕಚಂಡ, ಕಣ್ಣಚಂಡ, ಕಣ್ಣಿಂಗಂಡ, ತಬ್ಬಂಗಡ, ಉದ್ದಪಂಡ, ಕೇಟೋಳಿರ | ಮೂಕಚಂಡ ಒಕ್ಕದ ಮೂಲ ಪುರುಷನ ಮೂಗು ವಿಶೇಷತೆಯಿಂದ ಕೂಡಿದ್ದಿರಬಹುದು. ಆದ್ದರಿಂದ ಈ ಒಕ್ಕಕ್ಕೆ ಮೂಕಚಂಡ ನಾಮವು ಬಂದಿರಬಹುದು. ಕಣ್ಣಚಂಡ ಮತ್ತು ಕಣ್ಣಿಂಗಂಡ ಮನೆತನಗಳ ಕಣ್ಣು ವೈಶಿಷ್ಟ್ಯತೆಗಳನ್ನು ಗುರುತಿಸಿ ಮನೆತನದ ಹೆಸರು ಕೊಟ್ಟಿರಬಹುದು. ತಬ್ಬಂಗಡ ಮನೆತನದಲ್ಲಿ 'ತಬ್ಬು' ಎಂಬ ಪದವು ಆಲಂಗಿಸುವುದು ಎಂಬರ್ಥ ಕೊಡುತ್ತದೆ. ಉದ್ದಪಂಡ ಅಂದರೆ ಕೊಡವ ಭಾಷೆಯಲ್ಲಿ 'ಉದ್ದವಾಗಿರುವ ಅಪ್ಪನ' ಎಂದರ್ಥ. ಕೇಟೋಳಿರ ರಾಜೇಂದ್ರ ನಾಮೆಯಲ್ಲಿ ಕೇಟೋಳಿರ ಮನೆತನ ವನ್ನು ಕೇಟುವಳಿ(ಕೇಟುವಳಿ ಎಂದರೆ ಕೇಳಿಸಿಕೊಳ್ಳಲಾದ ಎಂದರ್ಥ) ಎಂದು ಸಂಬೋಧಿಸಲಾಗಿದೆ(ಪು. ೩೭). |
| ೫. | ಪ್ರಾಣಿ, ಪಕ್ಷಿ, ಸಸ್ಯ ಮತ್ತು ಇತರ ವಿಶೇಷತೆಯ ಹಿನ್ನೆಲೆ | ಪಂದಿಮಾಡ, ನಾಗವಂಡ, ಕೂವಲೆರ, ಚಕ್ಕೆರ, ಮಾಂಗೇರ, ಕಾಕೇರ, ಗುಬ್ಬಚ್ಚಿರ ದಡ್ಡೇರ, ಆನೆಡ | ಪಂದಿಮಾಡ ಮನೆತನದ ಮೊದಲಾರ್ಥವಾದ ಪಂದಿ ಎಂದರೆ ಹಂದಿ. ಹಾಗಾಗಿ ಹಂದಿ ಸಾಕುತ್ತಿದ್ದ ಮನೆತನವಾಗಿದ್ದಿರಬೇಕು. ನಾಗವಂಡ ಒಕ್ಕಪೆದದಲ್ಲಿ ನಾಗದೇವತೆಯ ಹೆಸರು ಅಥವಾ ಹಾವಿನ ಸಂಕೇತವನ್ನು ಕಾಣಬಹುದು. ಕೂವಲೆರ ಒಕ್ಕಪೆದದಲ್ಲಿ ಕೂವಲೆ ಎನ್ನುವ ಒಂದು ಜಾತಿಯ ಗಿಡದ ಎಲೆಯ ಹೆಸರನ್ನು ಒಳಗೊಂಡಿದೆ. ಚಕ್ಕೆರ ಒಕ್ಕಪೆದದಲ್ಲಿ ಹಲಸು, ಮಾಂಗೆರ ಒಕ್ಕಪೆದದಲ್ಲಿ ಮಾವು, 'ಕಾಕೇರ'ದಲ್ಲಿ ಕಾಗೆಯ ಹೆಸರನ್ನು, ಗುಬ್ಬಚ್ಚಿರ ಮನೆತನದ ಹೆಸರಿನಲ್ಲಿ 'ಗುಬ್ಬಚ್ಚಿ' ಪಕ್ಷಿಯ ಹೆಸರನ್ನು, ದಡ್ಡೆರ ಒಕ್ಕಪೆದದಲ್ಲಿ ಹೆಣ್ಣು |

| | | | |
|---|---|---|---|
| | | | ಹಂದಿಯ ಲಿಂಗಸೂಚಕವನ್ನು ಕಾಣಬಹುದು. ಕೊಡಗಿನ ಹಾಡುಗಳಲ್ಲಿ ಕಂಡುಬರುವ ಆನೆಗಳನ್ನು ಗುರುತಿಸಿ ಅವುಗಳ ಹೆಸರನ್ನು ಈ ಮನೆತನಕ್ಕೆ ಕೊಟ್ಟಂತಿದೆ. |
| ೬. | ವಸ್ತು ವಿಶೇಷತೆಯ ಹಿನ್ನೆಲೆ | ಕೊಟ್ಟುಕತ್ತಿರ, ಕುಕ್ಕೆರ, ಗುಡ್ಡಮಾಡ, ಚಿಮ್ಮಣಿರಾ, ಕನ್ನಡಿಯಂಡ, ಇಗ್ಗುಡ | ಕೃಷಿ ಕೆಲಸಕ್ಕೆ ಬಳಸುವ ಮಚ್ಚಿಗೆ 'ಕೊಟ್ಟುಕತ್ತಿ' ಎಂದು ಕೊಡವ ಭಾಷೆಯಲ್ಲಿ ಕರೆಯುತ್ತಾರೆ. ಈ ಹಿನ್ನೆಲೆ ಯಲ್ಲಿ ಆ ಹೆಸರು ಬಂದಿರುವ ಸಾಧ್ಯತೆ ಇದೆ. ಗುಡ್ಡಮಾಡ ಒಕ್ಕಪೆದದ ಪೂರ್ವಾರ್ಧ 'ಗುಡ್ಡ' ಎಂದರೆ ಮನೆಯಿಂದ ಹೊರಗಿರುವ ಬಚ್ಚಲುಮನೆ ಎಂದರ್ಥ. ಚಿಮ್ಮಣಿರ ಎಂದರೆ ದೀಪದ ಗಾಜು ಎಂದರ್ಥ. ಇಗ್ಗು ಎಂದರೆ ಇಗ್ಗುವುದು ಅಥವಾ ಪರಿಷ್ಕರಿಸುವುದು ಎಂದರ್ಥ. ಕನ್ನಡಿ ಯಂಡ ಪೂರ್ವಾರ್ಧ ಮುಖ ನೋಡುವ ಕನ್ನಡಿಯನ್ನು ಸೂಚಿಸುತ್ತದೆ. |
| ೭. | ವ್ಯಕ್ತಿತ್ವ ವಿಶೇಷತೆಯ ಹಿನ್ನೆಲೆ | ಪುಚ್ಚಿಮಾಡ,ಕಳ್ಳಿಚಂಡ, ಮಂಡೆಪಂಡ, ಕಾಳೆರ | ಪುಚ್ಚಿ ಎಂದರೆ ಕೊಡವ ಭಾಷೆಯಲ್ಲಿ ಹುಚ್ಚಿ ಎಂದರ್ಥ. ಕಳ್ಳಿಚಂಡದಲ್ಲಿ 'ಕಳ್ಳಿ' ಎಂದರೆ ಚೌಕಾಕಾರ ಎನ್ನುವ ಅರ್ಥ ಬರುತ್ತದೆ. ಮಂಡೆಪಂಡದಲ್ಲಿ 'ಮಂಡೆ' ಎಂದರೆ 'ತಲೆ' ಎಂದರ್ಥ. ಕಾಳೆರದಲ್ಲಿ 'ಕಾಳೆ' ಎಂದರೆ ಕೊಬ್ಬಿದ ದನ ಅಥವಾ ಕುಸ್ತಿಪಟು ಎಂದರ್ಥ. |
| ೮. | ವೃತ್ತಿ ಹಿನ್ನೆಲೆ | ದಾಸಂಡ, ಚಂಡೇರ, ಕಲ್‌ಮಾಡಂಡ | ದಾಸಂಡ ಮನೆತನದ ಮೂಲ ಪುರುಷನು ಯಾವುದಾದರೂ ದೇವರ ದಾಸನಾಗಿದ್ದಿರಬಹುದು. ಆ ಹಿನ್ನೆಲೆ ಯಲ್ಲಿ ಈ ಹೆಸರು ಬಂದಿರಬಹುದು. ಚಂಡೆರ ಒಕ್ಕಪೆದದ ಪೂರ್ವಾರ್ಧದಲ್ಲಿ 'ಚಂಡೆ' ಎಂದರೆ ದೇವಸ್ಥಾನದಲ್ಲಿ ದೇವತಾಕಾರ್ಯದ ಆಚರಣೆ ಸಂದರ್ಭದಲ್ಲಿ ಏಕಮುಖವಾಗಿ ಹೊಡೆಯುವ ತಾಳವಾದ್ಯ. ಕಲ್‌ಮಾಡಂಡದಲ್ಲಿ ಪೂರ್ವಾರ್ಧ ಕಲ್ಲನ್ನು ಸೂಚಿಸುತ್ತದೆ. |
| ೯. | ಜಾತಿವಾಚಕದ ಹಿನ್ನೆಲೆ | ಪಟ್ಟಮಾಡ, ಶಿವಚಾಳಿಯಂಡ, ಪಾಲೆಡ, ಪಾಲೆರ, ಕೊಂಗೇಟಿರ | ಪಟ್ಟ ಮಾಡ ಮನೆತನದ 'ಪಟ್ಟ' ಎಂದರೆ ಕೊಡಗಿನಲ್ಲಿ ಬ್ರಾಹ್ಮಣ ಎಂದರ್ಥ. ಈ ಮನೆತನದವರು ಬ್ರಾಹ್ಮಣ್ಯವನ್ನು ಅನುಸರಿಸುತ್ತಿದ್ದಿರ ಬಹುದು. ಶಿವಚಾಳಿಯಂಡ ಒಕ್ಕದವರು ಶಿವಚಾರರಾಗಿದ್ದಿರಬಹುದು. |

| | | | |
|---|---|---|---|
| | | | (ರಾಜೇಂದ್ರನಾಮೆಯಲ್ಲಿ ಚೂವನ ಚಳಿಯನ ಭೀಮಯ್ಯನ ಪ್ರಸ್ತಾಪ ಬರುತ್ತದೆ). ಪಾಲೆಡ / ಪಾಲೆರ ಒಕ್ಕದವರು ಪಾಲೆ ಜನಾಂಗವನ್ನು ಕೊಡಗಿಗೆ ತಂದವರಿರಬಹುದು. ಕೊಂಗೇಟಿರ ಒಕ್ಕದವರು ಕೊಂಗಾಳ್ವರ ಮನೆತನದವರಿರಬಹುದು. |
| ೧೦. | ಆರ್ಥಿಕ ಹಿನ್ನೆಲೆ | ಚೆಪ್ಪುಡಿರ, ಜಮ್ಮಡ, ಬಾರಿಕೆರ | ಚೆಪ್ಪುಡಿರದಲ್ಲಿ 'ಚೆಪ್ಪು' ಎಂದರೆ ಹಣದ ಪೆಟ್ಟಿಗೆ ಎಂದರ್ಥ. ಜಮ್ಮಡದಲ್ಲಿ 'ಜಮ್ಮ' ಭೂಹಿಡುವಳಿ ಯನ್ನು ಸೂಚಿಸುತ್ತದೆ. ಬಾರಿಕೆರದಲ್ಲಿ 'ಬಾರಿಕೆ' ಭೂಹಿಡುವಳಿಯನ್ನು ಸೂಚಿಸುತ್ತದೆ. |
| ೧೧. | ನಿಸರ್ಗ ಸಂಬಂಧಿ ಹಿನ್ನೆಲೆ | ಪೂಳಂಡ,ಮಣಪಟ್ಟಿರ, ಕೊಲ್ಲಿರ, ಪಾರೆರ, ಗಂಗೆರ | ಕೊಲ್ಲಿ ಎಂದರೆ ಸಣ್ಣ ನೀರಿನ ತೊರೆ. ಪೂಳಂಡದಲ್ಲಿ 'ಪೂಳ' ಎಂದರೆ ಇಂಗ್ಲಿಷ್‌ನ ಫಾಗ್ (fog) ಪದಕ್ಕೆ ಸಂವಾದಿಯಾಗಿದೆ. ಮಣಪಟ್ಟಿ ಎಂದರೆ ಮರಳು ದಿಣ್ಣೆ ಎಂದರ್ಥ. ಪಾರೆರ ಒಕ್ಕಪೆದದಲ್ಲಿ ಪಾರೆ ಎಂದರೆ ಹಾಸುಗಲ್ಲು ಅಥವಾ ಬಟ್ಟೆ ಒಗೆಯುವ ಕಲ್ಲು ಎಂದರ್ಥ. ಗಂಗೆರ ಎಂದರೆ ಗಂಗಾನದಿಯ ಹೆಸರನ್ನು ಸೂಚಿಸುತ್ತದೆ. |
| ೧೨. | ಹಬ್ಬದ ಹಿನ್ನೆಲೆ | ಚಂಗ್ರಾಂದಿರ, ಪುತ್ತರಿರ | ಚಂಗ್ರಾಂದಿ ಎಂದರೆ ಸಂಕ್ರಮಣ. ಪುತ್ತರಿ ಎಂದರೆ ಐಶ್ವರ್ಯ ದೇವತೆಯನ್ನು ಮನೆಗೆ ಕರೆಯುವ ಹಬ್ಬ |
| ೧೩. | ಅಧಿಕಾರ ಮತ್ತು ಪದವಿ ಹಿನ್ನೆಲೆ | ನಾಯಕಂಡ, ಮುಕ್ಕಾಟಿರ | ನಾಯಕಂಡ ಎಂದರೆ ನಾಯಕರ ಮನೆತನ. ಮುಕ್ಕಾಟಿರ ಒಕ್ಕದವರು ದೇವಸ್ಥಾನಗಳ ಕಾರ್ಯಕಾರರು |
| ೧೪. | ಶೈಕ್ಷಣಿಕ ಹಿನ್ನೆಲೆ | ಎಳ್ತಂಡ | ಎಂದರೆ ಕಲಿಕೆ |
| ೧೫. | ಪ್ರವೃತ್ತಿ ವಾಚಕ | ಚೇಪಂಡ(ಕೋಯವ ಸಮುದಾಯ) ತೊತ್ಯಂಡ, ಮಂದಮಾಡ | 'ಚೇಪ' ಅಂದರೆ ಚೇಪುವುದು. ತೊತ್ಯಂಡ ಎಂಬಲ್ಲಿ (ದೇವರನ್ನು) 'ತೊತ್ಯ' ಎಂದರೆ ಪ್ರಾರ್ಥಿಸುವ ಎಂದರ್ಥ. ಈ ಮನೆತನದ ಹೆಸರು ಕೊಡವ, ಗೊಲ್ಲ ಮತ್ತು ಗೌಡ ಸಮುದಾಯಗಳಲ್ಲಿಯೂ ಕಂಡು ಬರುತ್ತದೆ. ಮಂದಮಾಡ ಮನೆತನದ ಪೂರ್ವಾರ್ಧವು ಮಂದತನವನ್ನು ಸೂಚಿಸುತ್ತದೆ. ಈ ಮನೆತನದ ಹೆಸರು ಕೊಡವ ಹಾಗೂ ಜಮ್ಮಮಾಪಿಳ್ಳೆ ಎರಡು ಸಮುದಾಯಗಳಲ್ಲೂ ಕಂಡು ಬರುತ್ತದೆ. |

ಕೆಂಬಟ್ಟಿಗಳಲ್ಲಿ ಕಂಡುಬರುವ ಉತ್ತುಕುಟ್ಟಡ, ಉಮ್ಮಕುಟ್ಟಡ, ಅಣ್ಣೆ ಕುಟ್ಟಡ, ಚಟ್ಟೆ ಕುಟ್ಟಡ, ಪೆರ್ಮಕುಟ್ಟಡ ಮೊದಲಾದ ಹೆಸರುಗಳು ವ್ಯಕ್ತಿಸೂಚಕಗಳಾಗಿಯೂ, ಮಂಡೆ ಕುಟ್ಟಡ, ಕಾಳೆ ಕುಟ್ಟಡ, ಗಡ್ಡ ಕುಟ್ಟಡ ಮೊದಲಾದುವಗಳು ಪ್ರವೃತ್ತಿ ಸೂಚಕಗಳಾಗಿಯೂ, ಓಣಿ ಕುಟ್ಟಡ, ಕುಂಬಲೆ ಕುಟ್ಟಡ, ಮೊದಲಾದುವುಗಳು ಸ್ಥಳ ವಾಚಕಗಳಾಗಿಯೂ ಕಾಣುತ್ತದೆ.

ಈ ಮೇಲಿನ ಎಲ್ಲ ಅಭಿಪ್ರಾಯಗಳು ಊಹಾತ್ಮಕ ಹಾಗೂ ಸಂಶೋಧನಾತ್ಮಕ ದೃಷ್ಟಿಕೋನಗಳೇ ಹೊರತು ವಾಸ್ತವದಲ್ಲಿ ಯಾವುದೇ ಒಕ್ಕಗಳಿಗೆ ಈ ಅರ್ಥಗಳು ಅನ್ವಯಿಸಬೇಕು ಎಂದಿಲ್ಲ.

ಹೀಗೆ ಎಲ್ಲಾ ಸಮುದಾಯಗಳ ಮನೆಪೆದಗಳನ್ನು ಈ ಮೇಲಿನಂತೆ ವರ್ಗೀಕರಿಸಿ ಪ್ರಯೋಗಾತ್ಮಕವಾಗಿ ಗಮನಿಸಿದರೆ ಅವುಗಳ ಹಿನ್ನೆಲೆ ಮತ್ತು ಅರ್ಥಗಳು ಅನಾವರಣಗೊಳ್ಳಲು ಸಾಧ್ಯವಾಗುತ್ತದೆ.

ಕೊಡಗಿನ ಪ್ರತಿ ಸಮುದಾಯಗಳಿಗೂ ಈ ರೀತಿಯ ಒಂದೊಂದು ಒಕ್ಕನಾಮಗಳಿವೆ. ಕೊಡಗಿನ ಎಲ್ಲ ಒಕ್ಕ ನಾಮಗಳನ್ನು ಈ ಮೇಲಿನ ಆಧಾರದ ಮೇಲೆ ವಿಶ್ಲೇಷಿಸಿದರೆ ಹಿನ್ನೆಲೆ ಕಂಡುಕೊಳ್ಳಲು ಸಾಧ್ಯವಾಗುತ್ತದೆ.

## ೨.೩. ಒಕ್ಕಗಳ ಲಕ್ಷಣಗಳು

ಸಮಾಜಶಾಸ್ತ್ರೀಯ ಅಧ್ಯಯನದ ಸಂದರ್ಭದಲ್ಲಿ ಒಂದು ಪರಿಕಲ್ಪನೆಯನ್ನು ಸ್ಪಷ್ಟವಾಗಿ ಅರಿಯಬೇಕಾದರೆ ಅದರ ಸ್ವರೂಪ ಮತ್ತು ಲಕ್ಷಣಗಳನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಕೊಡಗಿನ ಸಮಾಜ ಒಂದು ಸಂಕೀರ್ಣ ಸಂಬಂಧಗಳಿಂದ ಕೂಡಿದ ಸಮಾಜವಾದ್ದರಿಂದ ಇಲ್ಲಿನ ಒಕ್ಕಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮುನ್ನ ಅವುಗಳ ಸ್ವರೂಪ ಮತ್ತು ಲಕ್ಷಣಗಳನ್ನು ಪರಿಚಯಿಸಿಕೊಳ್ಳುವ ಅಗತ್ಯವಿದೆ. ಅದಕ್ಕಾಗಿ ಅದರ ಬೇರೆ ಬೇರೆ ಆಯಾಮಗಳನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಕೊಡಗಿನ ಒಕ್ಕಗಳ ಪ್ರಮುಖ ಸ್ವರೂಪ ಮತ್ತು ಲಕ್ಷಣಗಳು ಹೀಗಿವೆ: ಕೂಡು ಕುಟುಂಬ, ಐನ್‌ಮನೆಗಳು ಮತ್ತು ಐನ್‌ಮನೆಗಳೊಂದಿಗೆ ಒಕ್ಕಗಳ ಸಂಬಂಧ, ಭೂ ಹಿಡುವಳಿಗಳು ಮತ್ತು ಒಕ್ಕ, ಕೈಮಡಗಳು, ವಿವಾಹ ಪದ್ಧತಿಗಳು, ಕೃಷಿ ಮತ್ತು ಸಾರ್ವತ್ರಿಕ ಹಬ್ಬಗಳು, ಧಾರ್ಮಿಕ ಆಚರಣೆಗಳು ಮತ್ತು ಒಕ್ಕ ಮೊದಲಾದ ಗುಣಲಕ್ಷಣಗಳನ್ನು ಈ ಸಂದರ್ಭದಲ್ಲಿ ಗುರುತಿಸಬಹುದು.

### ೨.೩.೧. ಕೂಡುಕುಟುಂಬ

ಕೊಡಗಿನ ಕೂಡುಕುಟುಂಬಗಳನ್ನು ಒಕ್ಕಗಳೆಂದು ಸಾಮಾನ್ಯವಾಗಿ ಕರೆಯುತ್ತಾರೆ. ಈ ಕೂಡುಕುಟುಂಬಗಳು ಕರ್ನಾಟಕದ ಮಲೆನಾಡು ಅಥವಾ ಒಳನಾಡಿನ ಸಮಾಜದ ಜೊತೆಗೆ ಹೆಚ್ಚಿನ ರೀತಿಯಲ್ಲಿ ಸಂಬಂಧವನ್ನಿಟ್ಟುಕೊಂಡಿರದ ಕಾರಣ ಅದು ತನ್ನದೇಯಾದ ಪ್ರತ್ಯೇಕ ಅನನ್ಯತೆಯನ್ನು ಉಳಿಸಿಕೊಂಡಿದೆ. ಇಂತಹ ಕೊಡಗಿನ ಕೂಡುಕುಟುಂಬಗಳನ್ನು ಕುರಿತು ರಿಕ್ತರ್ ಅವರು ಹೀಗೆ ಬರೆಯುತ್ತಾರೆ:

> ಕೊಡವರ ಮನೆಯು ಒಂದೇ ಜನ್ಮದಾತೃ ಮೂಲಕ್ಕೆ ಸೇರಿದ ಎಲ್ಲಾ ಗಂಡುಸಂಬಂಧಿಗಳು, ಅವರ ಪತ್ನಿಯರು ಹಾಗೂ ಮಕ್ಕಳ ವಾಸಸ್ಥಳವಾಗಿರುತ್ತದೆ. ಎರಡು ಅಥವಾ ಮೂರು ಪೀಳಿಗೆಗಳು, ಅಜ್ಜ ಮತ್ತು ಅಜ್ಜಿಯರು, ಅವರ ಗಂಡುಮಕ್ಕಳು, ಸೊಸೆಯಂದಿರು ಮತ್ತು ಇವರ ಕುಟುಂಬಗಳ ಮಕ್ಕಳು, ಹಲವು ಬಾರಿ ೨೦ರಿಂದ ೬೦ಕ್ಕೂ ಹೆಚ್ಚು ಮಂದಿ ಒಟ್ಟಿಗೆ ಜೀವಿಸುತ್ತಾರೆ ಮತ್ತು ಉಣ್ಣುತ್ತಾರೆ. ಕೆಲಸಗಾರರು ಅಥವಾ ಗುಲಾಮರು ಮನೆಯ ಸಿಬ್ಬಂದಿಯಾಗಿದ್ದು, ಆಹಾರ ಮತ್ತು ಅಪ್ಪಣೆಗಳಿಗಾಗಿ ಮನೆ ಯಜಮಾನಿಯತ್ತ ನೋಡುತ್ತಾರೆ. ಶಾಂತಿ ಮತ್ತು ಸಾಮರಸ್ಯವನ್ನು ಹೊಂದಿದ ಕೊಡವನ ಮನೆಯು ನಿಜವಾಗಿಯೂ ಪಿತೃಪ್ರಧಾನ ಕುಟುಂಬದ ಚಿತ್ರಣವನ್ನು ನೀಡುತ್ತದೆ. ಆದರೆ ಈ ಮೋಹಕ ದೃಶ್ಯವು ಹಲವು ಬಾರಿ ಕಲುಷಿತಗೊಳ್ಳುತ್ತಿದೆ. ಇದಕ್ಕೆ ಕಾರಣ ದರ್ಪಿಷ್ಠ ಅತ್ತೆಯ ಕಠಿಣತರ ಆಡಳಿತ, ಮದುವೆಯಾದ ಸೋದರರಲ್ಲಿ ಮಾತ್ಸರ್ಯ ಅಥವಾ ಕುಟುಂಬದ ಆದಾಯ ಮತ್ತು ವೈಯಕ್ತಿಕ ಹಕ್ಕುಗಳಿಗೆ ಸಂಬಂಧಿಸಿದಂತೆ ಸಮಸ್ಯೆಗಳು. ಯಜಮಾನ ಸರ್ವೇ ಸಾಮಾನ್ಯವಾಗಿ ಮನೆಯ ಹಿರಿಯ ವ್ಯಕ್ತಿ ಇಂತಹ ಸಂದರ್ಭಗಳಲ್ಲಿ ಬಹಳ ಯಾತನೆಯನ್ನು ಅನುಭವಿಸಬೇಕಾಗುತ್ತಿತ್ತು (ರಿಕ್ತರ್, (೧೮೮೭)೨೦೧೧:೫೧).
> (ಅನುವಾದ: ಲೋಕೇಶ್ ಕೆ.ಎಂ.)

ಈ ವಿವರಣೆಯು ೧೯ನೆಯ ಶತಮಾನದ ಕೂಡುಕುಟುಂಬದ ಸ್ವರೂಪವನ್ನು ತಿಳಿಸಲು ಯತ್ನಿಸುತ್ತದೆ. ಪ್ರತಿ ಕೂಡುಕುಟುಂಬದ ಜೀವಂತವಿರುವ ಹಿರಿಯನನ್ನು ಆ ಕುಟುಂಬದ 'ಕೊರವುಕಾರ'[೧೦] ಎಂದು ಕರೆಯುತ್ತಾರೆ. ಆತನ ಹೆಂಡತಿಯನ್ನು 'ಕೊರವುಕಾರತಿ'[೧೧] ಎನ್ನುವರು. ಇವರಿಬ್ಬರೂ ಇಡೀ ಕುಟುಂಬದ ಮುಖ್ಯಸ್ಥರು ಹಾಗೂ ಸರ್ವರಿಗೂ ಬಾಧ್ಯಸ್ಥರು. ಕುಟುಂಬದ ಎಲ್ಲಾ ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ನೋಡಿಕೊಳ್ಳುವುದು, ಅಂದರೆ, ಸರಿಯಾಗಿ ವ್ಯವಸಾಯದ ಉಸ್ತುವಾರಿ ನೋಡುವುದು, ಸದಸ್ಯರ ನಡುವೆ ವೈಮನಸ್ಸುಗಳು ಉಂಟಾಗದಂತೆ ಹೊಂದಿಕೊಂಡು ಹೋಗಲು ಸಾಮರಸ್ಯ ತರುವುದು, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಎಲ್ಲರೂ ಒಗ್ಗಟ್ಟಿನಿಂದ ತೊಡಗುವಂತೆ ಮಾಡುವುದು, ಎಲ್ಲರಿಗೂ ಯೋಗ್ಯ ಆಹಾರ, ಬಟ್ಟೆ, ವಸತಿ ದೊರೆಯುವಂತೆ ನೋಡಿಕೊಳ್ಳುವುದು, ಪ್ರತಿಯೊಬ್ಬನೂ ಕುಟುಂಬದ ಹಿತಕ್ಕಾಗಿ ದುಡಿಯುವಂತೆ ಪ್ರೇರೇಪಿಸುವುದು ಇವರ ಕರ್ತವ್ಯಗಳಾಗಿರುತ್ತವೆ. ಕುಟುಂಬದ ಮಕ್ಕಳ ವಿದ್ಯಾಭ್ಯಾಸ ಹಾಗೂ ಪ್ರಾಯಕ್ಕೆ ಬಂದವರ ಮದುವೆ ಇತ್ಯಾದಿಗಳನ್ನು ಏರ್ಪಡಿಸುವುದೂ ಈ ಹಿರಿಯರ ಜವಾಬ್ದಾರಿ ಗಳಾಗಿರುತ್ತದೆ. ಈ ಒಕ್ಕಗಳ 'ಕೊರವುಕಾರ'ನು ಕುಟುಂಬದ ಹಿರಿಯನೇ ಆಗಬೇಕೆಂಬ ಕಡ್ಡಾಯ ನಿಯಮವಿರಲಿಲ್ಲ. ವಯಸ್ಸಿನಲ್ಲಿ ಹಿರಿಯನು 'ಕೊರವಕಾರ' ಜವಾಬ್ದಾರಿಗೆ ಯೋಗ್ಯನಲ್ಲವೆಂದು ಕಂಡರೆ 'ಅರಿವವನೇ ಪೆರಿಯಂವ'[೧೨](ಶ್ರೀನಿವಾಸ್, ೧೯೫೨:೫೧) ತತ್ತ್ವದ ಮೇಲೆ ಉಳಿದ 'ಕಿಕ್ಕರರು' ಸೇರಿಕೊಂಡು ಆತನನ್ನು ಬದಲಾಯಿಸಿ ಯೋಗ್ಯನೊಬ್ಬನನ್ನು 'ಕೊರವುಕಾರ'ನಾಗಿ ಆರಿಸುತ್ತಿದ್ದರು(ರಿಕ್ತರ್, ೧೮೭೦: ೧೨೮, ೧೨೯), (ಶ್ರೀನಿವಾಸ್, ೧೯೫೨: ೫೦), (ಕಾರ್ಯಪ್ಪ, ಪೊನ್ನಮ್ಮ, ೧೯೮೧: ೬೬).

ಕೂಡುಕುಟುಂಬಕ್ಕೆ ಸೇರಿದ ಆಸ್ತಿಪಾಸ್ತಿಗಳನ್ನು ವೃದ್ಧಿಸುವುದು ಕೂಡುಕುಟುಂಬದ ಪ್ರತಿ ಸದಸ್ಯನ ಕರ್ತವ್ಯ ಮಾತ್ರವಲ್ಲ, ಅವುಗಳನ್ನು ಕಳೆಯಲೂಬಾರದು. ಕೊಡಗಿನ ಸಂಪ್ರದಾಯದಲ್ಲಿ ಎಷ್ಟೇ ಕಷ್ಟ, ತೊಂದರೆಗಳು ಬಂದರೂ ಹಿರಿಯರಿಂದ ಅನೂಚಾನವಾಗಿ ಬಂದಿರುವ ಆಸ್ತಿ ಪಾಸ್ತಿಗಳನ್ನು ವಿಕ್ರಯಿಸುವುದು ಮತ್ತು ಹಾಳು ಮಾಡುವುದು ಅವಮಾನಕರವೆಂದು ಪರಿಗಣಿಸಲ್ಪಟ್ಟಿದೆ. ಅಂಥ ವ್ಯಕ್ತಿಗಳಿಗೆ ಸಮಾಜದಲ್ಲಿ ಕೂಡ ಗೌರವ ಕಡಿಮೆ.

ಈ ರೀತಿಯ ಕೂಡುಕುಟುಂಬಗಳು ಕರ್ನಾಟಕದ ಯಾವ ಸಮುದಾಯಗಳೊಂದಿಗೂ ಸಾಮ್ಯತೆಯನ್ನು ಹೊಂದಿಲ್ಲ ಎನ್ನಬಹುದಾದರೂ, ಬಂಟ ಸಮುದಾಯದಲ್ಲಿನ 'ಗುತ್ತು'[೧೩]ಗಳೊಂದಿಗೆ ಸ್ವಲ್ಪಮಟ್ಟಿನ ಸಾಮ್ಯತೆಗಳು ಕಂಡುಬರುತ್ತವೆ(ಸುರೇಂದ್ರರಾವ್, ೨೦೧೦:೮೫–೧೩೩). ಇದು ಕೇರಳದ ಮಾತೃಪ್ರಧಾನ ನಾಯರ್ ಸಮುದಾಯದ 'ತರವಾಡು' ಮತ್ತು ಪಿತೃಪ್ರಧಾನ ಸಮುದಾಯವಾದ ನಂಬೂದರಿಗಳ 'ಇಲ್ಲಂ'ಗಳೊಂದಿಗೆ ಸಾಮ್ಯತೆಗಳನ್ನು ಹೊಂದಿದೆ ಎಂದು ಸಮಾಜಶಾಸ್ತ್ರಜ್ಞ ಎಂ.ಎನ್. ಶ್ರೀನಿವಾಸ್ ಅವರು ಅಭಿಪ್ರಾಯಪಡುತ್ತಾರೆ(ಶ್ರೀನಿವಾಸ್, ೧೯೮೯(೧೯೫೨):೪೯). ಭೌಗೋಳಿಕವಾಗಿ ಮತ್ತು ಚಾರಿತ್ರಿಕವಾಗಿ ಕೊಡವರ ಸಂಬಂಧಗಳು ಮಲಬಾರ್ ಪ್ರಾಂತ್ಯದೊಂದಿಗೆ ಬೆಸೆದುಕೊಂಡಿರುವುದು ಇದರಿಂದ ಕಂಡುಬರುತ್ತದೆ. ಆದರೆ, ದಕ್ಷಿಣ ಭಾರತದ ಇತರ ಸಮುದಾಯಗಳಿಗಿಂತ ಬಲವಾಗಿ ಮತ್ತು ತೀಕ್ಷ್ಣವಾಗಿ ಕೊಡಗಿನ ಕೂಡುಕುಟುಂಬಗಳು ರಚನೆಗೊಂಡಿವೆ.

ಕೊಡಗಿನ ಜನರ ಜೀವನದಲ್ಲಿ ಒಕ್ಕ(ಕೂಡುಕುಟುಂಬ)ಕ್ಕಿರುವ ಪ್ರಾಶಸ್ತ್ಯ ಬಹು ಹಿರಿದು. ಪ್ರತಿಯೊಬ್ಬನ ಅನನ್ಯತೆಯು ಆತನ 'ಒಕ್ಕ'ವನ್ನೇ ಆಧರಿಸಿರುತ್ತದೆ. ಒಕ್ಕದಿಂದ ಹೊರಹೋದವನಿಗೆ ಸಮಾಜದಲ್ಲಿ ಸ್ಥಾನವಾಗಲಿ, ಕೊಡಗಿನ ನೀತಿಪದ್ಧತಿಗಳಲ್ಲಿ ಯಾವುದೇ ಸ್ಥಾನಮಾನವಾಗಲಿ ಇರುವುದಿಲ್ಲ. ವ್ಯಕ್ತಿಗೆ ಸಾಮಾಜಿಕವಾಗಿ ಒಕ್ಕದ ಹಿನ್ನೆಲೆಯಲ್ಲಿಯೇ ಸ್ಥಾನಮಾನಗಳು ದೊರಕುವುದು (ಶ್ರೀನಿವಾಸ್, ೧೯೮೯(೧೯೫೨):೧೩೦).

ಮನುಷ್ಯನ ಜೀವನದ ಪ್ರಧಾನ ಅಂಗವಾದ ಮದುವೆಯ ವಿಚಾರದಲ್ಲೂ ಒಕ್ಕದ ತೀರ್ಮಾನ ಅಂತಿಮವಾಗಿದೆ. ಒಂದೇ ಒಕ್ಕದ ಸದಸ್ಯರಲ್ಲಿ ವಿವಾಹವು ನಿಷಿದ್ಧವಿದೆ. ಅದರಲ್ಲಿ ಯಾರೂ ಕೂಡ ಸ್ಥಿರ ಆಸ್ತಿಗಳಾದ ಭೂಮಿ, ಮನೆ ಇತ್ಯಾದಿಗಳನ್ನು ತಮ್ಮ ಸ್ವಂತಕ್ಕಾಗಿ ಹೊಂದಿರಕೂಡದೆಂದು ಹಿಂದೆ ನಿಯಮವಿತ್ತು. ಪ್ರತಿಯೊಬ್ಬನೂ ಒಕ್ಕಕ್ಕಾಗಿ ದುಡಿಯಬೇಕಲ್ಲದೆ ತಮ್ಮ ಸ್ವಂತಕ್ಕಾಗಿ ದುಡಿಯುವುದು ಅವಮಾನಕರವೆಂದು ಭಾವಿಸುತ್ತಿದ್ದರು. ಸ್ವಂತ ಆಸ್ತಿ ಹೊಂದಿರುವುದು ನಿಷಿದ್ಧವಿತ್ತು. ಒಕ್ಕದಿಂದ ದೂರ ಹೋಗಿ ಸಂಪಾದನೆ ಮಾಡಿದರೂ ಆತನ ಸಂಪಾದನೆ ಒಕ್ಕಕ್ಕೆ ಸೇರಿದ ಆಸ್ತಿಯೆಂದು ಪರಿಗಣಿಸಲ್ಪಡಲಾಗುತ್ತಿತ್ತು. ಒಕ್ಕದ ಸದಸ್ಯರು ತಮ್ಮ ಪಾಲಿನ ಕರ್ತವ್ಯವನ್ನು ಒಕ್ಕಕ್ಕಾಗಿ ಸಲ್ಲಿಸಿ ಉಳಿದ ಸಮಯದಲ್ಲಿ ಇತರ ಕೃಷಿ ಕೆಲಸಗಳಾದ ಶುಂಠಿ, ಅರಿಶಿನ ಮೊದಲಾದುವನ್ನು ಬೆಳೆಯುವುದರಿಂದ ಸಂಪಾದಿಸಬಹುದಾಗಿದ್ದರೂ ಅದರಲ್ಲೂ ಒಂದು ಪಾಲು

ಒಕ್ಕಕ್ಕೆ ಹೋಗಬೇಕೆಂದಿತ್ತು. ಹೊರಜಗತ್ತು ಕೂಡ ಒಕ್ಕದ ಸದಸ್ಯನನ್ನು ಅವನ ಒಕ್ಕದ ಹಿನ್ನೆಲೆಯಲ್ಲಿಯೇ ಗುರುತಿಸಲ್ಪಡುತ್ತದೆ. ಸತ್ತ ನಂತರವೂ ಕೂಡ ಆತನು ಆ 'ಒಕ್ಕ'ದ ಸದಸ್ಯನಾಗಿಯೇ ಉಳಿಯುತ್ತಾನೆ(ಶ್ರೀನಿವಾಸ್, ೧೯೫೨: ೫೬).

ಕೊಡವರ ಸಾಮಾಜಿಕ ಪದ್ಧತಿಯಲ್ಲಿ 'ಅರುವ'[೧೪]ನಿಗೆ ಪ್ರಮುಖ ಸ್ಥಾನ ನೀಡಲಾಗಿದೆ. ಒಂದು ಒಕ್ಕದ ಎಲ್ಲಾ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪ್ರಮುಖವಾಗಿ ಕಾಣಿಕೊಳ್ಳುವ ನೆರೆಯ 'ಒಕ್ಕ'ವನ್ನು 'ಅರುವ ಒಕ್ಕ ಎನ್ನುವರು. ಅರುವರಲ್ಲಿ ಎರಡು ವಿಧ: ಮಣ್ಣರುವ ಮತ್ತು ಪೊನ್ನರುವ "ಮಣ್ಣರುವ ಎಂದರೆ ಮೂಲತ: ಅದೇ ಮಣ್ಣಿನಲ್ಲಿ ಹುಟ್ಟಿರುವ ಪಡೆದುಕೊಂಡ ಆರುನಾಮೆ. 'ಪೊನ್ನರುವ' ಅಂದರೆ ಚಿನ್ನ ಕೊಟ್ಟು ಅರುವನನ್ನು ಏರ್ಪಡಿಸಿ ಕೊಂಡಂತಹ ಅರುವ. ಒಂದು ಊರಿಗೆ ಒಂದು ಹೊಸ ಕುಳವು ಬಂದರೆ ಅಥವಾ ಒಂದು ಕುಳವು ನಾಶವಾಗಿ ಅಲ್ಲಿಗೆ ಬಂದ ಬೇರೆ ಕುಳಕ್ಕೆ ಮೊದಲಿದ್ದ ಕುಳಕ್ಕೆ ಅರುವನು ಬೇಕಾಗಿರುವುದರಿಂದ ೩ ಅಚ್ಚು ಚಿನ್ನವನ್ನು ಕೊಟ್ಟು ಊರಿನಲ್ಲಿರುವ ಯಾವುದಾದರೂ ಕುಳವನ್ನು ಅರುವನಾಗಿ ಏರ್ಪಡಿಸಿಕೊಂಡರೆ ಅಂಥ ಕುಳವು ಪೊನ್ನರುವನಾಗುತ್ತಾರೆ"(ಲಲಿತ, ೨೦೧೫:೧೨೩).

ಆಯಾಯ ಕುಟುಂಬಗಳ ಕಾರ್ಯಕಲಾಪಗಳಲ್ಲಿ ಅರುವನಿಗೆ ಹಿರಿಯ ಸ್ಥಾನ ಕೊಡಲ್ಪಟ್ಟಿದೆ. ಗಂಡಿಗೆ ಹೆಣ್ಣು ನೋಡುವುದು ಮತ್ತು ಮಾತುಕತೆ ನಡೆಸುವುದು, ಮದುವೆಯಲ್ಲಿ ಮದುವಣಿಗನ ಅಥವಾ ಮದುವಣಗಿತ್ತಿಯ ಪರ ನಿಶ್ಚಿತ ಸಂಪ್ರದಾಯಗಳನ್ನು ನೆರವೇರಿಸುವುದು, ಗೆಳೆಯ ಕುಟುಂಬದಂತೆಯೇ ಭಾವಿಸಿ ನೆರವು ನೀಡುವುದು ಅರುವ ಕುಟುಂಬದ ಕರ್ತವ್ಯಗಳಾಗಿವೆ.

ಪ್ರತಿ ಕೊಡಗಿನ 'ಒಕ್ಕ'ವೂ ಕೂಡ ಬೇರೆ ಒಕ್ಕಗಳೊಂದಿಗೆ ಗೆಳೆತನದಿಂದಿರುವುದು ಸಂಪ್ರದಾಯವಾಗಿದೆ. ಹಲಕೆಲವು ಕುಟುಂಬಗಳು ರಕ್ತಸಂಬಂಧ ಮೊದಲಾದ ನೆಂಟಸ್ತಿಕೆಗಳಿಂದ ಪರಸ್ಪರ ಹೊಂದಿಕೊಂಡಿರುವುದು ಸಾಮಾನ್ಯ ವಿಚಾರ. ಆದರೆ ಅಂಥ ಸಂಬಂಧಗಳಿಲ್ಲದ ಕುಟುಂಬಗಳೂ ಗೆಳೆತನದಲ್ಲಿರುವಂತೆ ತನ್ನ ನೆರೆಯ ಮತ್ತೊಂದು ಕುಟುಂಬವನ್ನು ಕಡ್ಡಾಯವಾಗಿ ಗೆಳೆಯನಾಗಿ ಮಾಡಿಕೊಳ್ಳುತ್ತದೆ. ಹೀಗೆ ಪರಸ್ಪರ ಗೆಳೆತನವನ್ನು ಮಾಡಿಕೊಂಡ ಕುಟುಂಬಗಳು ಒಂದಕ್ಕೊಂದು ಅರುವ ಕುಟುಂಬಗಳಾಗುತ್ತವೆ(ಶ್ರೀನಿವಾಸ್, ೧೯೫೨:೫೬).

ಈ ಪರಸ್ಪರ ಸಂಬಂಧದಲ್ಲಿ ಗೆಳೆತನ ಮಾತ್ರವಷ್ಟೇ ಅಲ್ಲದೆ ಕೆಲವು ಸಾಮಾಜಿಕ ಜವಾಬ್ದಾರಿಗಳೂ ಅಡಕವಾಗಿವೆ. ಮದುವೆ ಮೊದಲಾದ ಸಂತಸದ ಸಮಾರಂಭಗಳಲ್ಲೂ, ಸಾವು ಮತ್ತಿತರ ದುಃಖದ ಕಾಲದಲ್ಲೂ ಒಂದು ಕುಟುಂಬವು ಮತ್ತೊಂದಕ್ಕೆ ನೆರವಾಗಬೇಕು. ಅಂತಹ ಸುಖ, ದುಃಖದ ಎಲ್ಲಾ ಸಂದರ್ಭಗಳಲ್ಲಿಯೂ ನೆರೆಯ ಅರುವ ಕುಟುಂಬದವರು ಎಲ್ಲಾ ಜವಾಬ್ದಾರಿಗಳನ್ನು ವಹಿಸಿಕೊಂಡು ಕಾರ್ಯಕ್ರಮಗಳನ್ನು ನಿರ್ವಹಿಸುತ್ತಾರೆ. ಈ ಕುರಿತು ಮತ್ತಷ್ಟು ವಿಸ್ತೃತ ಚರ್ಚೆಯನ್ನು ಮುಂದೆ ನಡೆಸಲಾಗುವುದು.

## ೨.೩.೨. ಐನ್‌ಮನೆಗಳು

ಒಕ್ಕಗಳು ಒಂದೆಡೆ ನೆಲೆಸಬೇಕಾದರೆ ದೊಡ್ಡಮನೆಯ ಅಗತ್ಯ ಇರುತ್ತದೆ. ಇದನ್ನು ಕೊಡಗರು 'ಐನ್‌ಮನೆ' ಎನ್ನುವರು. ಇದು ಪೂರ್ವಿಕರು ಕಟ್ಟಿದ ಮನೆಯಾಗಿದ್ದು, ಇಲ್ಲಿ ವಂಶಪಾರಂಪರ್ಯವಾಗಿ ಬದುಕುತ್ತಾ ಬಂದಿದ್ದಾರೆ. ಒಂದು ಐನ್‌ಮನೆಯಲ್ಲಿ ಐವತ್ತರಿಂದ ನೂರೈವತ್ತು ಜನರು ವಾಸಿಸುತ್ತಿದ್ದರು. ಲೂಯಿ ರೈಸ್ ಅವರು ಒಂದೆಡೆ ಹೀಗೆ ಬರೆಯುತ್ತಾರೆ(ರೈಸ್, ೧೮೭೮: ೩೯). "೧೮೭೦ರ ಸಮಯದಲ್ಲಿ ಕೊಡಗಿನಲ್ಲಿ ಅವಿಭಕ್ತ ಕುಟುಂಬ ಪದ್ಧತಿ ಇತ್ತು. ಪ್ರತಿ ಕುಟುಂಬದಲ್ಲಿ ೫೦ ಅಥವಾ ಹೆಚ್ಚು ಜನರು ಒಂದೇ ಸೂರಿನೊಳಗೆ ಜೀವಿಸುತ್ತಿದ್ದರು. ಕೆಲವು ಕುಟುಂಬಗಳಲ್ಲಿ ೧೦೦–೧೫೦ ಜನರಿರುತ್ತಿದ್ದರು"(ರೈಸ್, ೧೮೭೮:೩೯).

'ಐನ್‌ಮನೆ' ಎಂದರೆ 'ಒಕ್ಕ'ದ ಜನರು ಪರಂಪರೆಯಿಂದ ವಾಸಿಸುತ್ತಾ ಬಂದಿರುವ ದೊಡ್ಡದಾದ ಮನೆಯಾಗಿದೆ. 'ಐನ್' ಎಂಬುದಕ್ಕೆ ತಜ್ಞರು ವಿವಿಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇದು ಅರೇಬಿಕ್ ಮತ್ತು ಪರ್ಷಿಯನ್ ಭಾಷೆಯಿಂದ ಹಿಂದಿ, ಕನ್ನಡ, ಕೊಡವ, ಮೊದಲಾದ ಭಾರತೀಯ ಭಾಷೆಗಳಿಗೆ ಬಂದಿದೆ. 'ಐನ್' ಎಂಬುದಕ್ಕೆ 'ಮೂಲತಃ', 'ಪ್ರಮುಖ', 'ಮುಖಂಡ' ಅಥವಾ 'ಪ್ರಾಮಾಣಿಕ', 'ಸತ್ಯ', 'ನೈಜ' ಎಂಬ ಅರ್ಥಗಳಿವೆ ಎಂದು ಪೊಂಜಾಂಡ ಅಪ್ಪಯ್ಯ ಅವರು ಮತ್ತು ಬೊವ್ವೇರಿಯಂಡ ಚಿಣ್ಣಪ್ಪ ನಂಜಮ್ಮ, ಅಭಿಪ್ರಾಯಪಟ್ಟಿದ್ದಾರೆ (ಚಿಣ್ಣಪ್ಪ ಮತ್ತು ನಂಜಮ್ಮ, ೨೦೧೪:೧೫), (ಅಪ್ಪಯ್ಯ, ೨೦೧೨:೨೨೧). ಸಾಮಾನ್ಯವಾಗಿ 'ಐನ್‌ಮನೆ' ಎಂದರೆ ಮನೆತನದ ಮೂಲ ಹಿರಿಯ ಮೊದಲು ಕಟ್ಟಿದ ವಾಸದ ಮನೆ; ಅರ್ಥಾತ್ ಕುಟುಂಬದ ಮೂಲ ಪುರುಷ ಕಟ್ಟಿದ ಮನೆ; ಮೊದಲ ಮನೆ. ಅದೇ ಅಯ್ಯನ ಮನೆ, ಉಚ್ಚಾರದಲ್ಲಿ 'ಐನ್‌ಮನೆ' ಎನಿಸಿದೆ ಎಂದು ಎಂ.ಜಿ. ನಾಗರಾಜ್ ಅವರು ಅಭಿಪ್ರಾಯಪಡುತ್ತಾರೆ(ನಾಗರಾಜ್, ೧೬, ೨೦೦೧:೧೫೫). ಒಟ್ಟಾರೆ, ಒಂದೊಂದು ಒಕ್ಕದ ಕುಲಸ್ಥರು ಹಲವು ತಲೆಮಾರುಗಳಿಂದ ಒಟ್ಟಾಗಿ ಒಂದೇ ಕಡೆ ವಾಸಿಸಲು ನಿರ್ಮಿಸಿಕೊಂಡ ದೊಡ್ಡ ಹಟ್ಟಿ/ತೊಟ್ಟಿ ಮನೆಗಳೇ ಈ 'ಐನ್‌ಮನೆ'ಗಳಾಗಿವೆ ಎಂದು ಅಭಿಪ್ರಾಯಪಡಬಹುದು. ಸುಮಾರು ಎಂಟನೇ ಶತಮಾನದ ನಂತರ ಐನ್‌ಮನೆಗಳು ಅಸ್ತಿತ್ವಕ್ಕೆ ಬಂದವು(ನಂಜಮ್ಮ ಚಿಣ್ಣಪ್ಪ, ೨೦೧೪: ೨೫), (ಪೊಂಜಾಡ ಅಪ್ಪಯ್ಯ, ೨೦೧೨:೨೨೧).

ಕೊಡಗಿನ ಐನ್‌ಮನೆಗಳ ಬಗ್ಗೆ ಸಂಶೋಧನಾ ಅಧ್ಯಯನವನ್ನು ಕೈಗೊಂಡ ಬೊವ್ವೇರಿಯಂಡ ನಂಜಮ್ಮ ಚಿಣ್ಣಪ್ಪ ಅವರು ತಮ್ಮ 'ಐನ್ ಮನೆಸ್ ಆಫ್ ಕೊಡಗು' ಕೃತಿಯಲ್ಲಿ : ಕೊಡಗಿನಲ್ಲಿ ಒಟ್ಟಾರೆ ೧೫೦೦ ಒಕ್ಕಗಳಿವೆ ಮತ್ತು ೪೩೦ ಐನ್‌ಮನೆಗಳನ್ನು ಕೊಡವ ಸಮುದಾಯಗಳ ಒಕ್ಕಗಳು ಹೊಂದಿವೆ. ಅಲ್ಲದೆ ಗೌಡ ಒಕ್ಕಗಳಿದ್ದು, ೧೩೦ ಐನ್‌ಮನೆಗಳಿವೆ, ಇತರ ಸ್ಥಳೀಯ ಸಮುದಾಯಗಳಲ್ಲಿ ೩೩೦ ಒಕ್ಕಗಳಿದ್ದು, ೧೨೦ ಐನ್‌ಮನೆಗಳು ಅಸ್ತಿತ್ವದಲ್ಲಿ ಇದೆ: ಎಂದು ಅಭಿಪ್ರಾಯಪಡುತ್ತಾರೆ. ಅಂದರೆ ಒಂದು ಕಾಲಕ್ಕೆ ಎಲ್ಲ ಒಕ್ಕಗಳೂ ಐನ್‌ಮನೆಗಳನ್ನು ಹೊಂದಿದ್ದು ಕಾಲಾಂತರದಲ್ಲಿ ಕೆಲವು ಐನ್ ಮನೆಗಳು ಶಿಥಿಲಗೊಂಡವು ಎಂಬ ಅಂಶ ಮುಖ್ಯವಾಗುತ್ತದೆ.

ಆದಿಕಾಲದಲ್ಲಿ ಕೊಡವರ 'ಐನ್‌ಮನೆ'ಗಳನ್ನು ಅಂದರೆ ಹಿರಿದಾದ ತೊಟ್ಟಿ ಮನೆಗಳನ್ನು ಕಟ್ಟಲು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಆಗ ಮರ ಕಡಿದು ಸೀಳಲು ಬಾಳು, ಭರ್ಜಿ, ಉಳಿ, ಕೊಡಲಿ, ಬಾಚಿ, ಚಿಪ್ಪುಳಿ ಎಂಬ ಉಪಕರಣಗಳು ದೊರೆಯುತ್ತಿರಲಿಲ್ಲ. ಗಾಳಿ, ಮಳೆಗೆ ಮರದ ಕೊಂಬೆ ರೆಂಬೆಗಳು ಮನೆಯ ಮೇಲೆ ಬೀಳುವುದನ್ನು ತಪ್ಪಿಸಲು ಚಿಕ್ಕ ಚಿಕ್ಕ ಗುಡಿಸಲುಗಳಾಗಿಯೇ ಕಟ್ಟಿಸಿ ಜೀವನ ನಡೆಸುತ್ತಿದ್ದರು. ಆರು ನೂರು ವರ್ಷಗಳ ಹಿಂದೆ ಪಾಳೆಯಗಾರರ ಕಾಲದಲ್ಲಿ ಹಿಂದಿದ್ದ ಊರುಗುಪ್ಪೆಗಳನ್ನು ಒಡೆದು ಕೃಷಿ ಉತ್ಪಾದನೆ ಹಾಗೂ ಕಂದಾಯ ಸಂಗ್ರಹಕ್ಕಾಗಿ ಸಮೀಪದಲ್ಲಿನ ವಿಸ್ತಾರವಾದ ಭೂಪ್ರದೇಶದ ಹಕ್ಕನ್ನು 'ಒಕ್ಕ'ಗಳಿಗೆ ನೀಡಿದರು. ನಂತರದ ಕಾಲಘಟ್ಟದಲ್ಲಿ ಈ ಭೂಪ್ರದೇಶದ ನಡುವೆ ಬೃಹತ್ತಾದ ಕಟ್ಟಡವನ್ನು ನಿರ್ಮಿಸಿ ಒಂದೇ ಸೂರಿನಡಿ 'ಒಕ್ಕ'ದ ಜನರು ವಾಸಿಸಲಾರಂಭಿಸಿದರು. ಬಿದಿರು, ಮರ, ಮಣ್ಣು, ಹುಲ್ಲು, ಕಟ್ಟಿಗೆಗಳಿಂದ ನಿರ್ಮಿಸಿದ ಈ ಆಯತಾಕಾರದ ಕಟ್ಟಡವೇ ಬಲ್ಯಮನೆ(ದೊಡ್ಡಮನೆ). ಇದನ್ನೇ 'ಐನ್‌ಮನೆ' ಎಂದೂ ಕರೆಯುತ್ತಾರೆ. ಊರುಗುಪ್ಪೆಗಳಿಂದ, ಹೊರಬಂದ ಜನರೇ ಆರಂಭದಲ್ಲಿ ಐನ್‌ಮನೆಗಳನ್ನು ಕಟ್ಟಿಕೊಂಡರೆಂಬ ನಂಬಿಕೆ ಇದೆ(ಚಿಣ್ಣಪ್ಪ ಮತ್ತು ನಂಜಮ್ಮ, ೨೦೧೪: ೨೫). ಲಿಂಗಾಯತರಸರು ಕೊಡಗಿಗೆ ಬಂದ ನಂತರ ಮರ ಕಡಿಯಲೂ, ಸೀಳಲೂ ಬೇಕಾದ ಉಪಕರಣಗಳು ಕ್ರಮೇಣ ಬಳಕೆಗೆ ಬಂದವು. ಆಧುನಿಕ ಕಾಲದಲ್ಲಿ ಅಂದರೆ ಬ್ರಿಟಿಷರ ಆಗಮನದ ನಂತರ ಕೆಲವು ಕೊಡಗಿನವರು ಎಲ್ಲಾ ನಿಟ್ಟಿನಲ್ಲೂ ಪಾಶ್ಚಾತ್ಯ ಸಂಸ್ಕೃತಿಯ ಬಗೆಗೆ ಆಸಕ್ತಿಯುಳ್ಳವರಾದರು.

ಒಕ್ಕದ ಸದಸ್ಯರು ಐನ್‌ಮನೆಗೆ ವಿಶೇಷವಾದ ಪ್ರಾಶಸ್ತ್ಯ ನೀಡುತ್ತಾರೆ. ಐನ್‌ಮನೆ ಮತ್ತು ಜಮ್ಮ ಭೂಮಿಯನ್ನು ಒಕ್ಕದ ಸದಸ್ಯರು ತಮ್ಮ ಜನ್ಮಸಿದ್ಧ ಹಕ್ಕು ಎಂದು ಪರಿಗಣಿಸುತ್ತಾರೆ. ಐನ್‌ಮನೆಯೊಂದಿಗೆ ಆ ಮಟ್ಟಿನ ಭಾವನಾತ್ಮಕ ಸಂಬಂಧವನ್ನು ಒಕ್ಕದ ಸದಸ್ಯರು ಹೊಂದಿರುವುದನ್ನು ಕಾಣಬಹುದು.

ಐದು ದಶಕಗಳ ಹಿಂದೆ ಒಕ್ಕದ ಎಲ್ಲಾ ಸದಸ್ಯರು ಐನ್‌ಮನೆಯಲ್ಲಿ ವಾಸಿಸುತ್ತಿದ್ದರು. ಹುಟ್ಟು, ಸಾವು, ಮದುವೆ ಮುಂತಾದವುಗಳ ಸಾಂಪ್ರದಾಯಿಕ ಆಚರಣೆಗಳನ್ನು ಐನ್‌ಮನೆಯಲ್ಲಿಯೇ ನಡೆಸಲಾಗುತ್ತಿತ್ತು(ಚಿಣ್ಣಪ್ಪ ಮತ್ತು ನಂಜಮ್ಮ, ೨೦೧೪:೭೭). ಇಂದು ಐನ್‌ಮನೆಗಳಲ್ಲಿ ವಾಸಿಸುವವರು ತೀರ ಕಡಿಮೆಯಾಗಿದ್ದು, ಬದಲಾದ ಸನ್ನಿವೇಶಗಳಲ್ಲಿ ಇವು ಕೇವಲ ಸಾಂಕೇತಿಕ ಆಚರಣೆಗಳಿಗಷ್ಟೇ ಸೀಮಿತವಾಗಿವೆ. ಇತ್ತೀಚಿನ ದಿನಗಳಲ್ಲಿ ಒಕ್ಕದ ಸದಸ್ಯರು ಸತ್ತರೆ ಮಾತ್ರ ಅವರ ಅಂತಿಮ ದರ್ಶನಕ್ಕೆ ಐನ್‌ಮನೆಗಳಲ್ಲಿ ಇಡುತ್ತಾರೆ. ಹಾಗೆಯೇ ಮದುವೆ ಮತ್ತಿತರ ಸಮಾರಂಭಗಳು ಕಲ್ಯಾಣ ಮಂಟಪಗಳಲ್ಲಿ ನೆರವೇರುವುದು ಸಾಮಾನ್ಯವಾಗಿದೆಯಾದರೂ, ಒಕ್ಕದ ಮೂಲ ಪುರುಷನಿಗೆ ಕುಟುಂಬದ ಎಲ್ಲಾ ಸದಸ್ಯರು ಸೇರಿ 'ಮೀದಿ'(ಎಡೆ) ಇಡುವ ಆಚರಣೆಗಳನ್ನು ಐನ್‌ಮನೆಯಲ್ಲಿಯೇ ನೆರವೇರಿಸುತ್ತಾರೆ. ಸಾಮಾನ್ಯವಾಗಿ, ಚಪ್ಪರಶಾಸ್ತ್ರದ ಹಿಂದಿನ ದಿನ ಮೀದಿ ಇಡುವ ಆಚರಣೆಯನ್ನು

ನೆರವೇರಿಸಲಾಗುತ್ತದೆ. ಇದಲ್ಲದೆ, ಹುತ್ತರಿ, ಕೈಲ್‌ಮೂರ್ತ, ಕಾವೇರಿ ಸಂಕ್ರಮಣ ಮೊದಲಾದ ಹಬ್ಬಗಳ ಸಂದರ್ಭಗಳಲ್ಲಿ ಐನ್‌ಮನೆಯಲ್ಲಿ ಒಕ್ಕದ ಸದಸ್ಯರೆಲ್ಲ ಸೇರಿ ಧಾರ್ಮಿಕ ಆಚರಣೆಗಳನ್ನು ಸಂಭ್ರಮದಿಂದ ಆಚರಿಸುತ್ತಾರೆ. ಸಾಮಾನ್ಯವಾಗಿ, ಒಕ್ಕದ ಸದಸ್ಯರೆಲ್ಲ ವರ್ಷಕ್ಕೊಮ್ಮೆ ಐನ್‌ಮನೆಯಲ್ಲಿ ಸಭೆ ಸೇರುತ್ತಾರೆ. ಒಕ್ಕದ ಸದಸ್ಯರು ತಮ್ಮದೇಯಾದ ಕುಟುಂಬನಿಧಿಯನ್ನು ಸ್ಥಾಪಿಸಿಕೊಂಡಿದ್ದಾರೆ. ವಾರ್ಷಿಕ ಸಭೆಗಳಲ್ಲಿ ತಮ್ಮ ಒಕ್ಕದ ಏಳಿಗೆಗಾಗಿ ಚರ್ಚೆಗಳನ್ನು ನಡೆಸುತ್ತಾರಲ್ಲದೆ, ಒಕ್ಕದ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗಾಗಿ ಸ್ಥಾಪಿಸಲಾಗಿರುವ ವಿದ್ಯಾನಿಧಿಯನ್ನು ಪ್ರತಿಭಾವಂತರಿಗೆ ವಿತರಿಸುತ್ತಾರೆ. ಒಕ್ಕದ ಸದಸ್ಯರು ಮರಣ ಹೊಂದಿದ ಸಂದರ್ಭದಲ್ಲಿಯೂ ಅವರ ತತ್‌ಕ್ಷಣದ ಸಂಬಂಧಿಗಳಿಗೆ ಮರಣನಿಧಿಯನ್ನು ವಿತರಿಸುತ್ತಾರೆ. ಹೀಗೆ ಐನ್‌ಮನೆಯ ಪಾತ್ರ ಹಲವು ನೆಲೆಗಳಿಂದ ಮಹತ್ವಪೂರ್ಣವಾಗಿದ್ದು ಇಂದಿಗೂ ತನ್ನ ಪ್ರಸ್ತುತತೆಯನ್ನು ಉಳಿಸಿಕೊಂಡಿದೆ ಮತ್ತು ಒಕ್ಕದ ಸದಸ್ಯರನ್ನು ಒಂದೆಡೆ ಸೇರಿಸಲು ಇರುವ ಏಕೈಕ ತಾಣ ಐನ್‌ಮನೆಯಾಗಿದೆ. ಹೀಗೆ ಒಕ್ಕ ಮತ್ತು ಐನ್‌ಮನೆಯ ಸಂಬಂಧ ಅವಿನಾಭಾವವಾದುದಾಗಿದೆ.

### ೨.೩.೩. ಭೂಹಿಡುವಳಿಗಳು ಮತ್ತು ಒಕ್ಕ

ಕೊಡಗಿನ ಮೂಲನಿವಾಸಿ ಒಕ್ಕಗಳು ಸಾಧಾರಣವಾಗಿ ಕೃಷಿಯನ್ನು ಅವಲಂಬಿಸಿರುತ್ತಾರೆ. ಇವರು ಹೊಂದಿರುವ ಭೂಮಿ ಕೆಲವು ವಿಶಿಷ್ಟ ಪದ್ಧತಿಗಳಿಗೊಳಪಟ್ಟಿವೆ. ಕಂದಾಯದ ಜಮ್ಮ ಭೂಮಿ[೧೫], ಹೆಚ್ಚು ಕಂದಾಯದ ಹಾಗೂ ಪರಭಾರೆ ಮಾಡಬಹುದಾದ ಸಾಗುಭೂಮಿ ಹೀಗೆ ವಿವಿಧ ಪದ್ಧತಿಯ ಭೂಮಿಗಳನ್ನು ಮಾರಾಟ ಮಾಡುವ ಹಕ್ಕು ಅದರ ಮಾಲೀಕನಿಗೆ ಇಲ್ಲ.

ಒಕ್ಕಗಳು ಅವಿಭಕ್ತ ಕುಟುಂಬ ಪದ್ಧತಿಯನ್ನು ಪಾಲಿಸುತ್ತಿದ್ದುದರಿಂದ ೧೯ನೆಯ ಶತಮಾನದ ಆದಿಯವರೆಗೆ ಕೊಡಗಿನ ಕುಟುಂಬಗಳಲ್ಲಿ ಆಸ್ತಿಯ ಪಾಲುದಾರಿಕೆ ಇರಲಿಲ್ಲ(ರೈಸ್, ೨೦೦೪ (೧೮೭೮):೩೨೮-೩೪೮). ಟಿಪ್ಪು ಸುಲ್ತಾನನ ಆಳ್ವಿಕೆಯ ನಂತರ ೧೮ನೆಯ ಶತಮಾನದ ಅಂತ್ಯದಲ್ಲಿ ಕೆಲವು ಕುಟುಂಬಗಳು ತಮ್ಮ ಆಸ್ತಿಯನ್ನು ಸದಸ್ಯರೊಳಗೆ ವಿಭಾಗಿಸಿಕೊಳ್ಳಬಹುದೆಂದು ಆಗಿನ ಲಿಂಗಾಯಿತ ಅರಸರು ಅನುಮತಿ ಕೊಟ್ಟರೆಂದು ರಾಬ್‌ಕೋಲ್ ಬರೆದಿದ್ದಾರೆ(ಕೋಲ್, ೧೮೭೧). ಲೂಯಿ ರೈಸ್ ಅವರು ಈ ವಿಚಾರದಲ್ಲಿ ಒಂದು ಹೆಜ್ಜೆ ಮುಂದೆ ಹೋಗಿ, ಕೊಡಗಿನಲ್ಲಿ ಆಗ ಪ್ರಬಲವಾಗಿದ್ದ ಹಲವು ಕುಟುಂಬಗಳು ರಾಜಕೀಯವಾಗಿ ದೊಡ್ಡ ಪ್ರಭಾವ ಬೀರುತ್ತಿದ್ದುದರಿಂದ ಅವರ ಶಕ್ತಿಯನ್ನು ಕುಗ್ಗಿಸಲು ಈ ವಿಭಾಗೀಕರಣವನ್ನು ಲಿಂಗಾಯತ ಅರಸರು ಪ್ರೋತ್ಸಾಹಿಸಿದರೆಂದು ಬರೆದಿದ್ದಾರೆ(ರೈಸ್, ೨೦೦೪(೧೮೭೮):೩೧೨-೨೦).

ಭೂಹಿಡುವಳಿ ಕೊಡಗಿನ ಆದರ್ಶ ಅವಿಭಕ್ತ ಕುಟುಂಬಗಳ ಅವಿಚ್ಛಿನ್ನ ಅಂಗವಾಗಿದೆ. ೧೮೩೦ರ ಪೂರ್ವದಲ್ಲಿದ್ದ ಅವಿಭಕ್ತ ಕುಟುಂಬದ ಹಿಡಿತ ಮತ್ತು ದೃಢತೆ ೧೮೩೦ರ ನಂತರ ಸಡಿಲಗೊಂಡಂತೆ ಕಾಣುತ್ತದೆ. ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತಾ ರಿಕ್ತರ್ ಅವರು "ಜಮ್ಮ

ಭೂಮಿಗಳನ್ನು ಮಾರುವುದಾಗಲಿ, ವಿಭಜನೆಗೊಳಿಸುವುದಾಗಲಿ ಒಕ್ಕದಲ್ಲಿ ಸಾಧ್ಯವಿಲ್ಲ. ಆದರೆ ಒಕ್ಕದ ಕೆಲವು ಸಕ್ರಿಯ ಸದಸ್ಯರು ಅಥವಾ ಬ್ರಿಟಿಷ್ ಸರ್ಕಾರದಲ್ಲಿ ನೌಕರಿಯಲ್ಲಿದ್ದ ಸದಸ್ಯರು ತಮ್ಮ ಸಂಬಳದ ಹಣದಿಂದ ಹೊಸ ಭೂಮಿಗಳನ್ನು ಖರೀದಿಸಿ, ಅಲ್ಲಿ ತಮ್ಮ ವಾಸ್ತವ್ಯ ಹೂಡುವುದಕ್ಕೆ ಆರಂಭಿಸಿದರು. ಇಂತಹ ಜಾಗಗಳಿಗೆ ಕೊಪ್ಪ ಎಂದು ಹೆಸರಾಯಿತು" ಎನ್ನುತ್ತಾರೆ (ರಿಕ್ತರ್, ೨೦೧೪(೧೮೭೦):೧೩೦). ಹೀಗೆ ಕೊಡಗಿನ ಭೂಹಿಡುವಳಿಯಲ್ಲಿ ಬದಲಾವಣೆಯ ಗಾಳಿ ಬೀಸಲಾರಂಭಿಸಿತು.

ಕೊಡಗಿನಲ್ಲಿ ಕಂಡುಬರುವ ಜಮ್ಮ ಭೂಮಿ ಸವಲತ್ತು ಬಹಳ ವಿಶಿಷ್ಟ ಮತ್ತು ವಿಶೇಷವಾದುದಾಗಿದೆ. 'ಜನ್ಮಭೂಮಿ' ಎನ್ನುವ ಭೂ ಹಿಡುವಳಿ ತಮಿಳುನಾಡಿನ ಗುಡಲೂರು ಹಾಗೂ ಕೇರಳದ ಕೆಲವು ಕಡೆ ಕಂಡು ಬರುತ್ತದೆ. ಜಮ್ಮ ಜಾಗೀರು ಮತ್ತು ಉಂಬಳಿ ಭೂಮಿಗಳು ಹಿಂದಿನ ಕಾಲದಲ್ಲಿ ರಾಜಮನೆತನಕ್ಕೆ ಸಲ್ಲಿಸಿದ ಉತ್ತಮ ಸೇವೆಗಾಗಿ ಕೊಡಲ್ಪಟ್ಟ ಉಡುಗೊರೆಗಳು. ಕೊಡಗಿನಲ್ಲಿ ಹೆಚ್ಚು ವ್ಯಾಪಕವಾಗಿರುವುದು 'ಜಮ್ಮ' ಹಿಡುವಳಿಯಾಗಿದೆ. 'ಜಮ್ಮ' ಎಂಬುದು ಸಂಸ್ಕೃತದ ಜನ್ಮ ಪದಕ್ಕೆ ಸಂವಾದಿಯಾಗಿದೆ. 'ಜಮ್ಮ' ಎನ್ನುವುದು 'ಜನ್ಮಸಿದ್ಧ' ಹಕ್ಕನ್ನು ಸೂಚಿಸುತ್ತದೆ ಅಥವಾ ಹುಟ್ಟುವಿಕೆಯೊಡನೆ ಕೂಡಿಬಂದ ಹಕ್ಕೆಂದು ಅರ್ಥವಾಗುತ್ತದೆ (ರೈಸ್, ಸಂ–೩, ೨೦೦೪(೧೮೭೮):೩೬೩). ಜಮ್ಮ ಭೂಹಿಡುವಳಿಯು ಜನ್ಮಸಿದ್ಧ ವಾದದು. ಕೊಡಗಿನಲ್ಲಿ ಕೊಡವರು, ಅಮ್ಮಕೊಡವರು, ಹೆಗ್ಗಡೆಗಳು, ಐಂಬೊಕ್ಕಳು, ಐರಿಗಳು, ಕೋಯವರು, ಜಮ್ಮ ಮಾಪಿಳ್ಳೆಗಳು ಮತ್ತು ಗೌಡರು ಹೀಗೆ ಎಂಟು ಸಮುದಾಯದವರು 'ಜಮ್ಮ' ಭೂಹಿಡುವಳಿ ಹೊಂದಿರುತ್ತಾರೆ (ರಿಕ್ತರ್, ೧೮೭೦:೫೧). ನೂರು 'ಬಟ್ಟಿ' ಜಮ್ಮ ಭೂಮಿ(ಭತ್ತದ ಗದ್ದೆ)ಗೆ ಹೊಂದಿಕೊಂಡಿರುವ ಬಾಣೆ–ಬಾರಿಕೆ ಸಮೇತವಾದ ಭೂಹಿಡುವಳಿಗೆ ರೂ. ೫/– ಕರವನ್ನು ೧೮೧೨ರ ಹೊತ್ತಿಗೆ ಲಿಂಗರಾಜೇಂದ್ರನಿಂದ ನಿಗದಿ ಮಾಡಲ್ಪಟ್ಟಿತ್ತು. ಈ ಭೂಮಿಗಳಿಗೆ ಕಂದಾಯ ಕಡಿಮೆ.[೯] ಈ ಜನರು ಬ್ರಿಟಿಷ್ ಪ್ರಭುತ್ವಕ್ಕೆ ತೋರಿದ ಪ್ರಾಮಾಣಿಕತೆಯನ್ನು ಗುರುತಿಸಿ ಅವರಿಗೆ ಒಂದಷ್ಟು ಜಾಗೀರುಗಳನ್ನು ಪ್ರಭುತ್ವ ನೀಡಿತು. ಈ ಜಹಗೀರುಗಳೇ 'ಜಮ್ಮ'. ಈ 'ಜಮ್ಮ' ಭೂಮಿಯಲ್ಲಿ ಬೆಳೆಯುವ ಬೆಳೆಗಳ ಮೇಲಷ್ಟೇ ಜಮ್ಮಾದಾರಿಗೆ ಹಕ್ಕೇ ವಿನಹ ಇದರ ಒಡೆತನದ ಮೇಲೆ ಬೇರಾವುದೇ ಪ್ರಬಲ ಕಾನೂನಾತ್ಮಕ ಹಕ್ಕುಗಳಿರುವುದಿಲ್ಲ. ಈ ಕುರಿತು ವಿಜಯ್ ಪೂಣಚ್ಚ ತಂಬಂಡ ಅವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ.

> 'ಜಮ್ಮ' ಭೂಮಿ ಹೊಂದಿರುವವರು ಯುದ್ಧ ಮೊದಲಾದ ಗಂಡಾಂತರದ ಕಾಲದಲ್ಲಿ ಸೈನಿಕರಾಗಿ ರಾಜರ ಪರ ಹೋರಾಡಬೇಕಿತ್ತು. ಯುದ್ಧವಿಲ್ಲದ ಶಾಂತಿಕಾಲದಲ್ಲಿ ರಾಜನ ಆರಕ್ಷಕ, ಖಜಾನೆಯ ರಕ್ಷಕರಾಗಿ, ರಾಜನ ಅಂಗರಕ್ಷಕರಾಗಿ ಇವರು ಕೆಲಸ ಮಾಡಬೇಕಿತ್ತು. 'ಜಮ್ಮ' ಭೂಮಿಯು ವಂಶಪಾರಂಪರ್ಯವಾಗಿ ಆಯಾಯ ಕುಟುಂಬದ ಹಕ್ಕಾಗಿ ಮುಂದುವರಿಯುತ್ತಿತ್ತು. ರಿಕ್ತರ್‌ರ ಅಭಿಪ್ರಾಯದಂತೆ ೧೮೭೦ರವರೆಗೂ ಕೂಡ ಅಂದರೆ ರಾಜರ ಆಡಳಿತ ೧೮೩೪ರಲ್ಲಿ ಕೊನೆಗೊಂಡು ಬ್ರಿಟಿಷ್ ಆಡಳಿತ ಬಂದಾಗಲೂ ಈ

'ಜಮ್ಮ' ಭೂಮಿಯನ್ನು ನೀಡುವ ಕ್ರಮ ಜಾರಿಯಲ್ಲಿ ಇತ್ತು. ಬಹುತೇಕ ಜಮ್ಮ ರೈತರು; ಕೊಡವ, ಹೆಗ್ಗಡೆ, ಐಂಬೊಕ್ಕಳು, ಐರಿ, ಕೋಯವ, ಜಮ್ಮ ಮಾಪಿಳ್ಳೆ ಹಾಗೂ ಸಮುದಾಯದವರು ೧೯೩೦ರವರೆಗೂ ಲಿಂಗಾಯಿತ ಅರಸರಿಗೆ ಹಾಗೂ ಬ್ರಿಟಿಷ್ ಆಡಳಿತಕ್ಕೆ ಜಮ್ಮ ಭೂಮಿಯ ಸಲುವಾಗಿ ತಿಂಗಳಲ್ಲಿ ೧೫ ದಿನ ಹಿಟ್ಟಿಬಿಟ್ಟಿ ಚಾಕ್ರಿ ಅಥವಾ ಅರಮನೆ ಚಾಕ್ರಿಯಲ್ಲಿ ಮಾಡಬೇಕಾಗಿತ್ತು(ತಂಬಂಡ, ೨೦೦೦:೬೪).

"೧೮ನೇ ಮತ್ತು ೧೯ನೇ ಶತಮಾನಗಳಲ್ಲಿ ರಾಜನಿಗೆ ಮತ್ತು ಬ್ರಿಟಿಷ್ ಸರ್ಕಾರಕ್ಕೆ ಸಲ್ಲಿಸಬೇಕಾದ ದೈಹಿಕ ಹಾಗೂ ಇತರ ಕೆಲಸಗಳಿಗೆ ಪ್ರತಿಯಾಗಿ ಜಮ್ಮ ಭೂಹಿಡುವಳಿಯನ್ನು ಕೊಡಲಾಗುತ್ತಿತ್ತು. ಇಂತಹ ಸೇವೆಗಳು ಅಪಮಾನಕಾರಿಯಾದ್ದರಿಂದ ಅದರಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಕೊಡವರು ಮತ್ತು ಜಮ್ಮ ರೈತರು ಮಾಡಿದ್ದು ೧೯ನೇ ಶತಮಾನದ ಉದ್ದಕ್ಕೂ ಕಂಡು ಬರುತ್ತದೆ. ೨೦ನೇ ಶತಮಾನದಲ್ಲಷ್ಟೇ ಜಮ್ಮ ಭೂಹಿಡುವಳಿ ಗೌರವ ಮತ್ತು ಪ್ರತಿಷ್ಠೆಯ ಸಂಕೇತವಾಗಿದೆ"(ತಂಬಂಡ, ೨೦೦೪:೭).

ಎಂಬ ವಿಜಯ್ ಪೂಣಚ್ಚ ತಂಬಂಡ ಅವರ ಅಭಿಪ್ರಾಯಗಳಲ್ಲಿ ಜಮ್ಮ ಹಿಡುವಳಿ ಪಡೆಯುವ ಮತ್ತು ಅದಕ್ಕೆ ಪ್ರತಿಫಲವಾಗಿ ಸರ್ಕಾರಕ್ಕೆ ಸಲ್ಲಿಸುವ ಸೇವೆಗಳ ವಿವರಗಳು ದೊರಕುತ್ತವೆ.

ಹಿಂದಿನ ಕಾಲದಲ್ಲಿ 'ಜಮ್ಮ' ಹೊಂದಿದ ಪ್ರತಿ ಕುಟುಂಬದಿಂದ ಕನಿಷ್ಠ ಒಬ್ಬಾತನು ವರ್ಷಕ್ಕೆ ೧೫ ದಿನಗಳವರೆಗೆ ಸರಕಾರದ ರಕ್ಷಣಾ ಕೆಲಸ ಮಾಡಬೇಕಿತ್ತು. ಆತನ ಆ ಸಮಯದ ವೆಚ್ಚವನ್ನು ಸರಕಾರ ನೋಡಿಕೊಳ್ಳುತ್ತಿತ್ತು. ಬ್ರಿಟಿಷರ ಆಳ್ವಿಕೆಯ ನಂತರ ಈ ಪದ್ಧತಿಗಳು ಕೊನೆಗೊಂಡರೂ ಜಮ್ಮ, ಜಾಗೀರು ಭೂಪದ್ಧತಿ ಅದೇ ರೀತಿ ನಡೆದುಬಂದಿವೆ.

ಬ್ರಿಟಿಷ್ ಪೂರ್ವದಲ್ಲಿ 'ಜಮ್ಮ' ಭೂಮಿಯು 'ಒಕ್ಕದ' ಸ್ವತ್ತಾಗಿತ್ತೇ ವಿನಹ ವ್ಯಕ್ತಿಯ ಸ್ವತ್ತಾಗಿರಲಿಲ್ಲ. ಅದರಿಂದ ಬರುವ ಆದಾಯದವೂ ಕೂಡ 'ಒಕ್ಕದ' ಅಧೀನಕ್ಕೆ ಒಳಪಡುತ್ತಿತ್ತು. ೧೮೩೭ರ ಕೆನರಾ ದಂಗೆ ಅಥವಾ ಅಮರಸುಳ್ಯ ದಂಗೆಯನ್ನು ಅಡಗಿಸಲು ಕಂಪನಿ ಸರಕಾರಕ್ಕೆ ಸಹಾಯ ನೀಡಿದವರಿಗೆ ಜಮ್ಮ ಭೂಮಿಯನ್ನು ಕೊಡಲಾಯಿತು(ತಂಬಂಡ, ೨೦೦೦:೨೭). ಕೊಡಗಿನಲ್ಲಿ ಆಗಿನ ಕಾಲದಲ್ಲಿ ಕಾಫಿ, ಕಿತ್ತಳೆ, ಕರಿಮೆಣಸು, ಏಲಕ್ಕಿ, ಮೊದಲಾದ ಕರೆಫಸಲುಗಳು (ವಾಣಿಜ್ಯ ಬೆಳೆಗಳು) ಪ್ರಾಮುಖ್ಯವಾಗಿರಲಿಲ್ಲವಾದ್ದರಿಂದ ಭತ್ತ ಬೆಳೆಯುವ ಭೂಮಿಯೇ ಕುಟುಂಬದ ಸರ್ವಸ್ವವಾಗಿತ್ತು. ಕುಟುಂಬದ ಭೂಮಿಯನ್ನು ಪರಾಧೀನ ಮಾಡುವುದು, ಮಾರಾಟ ಮಾಡುವುದು ಅವಮಾನಕರವೆಂದೆಣಿಸಲ್ಪಡುತ್ತಿತ್ತು. ತಂದೆ ನಡೆಸಿಕೊಂಡು ಬರುತ್ತಿದ್ದ ವ್ಯವಸಾಯವನ್ನು ಇನ್ನಷ್ಟು ಅಭಿವೃದ್ಧಿಗೊಳಿಸಿಕೊಂಡು ಮುನ್ನಡೆಸುವುದು ಮಗನ ಕರ್ತವ್ಯವಾಗಿತ್ತು. ಕುಟುಂಬಕ್ಕೂ ಅದಕ್ಕೆ ಸಂಬಂಧಿಸಿದ ಭೂಮಿಗೂ ಇರುವ ಸಂಬಂಧ ತಪ್ಪಬಾರದೆಂದೇ ಕುಟುಂಬದ ಯಜಮಾನಿಗೆ ಹುಟ್ಟುವ ಹಿರಿಯ ಮಗನ ನಾಭಿಸಂಬಂಧವನ್ನು(ಕಳ್ಳುಬಳ್ಳಿ ಸಂಬಂಧವನ್ನು) ಕುಟುಂಬದ ಗದ್ದೆಯಲ್ಲಿ ಹುಗಿದಿಡುವ ಸಂಪ್ರದಾಯವಿತ್ತು.[೧೭] ಆದರೆ, ಈ ರೀತಿಯ ನಂಬಿಕೆಗಳು ಇಂದು ಕಣ್ಮರೆಯಾಗುತ್ತಿದೆ.

ಜಮ್ಮವೆಂಬುದು ಕೇವಲ ಕೊಡವರಿಗೆ ಮಾತ್ರ ಸಂಬಂಧಿಸಿದುದಲ್ಲ; ಒಕ್ಕಲಿಗ, ಗೌಡ, ಮಾಪಿಳ್ಳೆ ಮೊದಲಾದವರು ಜಮ್ಮ ಪಡೆದಿದ್ದಾರೆ. ೧೮೭೦ರಲ್ಲಿ ರಿಕ್ಟರನು ಕೊಡವರು, ಅಮ್ಮಕೊಡವರು, ಹೆಗ್ಗಡೆಗಳು, ಐಂಬೊಕ್ಕಳು, ಐರಿಗಳು, ಕೋಯವರು, ಮಾಪಿಳ್ಳೆಗಳು ಮತ್ತು ಗೌಡರು ಜಮ್ಮ ರೈತರೆಂದು ಗುರುತಿಸಲಾದ ವಿಶೇಷ ಸವಲತ್ತುಗಳನ್ನು ಹೊಂದಿದ ಸಮುದಾಯಕ್ಕೆ ಸೇರಿದ್ದಾರೆ ಎಂದಿದ್ದಾನೆ(ರಿಕ್ತರ್, ೨೦೧೪(೧೮೭೦):೪೦೧). ಆ ಸಂದರ್ಭದಲ್ಲಿ ವಯಸ್ಸಾದವರು ಮತ್ತು ಬಾಲಕರನ್ನು ಬಿಟ್ಟರೆ ಕೆಲಸ ಮಾಡಬಲ್ಲ ಜಮ್ಮ ರೈತರ ಸಂಖ್ಯೆ ಸರಿಸುಮಾರು ೭೦೭೦ ಆಗಿತ್ತು. ಅವರಲ್ಲಿ ೪೯೧೦ ಮಂದಿ ಕೊಡವರು ೧೨೪೪ ಮಂದಿ ಗೌಡರು ಇದ್ದಾರೆಂದು ವಿಜಯ್ ಪೂಣಚ್ಚ ತಂಬಂಡ ಅವರು ಈ ಕೆಳಗಿನಂತೆ ದಾಖಲಿಸುತ್ತಾರೆ.

> ೧೮೭೦ರಲ್ಲಿ ಶೇ. ೬೯ರಷ್ಟು ಜಮ್ಮ ಹಿಡುವಳಿದಾರರು ಕೊಡವರಾದರೆ ೧೯೦೦ರಲ್ಲಿ ಅವರ ಸಂಖ್ಯೆ ಶೇ. ೭೨ಕ್ಕೆ ಏರಿರುವುದನ್ನು ನಾವು ಗಮನಿಸಬಹುದು. ೧೮೭೦ರಲ್ಲಿ ಶೇ. ೩೧ರಷ್ಟು ಕೊಡವೇತರರು ಜಮ್ಮ ಹಿಡುವಳಿಗಳ ಒಡೆತನ ಹೊಂದಿದ್ದರೆ, ಕೊಡವೇತರ ಜಾತಿಗಳ ಸಂಖ್ಯೆ ೧೯೦೦ರ ವೇಳೆಗೆ ಶೇ. ೭–೫೧ಕ್ಕೆ ಏರಿದರೂ, ಒಟ್ಟು ಹಿಡುವಳಿದಾರರ ಸಂಖ್ಯೆ ಹೆಚ್ಚಾಗುವ ಬದಲು, ಶೇ. ೨೮ಕ್ಕೆ ಇಳಿದಿರುವುದನ್ನು ಗುರುತಿಸಬಹುದು. ಇದರಿಂದಾಗಿ ೧೯ನೇ ಶತಮಾನದಲ್ಲಿ ಕೊಡವ ಸಮುದಾಯವು ಆರ್ಥಿಕವಾಗಿ ಉಳಿದವರೆಲ್ಲರಿಗಿಂತ ಪ್ರಗತಿ ಹೊಂದುವ ಮೂಲಕ ಕೊಡಗಿನ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯ ಮೇಲೆ ತನ್ನ ಹಿಡಿತವನ್ನು ಭದ್ರಪಡಿಸಿಕೊಂಡದ್ದು ಅಚ್ಚರಿಯೇನಲ್ಲ ಎನ್ನುತ್ತಾರೆ (ತಂಬಂಡ, ೨೦೦೦:೩೬).

ಈ ಬಗೆಯ ಅಂಕಿಸಂಖ್ಯೆಗಳ ಮೂಲಕ ಕೊಡಗಿನ ಭೂಹಿಡುವಳಿಯಲ್ಲಿ ಪ್ರಮುಖವಾದ ಜಮ್ಮ ಭೂಹಿಡುವಳಿಯನ್ನು ಗಮನಿಸಿದರೆ 'ಒಕ್ಕ' ಮತ್ತು 'ಜಮ್ಮ' ಭೂಮಿಗಳ ನಡುವಣ ಸಂಬಂಧದ ಆಳವನ್ನು ತಿಳಿದುಕೊಳ್ಳಬಹುದು. ಆರ್ಥಿಕ ಅವಶ್ಯಕತೆಗಳಿಗಾಗಿ ಕೃಷಿಯನ್ನು ಅವಲಂಬಿಸಿದ ಕೊಡಗರು ಧಾರ್ಮಿಕ ವಿಚಾರ ಬಂದಾಗ ತಮ್ಮ ಪೂರ್ವಜರನ್ನೆ ದೇವರೆಂದು, ಗುರುಗಳೆಂದೂ ನಂಬಿದರು. ಈ ಪೂರ್ವಜರ ನೆಲೆಗಳಾದ ಕೈಮಡಗಳ ವಿವರಗಳನ್ನು ಮುಂದಿನ ಭಾಗದಲ್ಲಿ ನೋಡಬಹುದು.

### ೨.೩.೪. ಕೈಮಡಗಳು

ಕೊಡಗರು ಪೂರ್ವಜರ ನೆನಪಿಗೆ ಕಟ್ಟಿಕೊಂಡ ಸಣ್ಣ ಚೌಕಾಕಾರದ ಕಟ್ಟಡಗಳೇ ಕೈಮಡಗಳು. ಕೈಮಡ ಎಂಬುದು ಮೂಲಪುರುಷನ ಪವಿತ್ರವಾದ ನೆಲೆ. ಸಾಮಾನ್ಯವಾಗಿ ಇದು ಐನ್‌ಮನೆಗೆ ಹತ್ತಿರವಿರುತ್ತದೆ ಮತ್ತು ಮೂಲಪುರುಷನ ಗೋರಿಗೆ ಹೊಂದಿಕೊಂಡಿರುತ್ತದೆ. ಕೆಲವೊಮ್ಮೆ ಒಕ್ಕದ ಬತ್ತದ ಗದ್ದೆಗಳ ಬದಿಯಲ್ಲಿಯೂ ಇರುತ್ತದೆ(ಚಿಣ್ಣಪ್ಪ ಮತ್ತು ನಂಜಮ್ಮ, ೨೦೧೪:೪೪–೪೬). ಈ ಕೈಮಡ ಪದದ ನಿಷ್ಪತ್ತಿಯನ್ನು ಕುರಿತು ಎಂ.ಜಿ. ನಾಗರಾಜ್ ಅವರು ಹೀಗೆ ಅಭಿಪ್ರಾಯ ಪಡುತ್ತಾರೆ. "ಕೊಡವ ಭಾಷೆಯಲ್ಲಿ ಕೈಮಾತ್ ಎಂದರೆ ಸಣ್ಣಮಗು ಎಂಬ ಅರ್ಥವಿದೆ. ಈ

ನಿಟ್ಟಿನಲ್ಲಿ ಕೈಮಠ ಎಂದರೆ ಸಣ್ಣಮಠ ಎಂಬ ಅರ್ಥ ಪಡೆಯುತ್ತದೆ. 'ಮಠ' ಶಬ್ದದ ತದ್ಭವ 'ಮಡ'. ಕೈಮಠ ಕೊಡವ ಭಾಷೋಚ್ಚಾರದಲ್ಲಿ ಕೈಮಡವೆನಿಸಿದೆ. ಕೈಮಠವು ಸಣ್ಣಗುಡಿ, ಸಣ್ಣಸ್ಮಾರಕ, ಕಟ್ಟಡ ಎಂಬ ಅರ್ಥವನ್ನು ಪಡೆದಿದೆ. ಕೊಡವ ಭಾಷೆಯ ಕೈಮಡವು ವಂಶದ ಹಿರಿಯನ ಸ್ಮಾರಕ ಕಟ್ಟಡ ಎಂದು ಅರ್ಥ ಪಡೆದಿದೆ. ಹಾಗಾಗಿ ಕೈಮಡವು ಗುರು ಕಾರೋಣ'ನ ನೆಲೆಯಾಗಿದೆ"(ನಾಗರಾಜ್, ೨೦೦೪:೩೨೮). ಆದಕಾರಣ ಕೈಮಡವು ಒಕ್ಕದ ಸದಸ್ಯರಲ್ಲಿ ಧಾರ್ಮಿಕ ಮಹತ್ವವನ್ನು ಪಡೆದುಕೊಂಡಿದೆ.

ಕೈಮಡಗಳು ಚೌಕಾಕಾರದ ಕಟ್ಟಡವಾಗಿದ್ದು, ಮೂರು ಮೀಟರ್ ಉದ್ದ, ಮೂರು ಮೀಟರ್ ಅಗಲ ಸುತ್ತಳತೆ ಉಳ್ಳದ್ದಾಗಿರುತ್ತದೆ. ನಾಲ್ಕು ಮೂಲೆಗಳಲ್ಲೂ ಮರದ ಕಂಬಗಳು ಮೇಲ್ಛಾವಣಿಯನ್ನು ಹೊತ್ತು ನಂತಿರುತ್ತವೆ. ಕೈಮಡದ ದ್ವಾರ ಪೂರ್ವಾಭಿಮುಖವಾಗಿರುತ್ತದೆ. ಕಟ್ಟಡದ ಮಧ್ಯದಲ್ಲಿ ಸಣ್ಣ ಗುಡಿ ಇರುತ್ತದೆ. ಅದರೊಳಗೆ ಮಣ್ಣಿನ ದೀಪವನ್ನು ಇಟ್ಟಿರುತ್ತಾರೆ(ಚಿಣ್ಣಪ್ಪ ಮತ್ತು ನಂಜಮ್ಮ, ೨೦೧೪:೪೬). ಕೈಮಡಗಳು ಸಾಮಾನ್ಯವಾಗಿ ಪೂರ್ವಾಭಿಮುಖವಾಗಿರುತ್ತದೆ.

"ಮೊದಮೊದಲಿಗೆ ಕೈಮಡಗಳನ್ನು ಬೈತೂರು ಮತ್ತು ಪಯ್ಯಾವೂರ್ ಸಮೀಪದಲ್ಲಿ ನಿರ್ಮಿಸಲಾಯಿತು. ಆದರೆ ಕೈಮಡಗಳನ್ನು ಕಟ್ಟಲು ಯಾವ ಕಾಲಘಟ್ಟದಲ್ಲಿ ಪ್ರಾರಂಭಿಸಲಾಯಿತು ಎಂಬುದರ ಬಗ್ಗೆ ಸುಳಿವಿಲ್ಲ. ಈ ಕೈಮಡಗಳು ಪಿರಮಿಡ್ ಅಕಾರದಲ್ಲಿವೆ ಮತ್ತು ಒಕ್ಕದ ಮೂಲಪುರುಷರ ಆರಾಧನೆಗಾಗಿ ಈ ಕೈಮಡಗಳನ್ನು ಒಕ್ಕದ ಜಮೀನುಗಳಲ್ಲಿ ನಿರ್ಮಿಸಲಾಗುತ್ತದೆ" ಎಂದು ಪೊಂಜಾಂಡ ಅಪ್ಪಯ್ಯ ಅವರು ಅಭಿಪ್ರಾಯ ಪಡುತ್ತಾರೆ(ಅಪ್ಪಯ್ಯ, ೨೦೧೨:೧೯೩). ಆದರೆ ಕೈಮಡಗಳು ಪಿರಮಿಡ್ ರೂಪದಲ್ಲಿ ಇರುವುದಿಲ್ಲ ಎಂದು ಕ್ಷೇತ್ರ ಕಾರ್ಯದ ವೇಳೆ ಕಂಡುಕೊಳ್ಳಲಾಗಿದೆ.

'ಕೊಡಗು ಭಾಷಿಗರು ತಮ್ಮ ಮೂಲ ಪುರುಷನನ್ನು(ಗುರುಕಾರೋಣ) ಪೂಜೆ ಮಾಡುವ ಸಂಸ್ಕೃತಿ ಕೈಮಡದಿಂದ ಸ್ಫೂರ್ತಿ ಹೊಂದಿರಬಹುದು. ಕೈಮಡ ಕಟ್ಟುವ ಪರಂಪರೆ ರಾಜರಿಂದ ಆರಂಭವಾಗಿದೆ ಎಂಬುದು ನಿಜವಲ್ಲ. ಹಾಲೇರಿ ರಾಜರ 'ಮಠ'ವು 'ಕೈಮಡ'ಕ್ಕೆ ಸ್ಫೂರ್ತಿ ಎನ್ನುವುದು ಸರಿಯಲ್ಲ. ಕೈಮಡ ಎಂಬ ಪದ ಪ್ರಭಾವ ಬೀರಿರಬಹುದೇ ಹೊರತು ಹಿರಿಯರನ್ನು ಪೂಜಿಸುವ ಪದ್ಧತಿ ರಾಜರಿಂದಾಗಲಿ, ಮಲಬಾರಿನಿಂದಾಗಲಿ ಬಂದದ್ದಲ್ಲ. ಅದು ಕೊಡಗರ ಸಂಸ್ಕೃತಿ ಆರಂಭವಾದಾಗಿನಿಂದಲೂ ಇದೆ. ಕೈಮಡದ ಪರಿಕಲ್ಪನೆ, ಇಲ್ಲಿನವರ ಸಂಸ್ಕೃತಿಯ ಮೂಲನೆಲೆಯಿಂದ ಆವಿರ್ಭವಿಸಿರುವ ಒಂದು ವೈಶಿಷ್ಟ್ಯಪೂರ್ಣ ಆಚರಣೆ" ಎಂದು ಕಳ್ಳಚಂಡ ಪಿ. ಲಲಿತ ಅವರು ತಮ್ಮ ಸಂಶೋಧನಾ ಪ್ರಬಂಧ ವಿರಾಜಪೇಟೆ ತಾಲೂಕಿನ ಸ್ಥಳನಾಮಗಳು ಎನ್ನುವ ಕೃತಿಯಲ್ಲಿ ಅಭಿಪ್ರಾಯಪಟ್ಟಿದ್ದಾರೆ(ಲಲಿತ, ೨೦೧೫:೧೬೬-೧೬೭). ಆದರೆ ಇಲ್ಲಿ ಕೊಡಗರ ಸಂಸ್ಕೃತಿ ಆರಂಭವಾದಗಿನಿಂದಲೂ ಕೈಮಡಗಳು ಇದೆ ಎಂಬುದಕ್ಕೆ ಸೂಕ್ತ ಮಾಹಿತಿಗಳು ಇರುವುದಿಲ್ಲ.

ಪಟ್ಟೋಲೆ ಪಳಮೆಯಲ್ಲಿ ನಡಿಕೇರಿಯಂಡ ಮನೆತನದ ಮೂಲಪುರುಷ ದೇವಯ್ಯನು ಮೃತನಾದ ನಂತರ ಒಕ್ಕದ ಸದಸ್ಯರಿಗೆ ಕೈಮಡ ಕಟ್ಟಬೇಕೆಂಬ ಪ್ರೇರಣೆಯಾಗಿ ಕಲ್ಲು ಕೈಮಡವೊಂದನ್ನು ಕಟ್ಟಿದರೆಂಬ ಸವಿವರವಾದ ಜಾನಪದ ಗೀತೆಯೊಂದು ಹೀಗಿದೆ:

ಕೇಳೋ ಕೇಳೋ ಬಯಿಂಬನ್
ಕಾಕಂಡ್ ಪೋಚಿಂದ್
ದೇವಯ್ಯಂಡ ತಮ್ಮಯ್ಯ
ಕಾರುವಣ್ಣ ಬಯಿಂಬನ್
ದುಃಖ ಕೊಂಡಿಪ್ಪಕ್ಕ
ಏಳ್ಕೇರಿ ನಾಡೋನ್
ಕಾರುವಣ್ಣ ಬೈಂಬಂಗ್
ಕಣ್ಣ್ ನೀರ್ ತ್'ಟಿತ್
ಬೈಂಬ ಕೇಳಿ ಕೇಟಿತ್
ನಾಡ್'ನ ಪೊಲತ್'ನ
ದೇವಯ್ಯ ಬಯಿಂಬಂಗ್
ಕಲ್ಲ್‌ಕೈಮಡಾಂಡುಲ
ಪೊನ್ನುರನ ಬೆಕ್ಕಂಡು
ಎಂದೆಣ್ಣಿ ಪರೆಂದತ್
ಅದ್ ಕೇಟ್ ಕಾರುವಣ್ಣ
ಕಲ್ಲ್ ಕೈಮಡಾಕಿತ್
ಪೊನ್ನರನ ಬೆಚ್ಚಿತ್
ಚತ್ತ್ ಸ್ವರ್ಗ ಪೋನವನ
ಪಾಡಿ ಸ್ವರ್ಗ ಕೂಟ್'ಚಿ (ಚಿಣ್ಣಪ್ಪ, ೨೦೦೬,(೧೯೨೪):೪೫೯)

ಎನ್ನುವ ಬಾಳೋಪಾಟ್(ಜಾನಪದ ಗೀತೆ)ನಲ್ಲಿ ನಡಿಕೇರಿಯಂಡ ಒಕ್ಕದ ಮೂಲ ಪುರುಷರ ಹೆಸರಿನಲ್ಲಿ ಕಲ್ಲು ಕೈಮಡ ಮಾಡಲು ಹೇಗೆ ಅವನ ತಮ್ಮ ಕಾರುವಣ್ಣನಿಗೆ ಪ್ರೇರಣೆಯಾಯಿತು ಎಂಬುದರ ವಿವರವಿದೆ. ಈ ದೇವಯ್ಯ ಎಂಬುವವರು ಹನ್ನೊಂದು ತಲೆಮಾರಿನ ಹಿಂದೆ ಬದುಕಿದ್ದವರು ಎಂಬುದಕ್ಕೆ ನಡಿಕೇರಿಯಂಡ ಒಕ್ಕದ ವಂಶವೃಕ್ಷದಲ್ಲಿ ದಾಖಲೆಯಿರುತ್ತದೆ.

ಕೈಮಡಗಳು ಇಂದಿಗೂ ಅಸ್ತಿತ್ವದಲ್ಲಿವೆ ಮತ್ತು ಹಳೆಯ ಕೈಮಡಗಳು ಜೀರ್ಣೋದ್ಧಾರಗೊಳ್ಳುತ್ತಿವೆ. ಉದಾಹರಣೆಗೆ ಹೊದ್ದೂರಿನ ಚೌರೀರ ಒಕ್ಕ, ಕರಡದ ನೆರಪಂಡ ಒಕ್ಕದವರು ಒಕ್ಕದ ಒಗ್ಗಟ್ಟನ್ನು ಕಾಯ್ದುಕೊಳ್ಳುವ ನಿಟ್ಟಿನಲ್ಲಿ ಹೊಸ ಕೈಮಡ(ಕೈಮಡ ಎಂದರೆ ಗುರುಕಾರೋಣರನ್ನು ಪೂಜಿಸುವ

ಗುಡಿ)ಗಳನ್ನು ಕಟ್ಟಿಕೊಂಡಿದ್ದಾರೆ. ಕೊಡಗರು ಸಾಮಾನ್ಯವಾಗಿ ಪ್ರತಿ ವರ್ಷ ಗುರುಕಾರೋಣರಿಗೆ ಎಡೆ ಇಡುವ ಕಾರ್ಯಕ್ರಮ ಅಕ್ಟೋಬರ್/ನವೆಂಬರ್ ತಿಂಗಳಲ್ಲಿ ಹಮ್ಮಿಕೊಳ್ಳುತ್ತಾರೆ. ಹೀಗೆ ಒಕ್ಕದ ಸದಸ್ಯರು ದೂರದೂರಿನಲ್ಲಿ ನೆಲೆಸಿದ್ದರೂ ಕೂಡ ವರ್ಷಕ್ಕೊಮ್ಮೆಯಾದರೂ ಐನ್‌ಮನೆ ಮತ್ತು ಕೈಮಡಗಳ ಹಿನ್ನೆಲೆಯಲ್ಲಿ ಒಗ್ಗೂಡುತ್ತಾ ಬರುವುದನ್ನು ಗಮನಿಸಬಹುದು. ಮದುವೆಯಾಗಿ ಒಕ್ಕದೊಳಗೆ ಬಂದ ಹೆಣ್ಣುಮಗಳು ಐನ್‌ಮನೆ ಮತ್ತು ಕೈಮಡಗಳನ್ನು ದರ್ಶನ ಮಾಡಿ ಅಕ್ಷತೆ ಹಾಕಿ ಬರುವ ಸಂಪ್ರದಾಯವಿದೆ. ಈ ಆಧುನಿಕ ಸಂದರ್ಭದಲ್ಲಿಯೂ ಕೃಷಿ ಕೇಂದ್ರಿತ ಸಮುದಾಯಗಳ ಬದುಕಿನಲ್ಲಿ ಅಷ್ಟರಮಟ್ಟಿಗೆ ಕೈಮಡಗಳು ತಮ್ಮ ಸಾಮಾಜಿಕ ಮತ್ತು ಧಾರ್ಮಿಕ ಪ್ರಾಮುಖ್ಯತೆ ಉಳಿಸಿಕೊಂಡು ಬಂದಿವೆ.

### ೨.೩.೫. ವಿವಾಹ ಪದ್ಧತಿಗಳು

ಒಕ್ಕಗಳು ಸಂತಾನೋತ್ಪತ್ತಿಯ ಕೇಂದ್ರಗಳೂ ಆಗಿವೆ. ಅದಕ್ಕಾಗಿ ಸಮಾಜದಲ್ಲಿ ಒಪ್ಪಿತ ಮಾದರಿಯ ವಿವಾಹ ಸಂಬಂಧಗಳು ಏರ್ಪಡುತ್ತವೆ. ಈ ವಿವಾಹಗಳ ಮೂಲಕ ಒಕ್ಕಗಳು ತಮ್ಮ ಮುಂದಿನ ಪೀಳಿಗೆಯನ್ನು ಪಡೆಯುತ್ತಾ, ಬೆಳೆಸುತ್ತಾ ಹೋಗುತ್ತವೆ. ಆದ್ದರಿಂದ ವಿವಾಹಗಳು ಕೊಡಗಿನ ಸಮಾಜದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಕೊಡವರ ಸಂಪ್ರದಾಯದಲ್ಲಿ ಮದುವೆ ಎಂಬುದನ್ನು ಸಂಸ್ಕಾರ ಎಂಬ ಅರ್ಥದಲ್ಲಿ ಪ್ರಯೋಗಿಸಬೇಕು. ಕೇವಲ ವಿವಾಹ ಎಂಬ ಅರ್ಥದಲ್ಲಲ್ಲ(ರಾಮಾನುಜಂ, ೧೯೭೫:೬೯). ಈ ವಿವಾಹದ ವಿಧಾನಗಳಲ್ಲಿ ಆರು ಪ್ರಕಾರಗಳನ್ನು ೧೯೨೪ರಲ್ಲಿ ನಡಿಕೇರಿಯಂಡ ಚಿಣ್ಣಪ್ಪನವರು ಪ್ರಕಟಿಸಿದ 'ಪಟ್ಟೋಲೆ ಪಳಮೆ'ಯಲ್ಲಿ ಗುರುತಿಸುತ್ತಾರೆ(ಚಿಣ್ಣಪ್ಪ, ೧೯೨೪: ೮೦-೧೩೮). ಅವುಗಳೆಂದರೆ: ೧. ಕನ್ನಿಮಂಗಲ[೧೯], ೨. ಕೂಡಾವಳಿ[೨೦], ೩. ಒಕ್ಕ ಪರಿಜೆ[೨೧], ೪. ಮಕ್ಕಪರಿಜೆ[೨೨], ೫. ಬೆಂದುಪರಿಜೆ[೨೩], ೬. ಕುಟ್ಟಪರಿಜೆ[೨೪] (ಶ್ರೀನಿವಾಸ್ ೧೯೫೨:೪೫).

ಸಮಾಜಶಾಸ್ತ್ರಜ್ಞ ಎಂ.ಎನ್. ಶ್ರೀನಿವಾಸ್ ಅವರು ಕೊಡವರಲ್ಲಿ ಪ್ರಮುಖವಾಗಿ ಮೂರು ಪ್ರಕಾರದ ವಿವಾಹಗಳನ್ನು ಗುರುತಿಸುತ್ತಾರೆ(ಶ್ರೀನಿವಾಸ್, ೧೯೫೨, ೧೪೧). ಅವುಗಳೆಂದರೆ: ಕನ್ನಿಮಂಗಲ, ಒಕ್ಕಪರಿಜೆ ಮತ್ತು ಮಕ್ಕಪರಿಜೆ.

ಪಿ.ಎಸ್. ರಾಮಾನುಜಂ ಅವರು ಹೇಳುವಂತೆ ನಿಜವಾದ ವಿವಾಹ ಪದ್ಧತಿಯಲ್ಲಿ ಕೊಡವರಿಗೆ ನಾಲ್ಕು ವಿಧವಾದ ವಿವಾಹಗಳಿವೆ(ರಾಮಾನುಜಂ, ೧೯೭೫: ೬೯). ಅವುಗಳೆಂದರೆ: ೧. ಕನ್ನಿಮಂಗಲ ೨. ಕೂಡಾವಳಿ ಮಂಗಲ, ೩. ಒಕ್ಕಪರಿಜೆ, ೪. ಮಕ್ಕಪರಿಜೆ.

ಆದರೆ ಹೆಚ್.ಕೆ. ನಾಗೇಶ್ ಅವರು ಒಟ್ಟಾರೆ ಒಂಬತ್ತು ಪ್ರಕಾರದ ಮದುವೆಗಳನ್ನು ಗುರ್ತಿಸುತ್ತಾರೆ(ನಾಗೇಶ್, ೧೯೯೯: ೧೮-೨೧). ಅವುಗಳೆಂದರೆ: ೧. ಕನ್ನಿಮಂಗಲ, ೨. ಕೂಡಾವಳಿ, ೩. ಒಕ್ಕಪರಿಜೆ, ೪. ಮಕ್ಕಪರಿಜೆ, ೫. ಕುಟ್ಟಪರಿಜೆ, ೬. ಪೈತಾಂಡೆಕಳಪ ಮಂಗಲ[೨೫], ೭. ಕೆಮಿಕುತ್ತಿ ಮಂಗಲ[೨೬], ೮. ನರಿ ಮಂಗಲ[೨೭], ೯. ಕೊದಿಮಂಗಲ[೨೮].

ಇವುಗಳಲ್ಲಿ ಮೊದಲ ಐದು ಪ್ರಕಾರದ ವಿವಾಹಗಳು ಒಕ್ಕದ ಮುಂದುವರಿಕೆಗೆ ನೆರವಾಗುವ ಪದ್ಧತಿಗಳಾಗಿವೆ. ಉಳಿದ ಮೂರು ಪದ್ಧತಿಗಳು ಆಚರಣೆಗೆ ಸೀಮಿತವಾಗಿವೆ. ಅವುಗಳಲ್ಲಿ ಮೂರು ಪ್ರಕಾರದ ವಿವಾಹಗಳು ಆಚರಣೆಯಲ್ಲಿದ್ದು, ಐದು ಪ್ರಕಾರದ ವಿವಾಹಗಳನ್ನು ಪ್ರಸ್ತುತ ಆಚರಣೆಯಲ್ಲಿಲ್ಲದ ವಿವಾಹಗಳೆಂದು ಗುರುತಿಸಲಾಗಿದೆ. ಇವುಗಳ ವಿವರಗಳು ಹೀಗಿವೆ:

**ಪ್ರಸ್ತುತ ಆಚರಣೆಯಲ್ಲಿಲ್ಲದ ವಿವಾಹ ಪದ್ಧತಿಗಳು**

ಮೇಲಿನ ವಿವಾಹ ಪದ್ಧತಿಗಳಲ್ಲಿ ಇಂದು ಕೆಲವು ಆಚರಣೆಗಳಲ್ಲಿಲ್ಲ. ಮೇಲಿನವುಗಳಲ್ಲಿ ಒಕ್ಕಪರಿಜೆ, ಮಕ್ಕಪರಿಜೆ, ನರಿಮಂಗಲಗಳು, ಕೆಮ್ಮಿಕುತ್ತಿ ಮಂಗಲ ಮತ್ತು ಪೈತಾಂಡೆಕಳಪ ಆಚರಣೆಯಲ್ಲಿ ಇರುವುದಿಲ್ಲ.

**ಮಕ್ಕಪರಿಜೆ** ಎಂದರೆ(ಚೆಣ್ಣಪ್ಪ, ೨೦೦೬(೧೯೨೪):೧೩೬), (ಶ್ರೀನಿವಾಸ್, ೧೯೮೯(೧೯೫೨): ೧೪೧-೪೨) ಗಂಡು ಇಲ್ಲದ ಕುಟುಂಬಕ್ಕೆ ಬೇರೊಂದು ಕುಟುಂಬದ ಹುಡುಗನನ್ನು ತಂದು 'ಕುತ್ತಿ'[೫] ನಿಲ್ಲಿಸುವ ಹಳೇ ಕ್ರಮ ಎಂದು ಐ.ಮಾ. ಮುತ್ತಣ್ಣ ಅರ್ಥ ನೀಡಿದ್ದಾರೆ(ಮುತ್ತಣ್ಣ, ೧೯೮೮:೧೧೯). ಆದರೆ ಇದು ಸಮರ್ಪಕ ವಿವರಣೆಯಾಗಿರುವುದಿಲ್ಲ. ಮಕ್ಕಪರಿಜೆಯನ್ನು ನಡಿಕೇರಿಯಂಡ ಚೆಣ್ಣಪ್ಪನವರು ಪಚ್ಚಡಕ್ಕೆ ನಡಪದ್ ಎಂದು ಕರೆಯುತ್ತಾರೆ(ಚೆಣ್ಣಪ್ಪ, ೨೦೦೬ (೧೯೨೪):೧೩೬). ಒಂದು ಒಕ್ಕದಲ್ಲಿ ಗಂಡು ಸಂತಾನವಿಲ್ಲದೆ, ಕೇವಲ ಹೆಣ್ಣುಮಕ್ಕಳು ಮಾತ್ರವಿದ್ದು, ಆ ಒಕ್ಕದ ಕೊನೆಯ ಹೆಣ್ಣುಮಗಳನ್ನು ಮತ್ತೊಂದು ಒಕ್ಕದ ಪುರುಷನೊಂದಿಗೆ ವಿವಾಹ ಮಾಡಿ, ಜನಿಸಿದ ಮಕ್ಕಳಿಗೆ ಈ ಒಕ್ಕದ ಆಸ್ತಿಯಹಕ್ಕನ್ನು ಸ್ಥಾಪಿಸುವುದು. ಆ ಮೂಲಕ ಅಳಿವಿನ ಅಂಚಿನಲ್ಲಿದ್ದ ಒಕ್ಕವನ್ನು ಮುಂದುವರಿಸುವ ಪದ್ಧತಿಯಾಗಿದೆ. ಇಲ್ಲಿ ಅನ್ಯ ಒಕ್ಕದ ಪುರುಷ ತನ್ನ ಮೂಲ ಒಕ್ಕದ ಅನನ್ಯತೆಯನ್ನು ಉಳಿಸಿಕೊಂಡಿರುತ್ತಾನೆ. ಆದರೆ ಅವನಿಗೆ ಜನಿಸಿದ ಮಕ್ಕಳು ಮಾತ್ರ ತಾಯಿಯ ಒಕ್ಕಕ್ಕೆ ಸೇರುತ್ತಾರೆ.

**ಒಕ್ಕಪರಿಜೆಯನ್ನು** ಕುತ್ತಿಕ್ 'ನಿಪ್ಪೂ' ಎಂದು ಕರೆಯುತ್ತಾರೆ(ಗಣಪತಿ, ೧೯೬೭:೧೨೭-೨೮). ಯಾವುದೇ ಒಂದು ಒಕ್ಕದಲ್ಲಿ ಗಂಡುಸಂತಾನವಿಲ್ಲದೆ ಹೋದರೆ ಆ ಒಕ್ಕದ ಹೆಣ್ಣು ಮಗಳಿಗೆ ಮತ್ತೊಂದು ಒಕ್ಕದ ವರನನ್ನು ತಂದುಕೊಳ್ಳುವ ಮೂಲಕ ಒಕ್ಕವನ್ನು ಮುಂದುವರಿಸುವ ಪದ್ಧತಿ ಇದಾಗಿದೆ. ಇಲ್ಲಿ ಅಳಿಯನಾಗಿ ಬಂದ ವರನು ತನ್ನ ಮೂಲ ಒಕ್ಕದ ಅನನ್ಯತೆಯನ್ನು ಕಳೆದುಕೊಳ್ಳುವ ಮೂಲಕ ಪತ್ನಿಯ ಒಕ್ಕದ ಅನನ್ಯತೆಯನ್ನು ಪಡೆದುಕೊಳ್ಳುತ್ತಾನೆ. ಇದು ಅಳಿಯ ಸಂತಾನ ಪದ್ಧತಿಯನ್ನು ಹೋಲುತ್ತದೆ(ಶ್ರೀನಿವಾಸ್, ೧೯೮೯(೧೯೫೨): ೧೪೧-೪೨).

**ನರಿಮಂಗಲವು** ಹುಲಿಯನ್ನು ಬೇಟೆಯಾಡಿ ಕೊಂದ ವೀರನಿಗೆ ಸತ್ತ ಹುಲಿಯೊಂದಿಗೆ ವಿವಾಹ ರೀತಿಯಲ್ಲಿ ಸಂಭ್ರಮಾಚರಣೆಯನ್ನು ನಡೆಸುವುದಾಗಿತ್ತು. ಆದರೆ, ಈ ಪದ್ಧತಿಯು ಇಂದು ಜಾರಿಯಲ್ಲಿರುವ ವನ್ಯಜೀವಿ ಸಂರಕ್ಷಣಾ ಕಾಯ್ದೆಯ ಪರಿಣಾಮವಾಗಿ ನಿಷಿದ್ಧವಾಗಿದೆ.

**ಕೆಮ್ಮಿಕುತ್ತಿ ಮಂಗಲ** ಎಂದರೆ ಕಿವಿ ಚುಚ್ಚುವುದು. ಇದು ಗಂಡಸರಿಗೆ ಮಾತ್ರ ಅನ್ವಯಿಸುತ್ತದೆ. ಸಾಮಾನ್ಯವಾಗಿ ಚಿಕ್ಕವಯಸ್ಸಿನಲ್ಲಿಯೇ ನಡೆಯುವಂತಹದ್ದಾಗಿದ್ದು, ಉಪನಯನ, ಮುಂಜಿಯ ಮಾದರಿಯಲ್ಲಿ ನಡೆಯುವ ಆಚರಣೆಯಾಗಿದೆ. ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಮಿಕುತ್ತಿ ಮಂಗಲಕ್ಕೆ ಮಹತ್ವವಾಗಲಿ, ಪ್ರಾಶಸ್ತ್ಯವಾಗಲಿ ಇರುವುದಿಲ್ಲ.

**ಪೈತಾಂಡೆಕಳಪ** ಎಂಬುದು ಇನ್ನೊಂದು ರೀತಿಯ ವಿವಾಹ ಪದ್ಧತಿಯಾಗಿದೆ. ಒಬ್ಬ ಕೊಡವತಿಯು ಹತ್ತು ಮಕ್ಕಳಿಗೆ ಜನ್ಮ ಕೊಟ್ಟು ಆ ಮಕ್ಕಳು ಮತ್ತು ತಾಯಿ ಜೀವಂತವಾಗಿದ್ದರೆ, ಗೌರವಯುತವಾಗಿ ವಿಶೇಷ ರೀತಿಯ ಉತ್ಸವ ನಡೆಸಿ ಮುಹೂರ್ತ ನಡೆಸುವರು. ಇದನ್ನೇ ಪೈತಾಂಡೆಕಳಪ ಮಂಗಲ ಎನ್ನುವರು(ನಾಗೇಶ್, ೧೯೯೯:೨೧). ಇದು ಕೂಡ ಇಂದು ಕಣ್ಮರೆಯಾಗಿರುವ ಒಂದು ಆಚರಣೆಯಾಗಿದೆ.

**ಪ್ರಸ್ತುತ ಆಚರಣೆಯಲ್ಲಿರುವ ವಿವಾಹ ಪದ್ಧತಿಗಳು**

ಪ್ರಸ್ತುತ ಆಚರಣೆಯಲ್ಲಿರುವ ವಿವಾಹ ಸಂಸ್ಕಾರ ಪದ್ಧತಿಗಳೆಂದರೆ: ಕನ್ನಿಮಂಗಲ, ಕೂಡಾವಳಿ, ಕೊದಿಮಂಗಲ.

**ಕನ್ನಿಮಂಗಲವು** ಕೊಡಗಿನಲ್ಲಿ ನಡೆಯುವ ಸಾಂಪ್ರದಾಯಿಕ ವಿವಾಹವನ್ನು ಕನ್ನಿಮಂಗಲ ಎನ್ನುವರು(ನಾಗೇಶ್, ೧೯೯೯:೯). ವಧು ಮತ್ತು ವರನ ಎರಡೂ ಕುಟುಂಬಗಳು ಒಪ್ಪಿಗೆ ಸೂಚಿಸುವುದರ ಜೊತೆಗೆ ವಧುವರರು ಒಪ್ಪಿಕೊಂಡ ನಂತರ ನಾಳ್‌ಮುಹೂರ್ತ ನೋಡಿ ವಿವಾಹ ದಿನಾಂಕವನ್ನು ನಿಶ್ಚಯಿಸಲಾಗುವುದು. ಕೊಡಗಿನ ವಿವಾಹದ ವಿಶೇಷತೆ ಎಂದರೆ ಗಂಡಿನ ಮನೆಯಲ್ಲಿ ಗಂಡಿನ ವಿವಾಹವೂ, ಹೆಣ್ಣಿನ ಮನೆಯಲ್ಲಿ ಹೆಣ್ಣಿನ ವಿವಾಹವೂ ಒಕ್ಕದ ಸದಸ್ಯರು, ಬಂಧು ಬಳಗದವರು ಹಾಗೂ ಊರವರ ಸಮ್ಮುಖದಲ್ಲಿ ನೆರವೇರಿಸುವರು. ವಧುವಿಗೆ ವಧುವಿನ ತಾಯಿ ಚಪ್ಪರದ ದಿನವೇ ಮಾಂಗಲ್ಯಧಾರಣೆ ನೆರವೇರಿಸುತ್ತಾರೆ. ಮರುದಿನ ಮಧ್ಯಾಹ್ನದ ನಂತರ ವರನು ತನ್ನ ಬಂಧುಬಳಗದವರೊಡನೆ ದಿಬ್ಬಣ ಹೊರಟು ವಧುವಿನ ಮನೆ ಸೇರುತ್ತಾರೆ. ಸೇರುವ ಮುನ್ನ ವರನ ಕಡೆಯ ಕೊರವುಕಾರನು(ಮುಂದಾಳು) ವಧುವಿನ ಮನೆಯ ಅಂಗಳದಲ್ಲಿ ನೆಡಲಾಗಿರುವ ಏಳು ಅಥವಾ ಒಂಬತ್ತು ಬಾಳೆಯ ದಿಂಡುಗಳನ್ನು ಕತ್ತರಿಸಿ ವಧುವಿನ ಮನೆಯನ್ನು ಪ್ರವೇಶಿಸುತ್ತಾನೆ.

ಈ ಆಚರಣೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಇದು ಬುಡಕಟ್ಟು ಸಂಸ್ಕೃತಿಯ ಪಳೆಯುಳಿಕೆಯಂತೆ ಕಾಣುತ್ತದೆ. ನಾಗರಿಕ ಪೂರ್ವ ಸಮಾಜದಲ್ಲಿ ಬುಡಕಟ್ಟು ಸಂಸ್ಕೃತಿಯ ವಿವಾಹ ಆಚರಣೆಗಳಿಗೆ ಯಾವುದೇ ನಿರ್ದಿಷ್ಟ ಕಟ್ಟುಪಾಡುಗಳು ಇರಲಿಲ್ಲ. ಪುರುಷನು ತನಗೆ ಇಷ್ಟವಾದ ಹೆಣ್ಣನ್ನು ಹೊತ್ತು ಹೋಗುವ ಸಂದರ್ಭದಲ್ಲಿ ಹೆಣ್ಣಿನ ಕಡೆಯವರು ಅಡ್ಡಿಪಡಿಸಿದರೆ, ಸಂಘರ್ಷಕ್ಕೂ ಇಳಿಯಬೇಕಾಗುತ್ತಿತ್ತು. ಪ್ರತಿರೋಧ ಒಡ್ಡುವವರನ್ನು ಕಡಿದುಹಾಕಿ ಹೆಣ್ಣನ್ನು

ಹೊತ್ತುಹೋಗುವ ಸಂದರ್ಭಗಳು ಎದುರಾಗುತ್ತಿದ್ದವು. ಈ ಸನ್ನಿವೇಶದ ಸಾಂಕೇತಿಕ ರೂಪವಾಗಿ ಬಾಳೆದಿಂಡನ್ನು ಕಡಿಯುವ ಆಚರಣೆ ರೂಢಿಯಲ್ಲಿರುವಂತೆ ಕಾಣುತ್ತದೆ. ವಿವಾಹ ಪದದ ಮೂಲ ಅರ್ಥ ಕೂಡ ವಧುವನ್ನು ಹೊತ್ತುಹೋಗುವುದು ಎಂಬುದನ್ನೇ ಸೂಚಿಸುವುದನ್ನು ಗಮನಿಸಬಹುದು. ಬದಲಾದ ಸನ್ನಿವೇಶದಲ್ಲಿ ಕಲ್ಯಾಣ ಮಂಟಪದಲ್ಲಿ ನಡೆಯುವ ವಿವಾಹಗಳಲ್ಲಿಯೂ ಈ ಎಲ್ಲಾ ಆಚರಣೆಗಳನ್ನು ಸಾಂಕೇತಿಕವಾಗಿ ನೆರವೇರಿಸಲಾಗುತ್ತಿದೆ.

**ಕೂಡಾವಳಿ** ಮದುವೆಯು ಮೂರು ಸಂದರ್ಭಗಳಲ್ಲಿ ನೆರವೇರುತ್ತದೆ.

೧. ಸತ್ತುಹೋದ ಗಂಡನ ಮನೆಯಲ್ಲೆ ಸತ್ತವನ ಅಣ್ಣ, ತಮ್ಮ ಅಥವಾ ದಾಯಾದಿಯರು ಅವನ ವಿಧವೆಯನ್ನು ಮದುವೆ ಮಾಡಿಕೊಳ್ಳುವುದು.

೨. ವಿಧವೆಯನ್ನು ಇತರ ಮನೆಯವರು ಮದುವೆ ಮಾಡಿಕೊಳ್ಳುವುದು.

೩. ಗಂಡ ಬಿಟ್ಟ ಹೆಣ್ಣನ್ನು ಇನ್ನೊಬ್ಬ ಮದುವೆ ಮಾಡಿಕೊಳ್ಳುವುದು(ಚಿಣ್ಣಪ್ಪ, ೨೦೦೬(೧೯೨೪): ೧೩೦). ಲಿಂಗಾಯತ ರಾಜರ ಕಾಲದಲ್ಲಿ ಕೂಡಾವಳಿ ಮದುವೆ ಕೊಡಗರ ಮದುವೆಯಂತೆ ಮಾಡಕೂಡದೆಂದೂ, ಶೂದ್ರರ ಮದುವೆಯಂತೆ ಮಾಡಬೇಕೆಂದೂ ಅಪ್ಪಣೆ ಇತ್ತು ಎಂದು ನಡಿಕೇರಿಯಂಡ ಚಿಣ್ಣಪ್ಪ ಅಭಿಪ್ರಾಯಪಡುತ್ತಾರೆ(ಚಿಣ್ಣಪ್ಪ, ೨೦೦೬(೧೯೨೪): ೧೩೦). ಕನ್ನಿಮಂಗಲದ ರೀತಿಯಲ್ಲೇ ಹಲವು ಆಚರಣೆಗಳು ನೆರವೇರುತ್ತದೆಯಾದರೂ ಅವು ಸರಳವಾಗಿರುತ್ತವೆ.

ವಸಾಹತುಪೂರ್ವ ಕಾಲಘಟ್ಟದಲ್ಲಿ ಕೂಡಾವಳಿ ಮಂಗಲವು ನಡೆಯಲು ಬಹಳಷ್ಟು ಕಾರಣಗಳಿದ್ದವು. ಯುದ್ಧ, ಕಾಯಿಲೆ ಮೊದಲಾದ ಕಾರಣಗಳಿಂದ ಅಕಾಲಿಕ ಮರಣಕ್ಕೆ ಗಂಡಂದಿರು ತುತ್ತಾದಾಗ ಯುವವಿಧವೆಯರು ಬೇರೆ ದಾರಿಯಿಲ್ಲದೆ ಕೂಡಾವಳಿ ಮದುವೆ ಮಾಡಿಕೊಳ್ಳುತ್ತಿದ್ದರು. ಬ್ರಿಟಿಷ್ ಆಡಳಿತದ ಕಾಲಘಟ್ಟದಲ್ಲೂ ಕಾಯಿಲೆಗಳಿಗೆ ಒಳಗಾಗಿ ಮರಣಪಟ್ಟ ಸಂದರ್ಭದಲ್ಲಿ ಗಂಡ ಅಥವಾ ಹೆಂಡತಿ ಮರುವಿವಾಹ ಆಗುತ್ತಿದ್ದರು. ಜಾಗತೀಕರಣದ ಸಂದರ್ಭದಲ್ಲಿ ಆಧುನಿಕ ವಿದ್ಯಾಭ್ಯಾಸ ಮತ್ತು ವಿಪರೀತವಾದ ಸಾಮಾಜಿಕ ಅಭಿಪ್ರಾಯಗಳ ಕೊಡುಕೊಳ್ಳುವಿಕೆ ಮೊದಲಾದ ಕಾರಣದಿಂದ ಮದುವೆ ವಿಚ್ಛೇದನಗಳು ಉಂಟಾಗುತ್ತಿದ್ದು ಪ್ರಸ್ತುತ ಕೂಡಾವಳಿ ಮದುವೆ ರೀತಿಯ ಮದುವೆಗಳು ಆಗಾಗ ಜರುಗುತ್ತಿರುವುದನ್ನು ಗಮನಿಸಬಹುದು.

**ಕೊದಿಮಂಗಲ**[೬೦]ವನ್ನು ಪೊಮ್ಮಂಗಲ ಎಂದೂ ಕರೆಯುವರು. ಕೊದಿಮಂಗಲ ಎಂಬುದು ಒಂದು ವಿಶಿಷ್ಟ ರೀತಿಯ ಧಾರ್ಮಿಕ ಆಚರಣೆಯಾಗಿದೆ. ಗಂಡುಮಗುವಿಗೆ ವಧುವಿನ ವೇಷವನ್ನು, ಹೆಣ್ಣುಮಗುವಿಗೆ ವರನ ವೇಷವನ್ನು ತೊಡಿಸುತ್ತಾರೆ. ಇದು ಉತ್ತರ ಕೊಡಗಿನ ಪೇರೂರು ಗ್ರಾಮದ ರಾಟೆ ದೇವಸ್ಥಾನದ ಇಗ್ಗುತ್ತಪ್ಪ ದೇವರಿಗೂ, ದಕ್ಷಿಣಕೊಡಗಿನ ಬಿರುನಾಣಿ ಸಮೀಪದ ಪುತ್ತ್‌ಭಗವತಿ ದೇವರಿಗೂ ಹರಕೆ ಒಪ್ಪಿಸುವ ಆಚರಣೆಯಾಗಿದೆ. ಇವಲ್ಲದೆ **ಪಚ್ಚಡತ್ ಪೊಣ್ಣ್**[೬೧] ಎಂಬ ಇನ್ನೊಂದು ಪದ್ಧತಿ ಆಚರಣೆಯಲ್ಲಿತ್ತು.

> ಪಚ್ಚಡತ್ ಪೊಣ್ಣ್ ಎಂದರೆ ಹಚ್ಚಡ ಅಥವಾ ಸೀರೆಯನ್ನು ಕೆಳಜಾತಿಯ ಹೆಣ್ಣೊಬ್ಬಳಿಗೆ ನೀಡುವ ಮೂಲಕ ತನ್ನವಳನ್ನಾಗಿ ಮಾಡಿಕೊಳ್ಳುವುದು. ಹಾಲೇರಿ ರಾಜರುಗಳ ಆಳ್ವಿಕೆಯ ಕಾಲದಲ್ಲಿ ಕೊಡಗಿನ ಜಮೀನುದಾರಿ ವರ್ಗ ಕೆಲವು ಸಂಪ್ರದಾಯಗಳನ್ನು ರೂಢಿಸಿಕೊಂಡಿತು. ಅವು ಕೆಳವರ್ಗದ ಜನರನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಲು ಮೇಲ್ವರ್ಗದವರು ಮಾಡಿಕೊಂಡ ಒಪ್ಪಂದಗಳಿಂತಿದ್ದವು. ಅವುಗಳಿಗೆ ಸಮಾಜದ ಅಂಗೀಕಾರವಿದ್ದುದರಿಂದ ತೊಂದರೆಗೊಳಗಾಗುವ ಕೆಳವರ್ಗದವರು ಪ್ರತಿಭಟನೆಯಿಲ್ಲದೆ ಅವನ್ನು ಒಪ್ಪಿಕೊಳ್ಳಬೇಕಾಗಿತ್ತು. ದೊಡ್ಡ ವೀರರಾಜನ ತರುವಾಯ ಕೊಡಗಿನ ಪಟ್ಟವೇರಿದ ಲಿಂಗರಾಜ ಆಡಳಿತ ವ್ಯವಸ್ಥೆಯಲ್ಲಿ ಅನೇಕ ಸುಧಾರಣೆಗಳನ್ನು ತಂದರು. ಸಂಪ್ರದಾಯವೆಂದು ಕೆಳವರ್ಗದವರ ಶೋಷಣೆಗೆ, ಕಾರಣವಾಗುವ ಕೆಲವು ಪದ್ಧತಿಗಳನ್ನು ನಿಲ್ಲಿಸಿದ ಅವುಗಳಲ್ಲಿ ಪಚ್ಚಡ ಪೊಣ್ಣು ಪದ್ಧತಿ ಮುಖ್ಯವಾದದ್ದು (ಡಾ. ಪ್ರಭಾಕರ ಶಿಶಿಲ, ಮಂಗಳ ವಾರಪತ್ರಿಕೆ ೨೪ ಆಗಸ್ಟ ೨೦೧೧, ಪುಟ:೪೦).

ದಕ್ಷಿಣ ಕೊಡಗಿನ ಲಕ್ಷಣ ತೀರ್ಥ ನದಿ ತೀರದಲ್ಲಿ ವಾಸವಾಗಿದ್ದ ಕೇರಳ ಮೂಲದ 'ರಾಮ ಕಣಿಯನ್'ನ ಮಗಳು 'ಇಚ್ಚಿರೆ ಮೋಳ್'. ರಾಮಕಣಿಯನ್‌ಗೆ ಹೆಂಡತಿ ಇರಲಿಲ್ಲ. ತಾಯಿ ಇಲ್ಲದ ಮಗಳು 'ಇಚ್ಚಿರೆ ಮೋಳ್' ಸುಂದರಿಯಾಗಿದ್ದಳು. ಒಮ್ಮೆ ಬೇಟೆಗೆಂದು ಬಂದ ಜಮೇದಾರ ಮಾಚಯ್ಯನೆಂಬವನು ಮೇಲ್ಜಾತಿಯ ಕೊಡವ ಸಮುದಾಯದವನಾಗಿದ್ದು, ಗಾಯಗೊಂಡಿದ್ದನು. ಇವನ ಗಾಯಕ್ಕೆ ಔಷಧಿ ನೀಡಿ ಶುಶ್ರೂಷೆ ನೀಡಿದಳು 'ಇಚ್ಚಿರೆ ಮೋಳ' ಕಾಡಿನ ಮಧ್ಯದಲ್ಲಿ ಮನೆ ಮಾಡಿಕೊಂಡಿದ್ದ ಅವಳ ಸೌಂದರ್ಯಕ್ಕೆ ಮಾರುಹೋದ ಮಾಚಯ್ಯ ಅವಳೊಡನೆ ಸೇರಿದ. ಪುಷ್ಪವತಿಯಾಗಿದ್ದ ಇಚ್ಚಿರೆ ಮೋಳ ಫಲವತಿಯಾದಳು. ಈ ವಿಚಾರ ರಾಮ ಕಣಿಯನ್‌ಗೆ ಗೊತ್ತಾಯಿತು. ಈ ದೂರು ಲಿಂಗರಾಜನಿಗೆ ಹೋಯಿತು. ಮದುವೆ ಆಗದೆ ಈ ಹೆಣ್ಣನ್ನು ಗರ್ಭವತಿಯನ್ನಾಗಿ ಮಾಡಿರುವುದು ಯಾಕೆ ಎಂದು ಲಿಂಗರಾಜ ಕೇಳಿದಾಗ "ಇಚ್ಚಿರೆ ಮೋಳ್'ನ್ನು ಪಚ್ಚಡ ಪೊಣ್ಣ್ ಆಗಿ ಇಟ್ಟುಕೊಂಡಿರುತ್ತೇನೆ ಎಂದು ಮಾಚಯ್ಯ ಹೇಳುತ್ತಾನೆ. ಸಾಮಾಜಿಕವಾಗಿ ಸ್ವೀಕರಿಸಲಾಗದ ಕೆಳವರ್ಗದ ಇಂತಹ ಹೆಣ್ಣು ಮಕ್ಕಳನ್ನು ಇಷ್ಟವಾದಲ್ಲಿ ಮೇಲ್ಜಾತಿಯವರು ಒಂದು ಸೀರೆ ಕೊಟ್ಟು ನನ್ನವಳನ್ನಾಗಿ ಇಟ್ಟುಕೊಳ್ಳ ಬಹುದಾಗಿತ್ತು. ಈ ಸಾಮಾಜಿಕ ಶೋಷಣೆಯ ಬಗ್ಗೆ ಅಸಮಾಧಾನಗೊಂಡ ಲಿಂಗರಾಜರು ಇಬ್ಬರಿಗೂ ಲಿಂಗಧಾರಣೆ ಮಾಡಿಸಿ ಶಿವಾಚಾರರಾಗಿ ಮಾಡಿ ಸತಿ ಪತಿಯನ್ನಾಗಿ ಮಾಡಿದರು ಎಂಬ ವಿವರಗಳು ಪ್ರಭಾಕರ ಶಿಶಿಲ ಅವರ ಲೇಖನದಲ್ಲಿ ದೊರಕುತ್ತದೆ(ಶಿಶಿಲ, ಮಂಗಳ ೨೪ ಆಗಸ್ಟ್: ಪುಟ ೪೦, ೪೧, ೫೦).



ಆ ಕಾಲಘಟ್ಟದಲ್ಲಿ ಈ ರೀತಿಯ ಅನೇಕ ಘಟನೆಗಳು ಕೊಡಗಿನ ಸಾಮಾಜಿಕ ಸಂದರ್ಭದಲ್ಲಿ ನಡೆಯುತ್ತಿದ್ದವು ಎನ್ನುವುದಕ್ಕೆ ಅನೇಕ ನಿದರ್ಶನಗಳಿವೆ. ಲಿಂಗಾಯಿತ ಅರಸರ ಕಾಲದಲ್ಲಿ ಈ ಸಂಪ್ರದಾಯ ಕೊಡಗಿನಲ್ಲಿ ಸಾಮಾಜಿಕವಾಗಿ ತಳವರ್ಗದೊಡನೆ ಕೌಟುಂಬಿಕ ಸಂಬಂಧಗಳನ್ನು ಹೊಂದಲು ಸಾಧ್ಯವಿಲ್ಲದಿದ್ದರೂ ತಮಗೆ ಅನುಕೂಲವಾಗುವಂತೆ ರೂಢಿಸಿಕೊಂಡಿರುವ ಈ ಸಂಪ್ರದಾಯಕ್ಕೆ ಪ್ರಸ್ತುತ ಪರಿಸ್ಥಿತಿಯಲ್ಲಿ ಅಂಗೀಕಾರ ಇರುವುದಿಲ್ಲ.

ಆದರೆ ಈ ಹೆಣ್ಣುಮಗಳಿಗೆ ಆ ಪುರುಷನ ಒಕ್ಕದ ಒಳಗೆ ಯಾವುದೇ ರೀತಿಯ ಸ್ಥಾನಮಾನವಾಗಲಿ, ಸಾಮಾಜಿಕ ಮನ್ನಣೆಯಾಗಲಿ ಇರುವುದಿಲ್ಲ. ಅವಳಿಗೆ ಜನಿಸಿದ ಮಕ್ಕಳು ತಂದೆಯ ಒಕ್ಕಕ್ಕೆ ಸೇರುತ್ತಾರಾದರೂ, ಅವರಿಗೆ ಯಾವುದೇ ತತ್‌ಕ್ಷಣದ ಮಾನ್ಯತೆಗಳು ಸಮಾಜದಲ್ಲಿ ದೊರಕದಿದ್ದರೂ ನಿಧಾನವಾಗಿ ಎರಡನೇ ದರ್ಜೆಯ ಸ್ಥಾನಮಾನಗಳು ದೊರಕಿರುವುದನ್ನು ಗಮನಿಸಬಹುದು. ಮುಂದಿನ ಭಾಗದಲ್ಲಿ ಒಕ್ಕಗಳ ಪುನರುತ್ಥಾನದಲ್ಲಿ ಮತ್ತಷ್ಟು ವಿಚಾರಗಳನ್ನು ಚರ್ಚಿಸಲಾಗುವುದು.

ಹೀಗೆ ವಿವಾಹ ಪದ್ಧತಿ ಕೊಡಗಿನ ಒಕ್ಕಗಳ ಮುಂದುವರಿಕೆಯಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ವಸಾಹತುಪೂರ್ವಕಾಲದಲ್ಲಿ ಯುವ ವಿಧವೆಯರು ಬಹಳಷ್ಟು ಇರುತ್ತಿದ್ದುರಿಂದ ಅಂದಿನ ನಾಡ ಮುಖ್ಯಸ್ಥರು ಮಹಿಳೆಯರಿಗೆ ಸ್ಥಾನ ಮತ್ತು ರಕ್ಷಣೆ ಕಲ್ಪಿಸಲು ಈ ಮೇಲೆ ವಿವರಿಸಿರುವ ವಿವಾಹ ಪದ್ಧತಿಗಳು ಪೂರಕವಾಗಿತ್ತು.

**೨.೩.೬. ಕೃಷಿ ಮತ್ತು ಸಾರ್ವತ್ರಿಕ ಹಬ್ಬಗಳು**

ಕೊಡಗರ ಸಂಸ್ಕೃತಿ ಮತ್ತು ಜೀವನ ಪರಂಪರೆಯಲ್ಲಿ ಕೃಷಿ ಅಥವಾ ಒಕ್ಕಲುತನದ ಪಾತ್ರ ಮಹತ್ವಪೂರ್ಣವಾದುದಾಗಿದೆ. ಕೊಡವರ ಒಕ್ಕಗಳ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಅಂಶಗಳಲ್ಲಿಯೂ ಒಕ್ಕಲುತನದ ಪಾತ್ರವನ್ನು ಗುರುತಿಸಬಹುದು. ಅಷ್ಟರಮಟ್ಟಿಗೆ ಒಕ್ಕಲುತನ ಕೊಡವರ ಬದುಕಿನಲ್ಲಿ ಹಾಸುಹೊಕ್ಕಾಗಿದೆ.

ಆರಂಭದಿಂದಲೂ ಭತ್ತದ ವ್ಯವಸಾಯ ಕೊಡಗಿನ ಮೂಲವೃತ್ತಿಯಾಗಿದೆ. ಇದು ಅಲ್ಲಿನ ಜೀವನ ಮತ್ತು ಸಂಸ್ಕೃತಿಗಳೊಡನೆ ಸಮ್ಮಿಳಿತಗೊಂಡಿದೆ. ಕಾಫಿ, ಏಲಕ್ಕಿ ಮೊದಲಾದುವು ಹೆಚ್ಚು ಲಾಭ ತರುವ ವ್ಯವಸಾಯಗಳಾದರೂ ಕೂಡ ಅವು ತೀರಾ ಇತ್ತೀಚಿನವುಗಳಾಗಿದ್ದು ಅವು ಅಲ್ಲಿನ ಸಮುದಾಯಗಳ ಸಂಸ್ಕೃತಿ ಮತ್ತು ಜೀವನ ಪರಂಪರೆಗಳಲ್ಲಿ ಬೇರು ಬಿಟ್ಟಂತಿಲ್ಲ.

ಕೊಡಗಿನ ಕೃಷಿಪ್ರಧಾನವಾದ ಜೀವನದ ವಿಧಾನದಲ್ಲಿ ಮೂರು ಸಾರ್ವತ್ರಿಕ ಹಬ್ಬಗಳು ಮುಖ್ಯವಾಗುತ್ತದೆ. ಈ ಹಬ್ಬಗಳು ಕೊಡಗಿನ ಸಾಮಾಜಿಕ ಸಂರಚನೆಯನ್ನು ಬೆಸೆಯುವಲ್ಲಿ ಪ್ರಮುಖಪಾತ್ರವಹಿಸುತ್ತಿರುವುದು ಕೂಡ ಮುಖ್ಯವಿಷಯವಾಗಿದೆ. ಕೈಲ್‌ಪೊಳ್ದ್, ಕಾವೇರಿ ಸಂಕ್ರಮಣ ಮತ್ತು ಹುತ್ತರಿ ಹಬ್ಬಗಳು ಮೂರು ಮುಖ್ಯ ಸಾರ್ವತ್ರಿಕ ಹಬ್ಬಗಳಾಗುತ್ತದೆ. ಕೊಡಗಿನಲ್ಲಿ 'ಆದರೆ'[೩೩] ಮತ್ತು 'ಕಕ್ಕಡ'[೩೪] ತಿಂಗಳುಗಳಲ್ಲಿ(ಜೂನ್ ೧೫ ರಿಂದ ಜುಲೈ ೧೫ರವರೆಗೆ 'ಆದರೆ' ತಿಂಗಳು, ಜುಲೈ ೧೬ರಿಂದ ಆಗಸ್ಟ್ ೧೫ರವರೆಗೆ ಕಕ್ಕಡ ತಿಂಗಳು) ಕೃಷಿ ಚಟುವಟಿಕೆಗಳು ಅಧಿಕವಾಗಿರುತ್ತದೆ. ಭತ್ತದೆ ಬೆಳೆಯು ಪ್ರಧಾನವಾಗಿದ್ದ ಸ್ವಾತಂತ್ರ್ಯಪೂರ್ವ ಕಾಲಗಟ್ಟದಲ್ಲಿ ಈ ಎರಡು ತಿಂಗಳು ನಾಟಿ ಕೆಲಸದ ಪ್ರಕ್ರಿಯೆ ನಡೆಯುತ್ತದೆ. ಭೂಮಿ ಎಂದರೆ ಕೊಡಗು ಭಾಷೆಯಲ್ಲಿ ಗದ್ದೆ, ಭೂಮಿ ಮುಂಗಾರು ಮಳೆಯಿಂದ ಫಲವತ್ತಾದ ಒಡನೆ ಉಳುಮೆ

ಪ್ರಾರಂಭವಾಗುತ್ತದೆ. ಜಾನುವಾರುಗಳನ್ನು ಅತಿಯಾಗಿ ಪ್ರೀತಿಸುವ ಮತ್ತು ಜಾನುವಾರುಗಳು ಒಕ್ಕವ್ಯವಸ್ಥೆಯ ಒಂದು ಪ್ರಧಾನ ಅಂಗವೆಂದು ಪರಿಗಣಿಸುವ ಕೊಡಗಿನ ಸಮಾಜದ ಕೃಷಿ ಕೇಂದ್ರಿತ ಸಮುದಾಯಗಳು, ಕುಶಲಕರ್ಮಿವರ್ಗ ಮತ್ತು ಕಾರ್ಮಿಕ ವರ್ಗ ಜಾನುವಾರುಗಳೊಡನೆ ಭಾವನಾತ್ಮಕ ಸಂಬಂಧ ಹೊಂದಿದ್ದರು. ಜಾನುವಾರುಗಳನ್ನು ಉಳುಮೆ ಮಾಡಲು, ಸಗಣಿ ಗೊಬ್ಬರ ತಯಾರಿಸಲು ಮತ್ತು ಹಾಲು ಉತ್ಪಾನೆಯ ಕಾರಣಗೋಷ್ಕರ ಸಾಕುತ್ತಿದ್ದರು ತಮ್ಮ ಜಮೀನುಗಳಲ್ಲಿ ಉಳುಮೆ ಮಾಡಲು ಕೃಷಿ ಕೇಂದ್ರಿತ ಸಮುದಾಯಗಳು ಕೃಷಿ ಕಾರ್ಮಿಕ ಸಮುದಾಯವನ್ನು ಅವಲಂಭಿಸಿತ್ತು. ಮುಖ್ಯವಾಗಿ ಭೂಮಿ ಜಮ್ಮ ಜಮ್ಮದಾಳುಗಳು (ಶ್ರೀನಿವಾಸ:೧೯೫೨:೨೦-೨೧) (ತಂಬಂಡ :೨೦೦೦:೪೫) ಭೂಮಿಯೊಡನೆ ಭಾವನಾತ್ಮಕ ಸಂಬಂಧವನ್ನು ಹೊಂಧಿತ್ತು. ಕುಶಲಕರ್ಮಿ ಸುಮುದಾಯಗಳೂ ಕೂಡ ಭೂಮಿ-ಉಳುವರಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿತ್ತು. ಹಾಗಾಗಿ ಆದರೆ ಮತ್ತು ಕಕ್ಕಡ ತಿಂಗಳುಗಳಲ್ಲಿ ಬೇಟೆ ನಿಷಿದ್ದವಾಗಿತ್ತು. ನಾಟಿ ಕೆಲಸ ಮುಗಿದು ಉಳುಮೆ ಮಾಡಿದ ಜಾನುವಾರುಗಳಿಗೆ ಎಣ್ಣೆಸ್ನಾನ ಮಾಡಿಸಿದ ಮೇಲೆ ನಿಗದಿತ ದಿನಾಂಕದಂದು ಬೇಟೆಗೆ ಹೋಗುವುದಿತ್ತು. ಬೇಟೆಯಲ್ಲಿ ಸಿಕ್ಕ ಪ್ರಾಣಿಗಳ ಮಾಂಸಗಳು ಮತ್ತು ಸಾಕು ಪ್ರಾಣಿಗಳ ಮಾಂಸಗಳನ್ನು ಬಳಸಿ ಕೈಲ್ ಮೂಹೂರ್ತ ಹಬ್ಬ ಮಾಡುತ್ತಿದ್ದರು. ಹಬ್ಬದಡುಗೆಯಲ್ಲಿ ಮಾಂಸದೂಟವೇ ಪ್ರಧಾನ. ಕೊಡಗಿನ ಎಲ್ಲ ಸಮುದಾಯಗಳೂ ತಮ್ಮ ಕೋವಿ, ಕತ್ತಿ ಮೊದಲಾದ ಆಯುಧಗಳಿಗೆ ಪೂಜೆಮಾಡಿ ತಮ್ಮ ಒಕ್ಕದ ಸದಸ್ಯರು, ಒಕ್ಕದ ಕೃಷಿಕಾರ್ಮಿಕ ಸಮುದಾಯಗಳು ಮತ್ತು ಸಹವರ್ತಿಗಳಾದ ಕುಶಲಕರ್ಮಿ ಸಮುದಾಯಗಳ ಒಕ್ಕದೊಡನೆ ಊಟಮಾಡಿ ಹಬ್ಬ ಆಚರಿಸುತ್ತಿದ್ದರು.

ಅಕ್ಟೋಬರ್‌ನಲ್ಲಿ ಕಾವೇರಿಸಂಕ್ರಮಣ ಅಥವಾ ಕಾವೇರಿ ಜಾತ್ರೆ ಇರುತ್ತದೆ. ಇದು ಹೆಚ್ಚಾಗಿ ಕೊಡಗರ ಸ್ಥಳೀಯ ಸಂಸ್ಕೃತಿಗೆ ಹೋಲುವುದಿಲ್ಲ. ಮಡಿಯಿಂದ (ಶುದ್ಧ) ತೀರ್ಥೋದ್ಭವ ದಿವಸ ಮಹಿಳೆಯರು ಕಣಿ[೨೫] ಪೂಜುತಾರೆ(ಕಣಿ ಎಂದರೆ ಕಾವೇರಿ ಮಾತೆಯ ಪ್ರತೀಕವಾದ ಕಳಸವನ್ನು ಪೂಜಿಸುವುದು). 'ಬೊತ್ತ್'ನ್ನು (ಬೊತ್ತ್ ಎಂದರೆ ಒಂದು ನಾಲ್ಕು ಅಡಿ ಉದ್ದದ ದೊಣ್ಣೆಗೆ ಒಂದು ಜಾತಿಯ ಬಳ್ಳಿಯನ್ನು ಎಲೆ ಸಮೇತವಾಗಿ ಸುತ್ತಿ ಪ್ರತೀ ಗದ್ದೆಗಳಲ್ಲಿ ನೆಡುವುದು) ಗದ್ದೆಗಳು, ಭಾವಿ, ಕಣಜ, ಐನ್‌ಮನೆ, ಕೈಮಡಗಳು ಮೊದಲಾದ ಕಡೆ ನೆಡುತ್ತಾರೆ. ಮುಖ್ಯವಾಗಿ ಈ ಹಬ್ಬವು ವೈದಿಕ ಸಂಸ್ಕೃತಿಯದಾಗಿರುತ್ತದೆ. ಆದರೂ ಕೂಡ ಕೊಡಗಿನಾದ್ಯಂತ ಎಲ್ಲ ಸಮುದಾಯದವರೂ ಈ ಹಬ್ಬವನ್ನು ಆಚರಿಸುತ್ತಾರೆ.

ಇನ್ನು ಹುತ್ತರಿ ಹಬ್ಬವು ಕೊಡಗುಮಾತ್ರವಲ್ಲ ದಕ್ಷಿಣಕನ್ನಡದ ಬಂಟ್ವಾಳದವರೆಗೂ ಆಚರಿಸುತ್ತಾರೆ. ಭತ್ತದೆ ಬೆಳೆಯು ಕುಯ್ಲಿಗೆ ಬಂದಾಗ ಒಕ್ಕದವರೆಲ್ಲ ಸೇರಿ ಗದ್ದೆಗೆ ಶುಭಮೂಹೂರ್ತದಲ್ಲಿ ಹೋಗಿ ಕದಿರು[೨೬] ತೆಗೆಯುತ್ತಾರೆ. ಐನ್‌ಮನೆಯಲ್ಲಿ ಒಕ್ಕ ಸದಸ್ಯರೆಲ್ಲರೂ ಸೇರಿ ಹೊಸ ಅಕ್ಕಿಯ ಪಾಯಸ ಮತ್ತು ಇತರ ಭೋಜ್ಯ ಖಾದ್ಯಗಳನ್ನು ಮಾಡುತ್ತಾರೆ. ಕೃಷಿಕೇಂದ್ರಿತ ಸಮುದಾಯದವರು

ಕೃಷಿಕಾರ್ಮಿಕರು ಮತ್ತು ಕುಶಲಕರ್ಮಿ ಸಮುದಾಯದವರೆಲ್ಲರೂ ಸಂಭ್ರಮದಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬ ಆದ ಮೇಲೆ ಒಂದು ವಾರದವರೆಗೆ ಊರ್‌ಮಂದ್, ನಾಡ್‌ಮಂದ್‌ಗಳಲ್ಲಿ ಹುತ್ತರಿ ಕೋಲಾಟ ಹಾಗೂ ಊರಿನ ಪ್ರತೀ ಒಕ್ಕದ ಮನೆಗಳಿಗೆ ಊರ ಸದಸ್ಯರು ಹೋಗಿ ಹುತ್ತರಿ ಹಾಡುಗಳನ್ನು ಹಾಡಿ ಬರುತ್ತಿದ್ದುದು ಕೆಲವು ದಶಕಗಳ ಹಿಂದೆ ವಾಡಿಕೆಯಾಗಿತ್ತು. ಕಳೆದ ೩ ದಶಕಗಳಿಂದ ಈ ಸಂಪ್ರದಾಯಗಳು ಸ್ಥಗಿತಗೊಂಡಿದ್ದವು. ಕಳೆದ ಎರಡು ವರ್ಷಗಳಿಂದ ಕೊಡಗಿನಾದ್ಯಂತ ಅನೇಕ ಕಡೆ ಮತ್ತೆ ಮಂದ್‌ಮಾನಿಗಳ ಚಟುವಟಿಕೆಗಳು ಪ್ರಾರಂಭವಾಗಿದೆ ಎನ್ನುವುದು ಜಾಗತೀಕರಣದ ಫಲ ಎನ್ನಬಹುದು.

ಈ ಎಲ್ಲ ಮೂರು ಹಬ್ಬಗಳೂ ಒಂದು ಕಾಲಕ್ಕೆ ಕೃಷಿ ಪ್ರಧಾನ ಹಬ್ಬಗಳಾಗಿದ್ದು, ಭತ್ತದ ಬೆಳೆಯ ಜೊತೆಗೆ ನೇರ ಸಂಬಂಧ ಹೊಂದಿತ್ತು. ಸಾಮಾಜಿಕ ನೆಲೆಯಲ್ಲಿ ಸಾಮರಸ್ಯ ಬೆರೆಯುವಲ್ಲಿ ಸಾಕಷ್ಟು ಪಾತ್ರವಹುಸಿತ್ತು. ಎಂಬತ್ತರ ದಶಕದ ನಂತರ ಕಾಫಿಬೆಳೆಗೆ ಪ್ರಾಧಾನ್ಯತೆ ಸಿಕ್ಕಿದ ಫಲವಾಗಿ ಭತ್ತದ ಬೆಳೆ ಹಾಗೂ ಜಾನುವಾರುಗಳ ಸಾಕಣೆಯು ಮೂಲೆ ಗುಂಪಾಯಿತು. ಇದರೊಂದಿಗೆ ಭತ್ತ ಮತ್ತು ಅದರೊಡನೆ ಬೆಳವಣಿಗೆಯಾದ ಕೊಡಗಿನ ಸಂಸ್ಕೃತಿ, ಕಾಫಿ ಬೆಳೆಯ ಪ್ರಾಧಾನ್ಯತೆಯಿಂದ ಸಾಮಾಜಿಕ ಸಂದರ್ಭದಲ್ಲಿ ಅರ್ಥ ಕಳೆದುಕೊಂಡಂತಾಗಿದೆ. ನಾಲ್ಕನೆ ಅಧ್ಯಾಯವಾದ ನಾಡು ನುಡಿಯ ಅಭಿವ್ಯಕ್ತಿಯಾಗಿ ಒಕ್ಕದಲ್ಲಿ ಈ ವಿಷಯಗಳ ಬಗ್ಗೆ ಮತ್ತಷ್ಟು ವಿವರಗಳನ್ನು ಚರ್ಚೆಗೊಳಪಡಿಸಲಾಗಿದೆ.

ಭತ್ತ ಕೊಡಗಿನ ಸಾಮಾಜಿಕ ವ್ಯವಸ್ಥೆಯ ಪ್ರಧಾನಶಕ್ತಿಯಾಗಿತ್ತೇ ವಿನಾಃ ಆರ್ಥಿಕ ಸುಧಾರಣೆಯ ದೃಷ್ಟಿಯಿಂದ ಅದರ ಪಾತ್ರ ಅಷ್ಟಕಷ್ಟೆ. ಫೌಲರ್ ಎಂಬ ಯುರೋಪಿನವರು ಮರ್ಕರ ಎಸ್ಟೇಟನ್ನು ೧೮೫೪ರಲ್ಲಿ ಆರಂಭಿಸುವ ಮೂಲಕ ಮೊಟ್ಟಮೊದಲ ಬಾರಿಗೆ ಕೊಡಗಿನಲ್ಲಿ ಕಾಫಿ ಪ್ಲಾಂಟೇಷನ್‌ಗೆ ಚಾಲನೆ ಕೊಟ್ಟರು(ರಿಕ್ಟರ್, ೨೦೧೪(೧೮೭೦):೯೫). ಅದಕ್ಕೂ ಮೊದಲು ಕಾಫಿಬೆಳೆಯನ್ನು ಕೊಡಗಿನ ನಾಲ್ಕುನಾಡು ಪ್ರದೇಶದಲ್ಲಿ ಬೆಳೆಯಲಾಗುತ್ತಿತ್ತು ಎಂಬುದು ಗಮನಾರ್ಹ. ಮಾಪಿಳ್ಳೆ ಕುಟುಂಬವೊಂದು ನಾಲ್ಕುನಾಡಿನಲ್ಲಿ ೧೮೫೪ರ ಪೂರ್ವದಲ್ಲಿಯೇ ಕಾಫಿ ಬೆಳೆಯುತ್ತಿದ್ದರೆಂಬುದನ್ನು ರಾಬರ್ಟ್ ಇಲಿಯಟ್ ತಮ್ಮ ಕೃತಿಯಲ್ಲಿ ದಾಖಲಿಸುತ್ತಾರೆ(ಇಲಿಯಟ್, ೧೮೯೮: ೨೭೭). ಐವರ್‌ಬುಲ್ ಎಂಬವರು, ಕನ್ಸಾಲಿಡೇಟೆಡ್ ಕಾಫಿ ಎಸ್ಟೇಟ್ಸ್ ಲಿಮಿಟೆಡ್' ಎಂಬ ಸಂಸ್ಥೆಯನ್ನು ಪ್ರಾರಂಭಿಸುವ ಮೂಲಕ 'ಪಾದರ್ ಆಫ್ ದಿ ಇಂಡಿಯನ್ ಕಾಫಿ ಇಂಡಸ್ಟ್ರಿ' ಎನ್ನುವ ಹೆಗ್ಗಳಿಕೆಗೆ ಪಾತ್ರರಾದರು(ಬೋಪಣ್ಣ ೨೦೧೧:೧).

ಮುಂದೆ ಬ್ರಿಟಿಷರು ಕೊಡಗಿನೆಡೆಗೆ ಮುಖ ಮಾಡಿದಾಗ ೧೩೦ ಯುರೋಪಿಯನ್ನರ ಕಾಫಿ ಎಸ್ಟೇಟ್‌ಗಳಿದ್ದವು. ಈ ಎಸ್ಟೇಟ್‌ಗಳು ಸುಮಾರು ೩೨,೩೨೩ ಎಕರೆಗಳಷ್ಟು ವಿಸ್ತೀರ್ಣ ಹೊಂದಿದ್ದವು. ಇದೇ ಸಂದರ್ಭದಲ್ಲಿ ೬,೨೦೭ಕ್ಕೂ ಹೆಚ್ಚು ಕೊಡಗು ಮೂಲದ ಕೃಷಿಕರು ೭೦, ೬೭೯ ಎಕರೆ ಭೂ ವಿಸ್ತೀರ್ಣದಲ್ಲಿ ಕಾಫಿತೋಟ ಮಾಡಿದ್ದರು. ಈ ವೇಳೆಗಾಗಲೇ ಸುಮಾರು

೪೦೦೦-೫೦೦೦ ಟನ್‌ಗಳಷ್ಟು ಕಾಫಿಯನ್ನು ಬೆಳೆಯಲಾಗುತ್ತಿತ್ತು(ಇಲಿಯಟ್, ೧೮೭೮: ೨೭೯). ಇದು ೧೯ನೆಯ ಶತಮಾನದ ಕೊನೆಗಾಲದಲ್ಲಿದ್ದ ಕಾಫಿ ಬೆಳೆಯ ತೀವ್ರ ಪ್ರಗತಿಯನ್ನು ಸ್ಪಷ್ಟಪಡಿಸುತ್ತದೆ. ಅಲ್ಲದೆ ಇದರಿಂದ ವಾಣಿಜ್ಯ ಬೆಳೆಗಳ ಮಹತ್ವವನ್ನು ಕೊಡಗಿನ ಜನ ಅರ್ಥ ಮಾಡಿಕೊಳ್ಳುವಲ್ಲಿ ಯಶಸ್ವಿಯಾದರು ಎಂಬುದು ಅರಿವಿಗೆ ಬರುತ್ತದೆ. ಕೊಡಗಿನ ಕೃಷಿ ಕ್ಷೇತ್ರದೊಳಗೆ ಕಾಫಿ ಇಳಿದುದೇ ತಡ ಇದರ ಜೊತೆ ಜೊತೆಗೆ ಏಲಕ್ಕಿ, ಕಿತ್ತಳೆ, ಅಡಿಕೆ, ಕರಿಮೆಣಸು ಮೊದಲಾದ ವಾಣಿಜ್ಯ ಬೆಳೆಗಳೂ ಬೆರೆತುಹೋದವು. ಇದು ಕೊಡಗಿನ ಜನರ ಆರ್ಥಿಕ ಸ್ಥಿತಿ ಸುಧಾರಿಸಲು ನೆರವಾಯಿತು.

**೨.೩.೭. ಧಾರ್ಮಿಕ ಆಚರಣೆಗಳು ಮತ್ತು ಒಕ್ಕ**

ಕೊಡಗಿನ ಪರಿಸರದಲ್ಲಿನ ಧಾರ್ಮಿಕ ಆಚರಣೆಗಳನ್ನು ಸಾಮಾನ್ಯವಾಗಿ ಎರಡು ಪ್ರಕಾರಗಳಾಗಿ ವರ್ಗೀಕರಿಸಿಕೊಳ್ಳಬಹುದು. ಒಂದು: ಸ್ಥಳೀಯ ದೈವಿಕ ಆಚರಣೆಗಳು, ಎರಡು: ಸಾರ್ವತ್ರಿಕ ದೈವಿಕ ಆಚರಣೆಗಳು.

**ಸ್ಥಳೀಯ ದೈವಿಕ ಆಚರಣೆಗಳು**

ಕೊಡಗಿನ ಪ್ರತೀ ಒಕ್ಕಗಳನ್ನು ಕಾಯಲು ಕುಳಿಯ, ನಾಥ, ಚಾಮುಂಡಿ, ಅಯ್ಯಪ್ಪ, ಕಾವಲ ಮೊದಲಾದ ದೇವರುಗಳ ನೆಲೆಗಳಿವೆ. ಒಕ್ಕಗಳ ದನಕರುಗಳಿಗೆ, ಬಿತ್ತು-ಬೆಳೆಗಳಿಗೆ, ಹಂದಿ ಕೋಳಿಗಳಿಗೆ(ಸಾಕುಪ್ರಾಣಿಗಳು) ಮತ್ತು ಒಕ್ಕದ ಪ್ರತಿಯೊಬ್ಬ ಸದಸ್ಯನಿಗೂ ಸುಖವನ್ನು ಕೊಡುವಂತೆ ಹಾಗೂ ರಕ್ಷಣೆ ಕೊಡುವ ಕೆಲಸವನ್ನು ಈ ದೇವರುಗಳು ಮಾಡುತ್ತಾರೆಂಬುದು ಕೊಡಗರ ನಂಬಿಕೆ. ಈ ದೇವರುಗಳಿಗೆ ಅನಾದಿಕಾಲದಿಂದಲೂ ಪ್ರಾಣಿಬಲಿ ಕೊಡುವ ರೂಢಿ ಪ್ರಚಲಿತದಲ್ಲಿದೆ. ಪ್ರಾಣಿ ಬಲಿ ತೆರಿಗೆ ರೂಪದಲ್ಲಿ, ಹರಕೆ ರೂಪದಲ್ಲಿಯೂ ಇರುತ್ತದೆ. ಹಂದಿ ಮತ್ತು ಕೋಳಿಗಳ ಬಲಿಗಳನ್ನು ಕೊಡಗಿನ ಪರಿಸರದಲ್ಲಿ ಸಂಬಂಧಪಟ್ಟ ಊರ ದೇವರಿಗೆ ನೀಡುತ್ತಾರೆ. ಊರಿನ ಗಂಡು ಸದಸ್ಯರು ಬಲಿಯ ನಂತರದ ಊರ್‌ಪತ್ತಿ[೩೬] ಅಥವಾ ಭಾರಣೆಯಲ್ಲಿ ಭಾಗವಹಿಸುತ್ತಾರೆ.

**ಕುಳಿಯ**

ಕುಳಿಯ ಎನ್ನುವ ದೈವವನ್ನು ಪ್ರತಿ ಒಕ್ಕದವರು ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ಕನ್ನಡದಲ್ಲಿ ಈ ದೈವಕ್ಕೆ 'ಗುಳಿಗ' ಎಂದು ಕರೆಯುತ್ತಾರೆ. ಹಿಂದೂ ಪುರಾಣದಲ್ಲಿ ಕಂಡುಬರುವ 'ಶನಿ' ಪರಮಾತ್ಮನ ಕಾಲಿನಿಂದ ಚೆಲ್ಲಿದ ರಕ್ತದಿಂದ ಹುಟ್ಟಿದ ಅಂಶವೇ ಈ ಕುಳಿಯ ದೈವ ಎಂಬ ನಂಬಿಕೆ ಇದೆ. 'ಕುಳಿಯ' ದೈವದಲ್ಲಿ ಎರಡು ವಿಧ. ಒಂದು ಭೂಮಿ ಕುಳಿಯ. ಇನ್ನೊಂದು ಕಾಲ ಕುಳಿಯ.

ಒಕ್ಕದ ದನಕರುಗಳು ಮತ್ತು ಹಂದಿ ಕೋಳಿಗಳನ್ನು ದೃಷ್ಟಿ ಇಟ್ಟು ಕಾಪಾಡುವುದು ಈ ದೈವದ ಜವಬ್ದಾರಿ ಎಂಬ ನಂಬಿಕೆ ಇದೆ. ಒಂದು ವರ್ಷಕ್ಕೊಮ್ಮೆ ಈ ಭೂಮಿ ಕುಳಿಯ

ದೈವಕ್ಕೆ ಕೋಳಿ ಬಲಿ ಕೊಟ್ಟು ಸಂತುಷ್ಟಗೊಳಿಸದಿದ್ದರೆ ದನಕರುಗಳು ಮತ್ತು ಹಂದಿಕೋಳಿಗಳಂತಹ ಸಾಕುಪ್ರಾಣಿಗಳ ಆರೋಗ್ಯಕ್ಕೆ ಮತ್ತು ಜೀವಕ್ಕೆ ಕುತ್ತು ಬರುತ್ತದೆ ಎಂಬ ನಂಬಿಕೆ ಇದೆ.

ಹಾಗೆಯೇ 'ಕಾಲಕುಳಿಯ'ನು ಒಕ್ಕದ ಸದಸ್ಯರ ಮರಣ ಸಂದರ್ಭವನ್ನು ನಿರ್ಧರಿಸುತ್ತಾನೆ. ವ್ಯಕ್ತಿಯು ಸತ್ತ ವೇಳೆಯಲ್ಲಿ ಕುಳಿಯನು ಮನೆಯ ಹೊರಗಿನಿಂದ ಒಳಗೆ ನೋಡುತ್ತಾನೋ, ಒಳಗಿನಿಂದ ಹೊರಗೆ ನೋಡುತ್ತಾನೋ ಎನ್ನುವುದನ್ನು ಕಣಿಯನನ್ನು(ಸ್ಥಳೀಯ ಜೋತಿಷಿ) ಕರೆಸಿ ನೋಡಿಸುತ್ತಾರೆ. ಕಾಲಕುಳಿಯನು ಒಳಗಿನಿಂದ ಹೊರಗೆ ನೋಡುತ್ತಿದ್ದರೆ ಸಮಸ್ಯೆಯಿಲ್ಲ. ಹೊರಗಿನಿಂದ ಒಳಗೆ ನೋಡುತ್ತಿದ್ದರೆ ಆ ಸತ್ತಮನೆಗೆ ಒಂದು ವರ್ಷದೊಳಗೆ ತೊಂದರೆಗಳು ಉಂಟಾಗುತ್ತಿರುತ್ತವೆ ಎನ್ನುವ ನಂಬಿಕೆ ಇದೆ. ಹಾಗಾಗಿ ಅದಕ್ಕೆ ತಕ್ಕ ಪರಿಹಾರವನ್ನು ಕಣಿಯರ ಸಲಹೆಯ ಮೇರೆಗೆ ಮಾಡಿ ಒಕ್ಕದ ಹಿತಾಸಕ್ತಿಗಳನ್ನು ಕಾಪಾಡಬೇಕಾಗುತ್ತದೆ.

ಕುಳಿಯ ಚಾಮುಂಡಿ ಮೊದಲಾದ ದೇವರುಗಳು ಸಾಧಾರಣವಾಗಿ ಒಕ್ಕಗಳಿಗೆ ಮಾತ್ರ ಸೀಮಿತವಾಗಿದ್ದು, ಪೂಜಾ ಪ್ರಕ್ರಿಯೆ ಮತ್ತು ಬಲಿಯ ನಂತರ ಒಕ್ಕದ ಗಂಡು ಸದಸ್ಯರೆಲ್ಲ ಸೇರಿ ಒಟ್ಟಿಗೆ ಪತ್ತಿ ಅಥವಾ ಭಕ್ಷಣೆ ಮಾಡುತ್ತಾರೆ. ದೈವದ ಹೆಸರಿನಲ್ಲಿ ಕಾಡಿನ ಒಳಗೆ ಅಥವಾ ರಸ್ತೆ ಬದಿಗಳಲ್ಲಿ ಎಲ್ಲರೂ ಒಟ್ಟಿಗೆ ಸೇರಿ ಮಾಡುವ ಈ ರೀತಿಯ ಭಕ್ಷಣೆಗಳು ಸಾಧಾರಣವಾಗಿ ರುಚಿಕರವಾಗಿದ್ದು ಇತ್ತೀಚೆಗೆ ದೂರದ ಊರುಗಳು ಹಾಗೂ ನಗರಗಳಲ್ಲಿ ನೆಲೆಸಿರುವ ಒಕ್ಕದ ಸದಸ್ಯರೂ ಕೂಡ ಈ ದೈವಿಕ ನೆಲೆಗಳ ಬಲಿ ಪ್ರಕ್ರಿಯೆ ಹಾಗೂ ಪತ್ತಿಗಳಲ್ಲಿ ಭಾಗವಹಿಸಲು ಉತ್ಸಾಹದಿಂದ ಹೋಗುತ್ತಾರೆ. ತಮ್ಮ ರಕ್ತಸಂಬಂಧಿಗಳೊಡನೆ ಸಮಯ ಕಳೆಯುವ ಹಂಬಲ, ಸಂಬಂಧಪಟ್ಟ ದೈವಗಳ ಮೇಲಿರುವ ನಂಬಿಕೆ ಹಾಗೂ ಅಪರೂಪದ ರುಚಿಕರವಾದ ಮಾಂಸದಡುಗೆ ಮೊದಲಾದ ಕಾರಣಗಳಿಂದ ಈ ದೈವಿಕ ನೆಲೆಗಳ ವರ್ಷದ ಪೂಜೆ-ಬಲಿ ಪ್ರಕ್ರಿಯೆಗಳಲ್ಲಿ ಭಾಗವಹಿಸುವವರ ಸಂಖ್ಯೆ ಇತ್ತೀಚೆಗೆ ಅಧಿಕವಾಗಿದೆ. ಒಕ್ಕ ಹಾಗೂ ಊರಿನ ಸದಸ್ಯರ ಒಗ್ಗೂಡುವಿಕೆಗೆ ದೈವಿಕ ನೆಲೆಗಳು ಕೂಡ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಕಾರಣವಾಗಿದೆ ಎಂದರೆ ತಪ್ಪಾಗಲಾರದು.

ಇದಲ್ಲದೆ ಕೊಡಗಿನಲ್ಲಿ ಊರುಹಬ್ಬಗಳು ಮತ್ತು ನಾಡುಹಬ್ಬಗಳನ್ನು ಬೈತೂರು ಮತ್ತು ಪಯ್ಯಾವೂರುಗಳಲ್ಲಿ ಉತ್ಸವಗಳು ಜರುಗಿದ ನಂತರ ಆಚರಿಸಲಾಗುವುದು. ಪ್ರತಿ ಊರುಗಳಲ್ಲಿ ಈಶ್ವರ, ಭದ್ರಕಾಳಿ, ಭಗವತಿ, ಚಾಮುಂಡಿ, ಅಯ್ಯಪ್ಪ ಮೊದಲಾದ ದೇವರುಗಳ ಉತ್ಸವಗಳು ಮಾರ್ಚ್, ಏಪ್ರಿಲ್ ತಿಂಗಳಿನಲ್ಲಿ ನೆರವೇರುತ್ತವೆ. ಊರಿನ ಪ್ರತಿ ಒಕ್ಕವು ಈ ಹಬ್ಬಗಳನ್ನು ಸಂಭ್ರಮದಿಂದ ಮಾತ್ರವಲ್ಲ, ಭಕ್ತಿಯಿಂದ ಆಚರಿಸುತ್ತಾರೆ. ಬೆಳಗ್ಗೆಯಿಂದ ಮಧ್ಯಾಹ್ನದವರೆಗಿನ ಪೂಜೆಗಳು ಸಾತ್ವಿಕ ರೂಪಗಳಾಗಿದ್ದು ಪೂಜೆ ಪುರಸ್ಕಾರಗಳು ದೇವಸ್ಥಾನಗಳಲ್ಲಿ ಬ್ರಾಹ್ಮಣರ ಮೂಲಕ ನೆರವೇರುತ್ತದೆ. ಬೆಳಿಗ್ಗೆ ಎದ್ದು ಸ್ನಾನ ಮಾಡಿ ಮಡಿಯಿಂದ ದೇವಸ್ಥಾನಕ್ಕೆ ಪ್ರತಿಯೊಬ್ಬರೂ ಸೇರಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಮದ್ಯಮಾಂಸಗಳ ಸೇವನೆ ಒಂದು ದಿವಸಕ್ಕೆ ಮುಂಚಿನಿಂದಲೇ

ಇರುವುದಿಲ್ಲ. ಶುದ್ಧಮುದ್ರಿಕೆಯಿಂದ ಇರಬೇಕೆಂಬ ಕಟ್ಟಳೆಯಿದೆ. ಊರಿನ ಜನರು ಬಹುಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಾರೆ. ದೇವಸ್ಥಾನದಲ್ಲಿ ಪಾಯಸ ಮೊದಲಾದ ಸಸ್ಯಾಹಾರಿ ಊಟದ ವ್ಯವಸ್ಥೆ ಇರುತ್ತದೆ. ಊಟದ ನಂತರ ಕೆಲವು ದೇವಸ್ಥಾನಗಳಲ್ಲಿ ತೆರೆ(ಭೂತಾರಾಧನೆ) ನಡೆಯುತ್ತದೆ ಮತ್ತು ಸಂಜೆ ಸಯಮದಲ್ಲಿ ದೇವಸ್ಥಾನದ ಪ್ರಾಂಗಣದ ಹೊರಗಡೆ ಇರುವ ಕಲ್ಲಿಗೆ ಪ್ರಾಣಿಬಲಿ ಕೊಡಲಾಗುತ್ತದೆ(ಈಶ್ವರನ ದೇವಸ್ಥಾನದಲ್ಲಿ ಪ್ರಾಣಿಬಲಿ ಇಲ್ಲ). ಈ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಭಾಗವಹಿಸುವುದಿಲ್ಲ. ಗಂಡಸರು ಮಾತ್ರ ಭಾಗವಹಿಸುತ್ತಾರೆ ಮತ್ತು ರಾತ್ರಿ ಊರುಪತ್ತಿ ಅಥವಾ ಭಾರಣಿ ಇರುತ್ತದೆ.

ನಾಡು ದೇವಸ್ಥಾನಗಳ ಹಬ್ಬದಲ್ಲಿ ಹಲವಾರು ಊರುಗಳನ್ನು ಒಳಗೊಂಡ ನಾಡಿನ ಸಮಸ್ತ ಜನರು ಭಾಗವಿಸುತ್ತಾರೆ. ಈಶ್ವರ, ಶಾಸ್ತಾವು (ಸಾರ್ತಾವು), ಭಗವತಿ, ಮೊದಲಾದ ದೇವರುಗಳ ಉತ್ಸವಗಳು ಹಲವಾರು ಊರು ಅಥವಾ ಒಂದು ನಾಡಿಗೆ ಸಂಬಂಧಿಸಿದುದ್ದಾಗಿರುತ್ತದೆ. ಈ ದೇವರುಗಳು ಸಾತ್ವಿಕ ಸ್ವರೂಪಗಳದ್ದಾಗಿದ್ದು, ಮದ್ಯಮಾಂಸ ನಿಷಿದ್ಧವಾಗುತ್ತದೆ. ತುಂಬ ಸಂಭ್ರಮದಿಂದ ನಡೆಯುವ ಈ ಹಬ್ಬಗಳಲ್ಲಿ ನಾಡುಗಳ ಪ್ರತಿ ಒಕ್ಕಗಳಿಂದ ದೇವಸ್ಥಾನಕ್ಕೆ ತೆರಿಗೆ ಸಲ್ಲುತ್ತದೆ ಹಾಗೂ ಸಾವಿರಾರು ಸಂಖ್ಯೆಯ ಜನರು ಸೇರುತ್ತಾರೆ.

ಅನೇಕ ಊರುಗಳಲ್ಲಿ ಬೋಡು ನಮ್ಮೆ[೭] (ಹಬ್ಬ) ಏಪ್ರಿಲ್-ಮೇ ತಿಂಗಳಿನಲ್ಲಿ ನಡೆಯುತ್ತದೆ. ಈ ಹಬ್ಬಗಳಲ್ಲಿ ಪ್ರತಿ ಒಕ್ಕವು ಆಸಕ್ತಿಯಿಂದ ಭಾಗವಹಿಸುತ್ತದೆ. ಕೊಡಗಿನ ಚೆಂಬೆಬೆಳಿಯೂರಿನ ಬೋಡು ಹಬ್ಬ, ರುದ್ರಗುಪ್ಪೆ ಗ್ರಾಮದ ಪಾರಣಮಾನಿ ಹಬ್ಬ ಮೊದಲಾದವುಗಳು ಇತ್ತೀಚೆಗೆ ಬಹಳ ಸಂಭ್ರಮದಿಂದ ನಡೆಯುತ್ತಿದ್ದು ದೂರದ ಊರುಗಳಿಂದ ಜನರು ಬಂದು ಭಾಗವಹಿಸುತ್ತಾರೆ.

## ೨.೪. ಚಾರಿತ್ರಿಕ ಸ್ಥಿತ್ಯಂತರದ ಘಟ್ಟಗಳಲ್ಲಿ ಒಕ್ಕಗಳು

ಯಾವುದೇ ಒಂದು ಸಮಾಜದ ಮೂಲಘಟಕ ಕುಟುಂಬ. ಕುಟುಂಬದಲ್ಲಿನ ಬದಲಾವಣೆಗಳು ಸಮಾಜದಲ್ಲಿನ ಬದಲಾವಣೆಗಳಿಗೂ ಕಾರಣವಾಗುತ್ತದೆ. ಹೀಗೆ ಸಮಾಜದ ಚಲನಶೀಲತೆಗೆ ಕುಟುಂಬಗಳು ಕಾರಣವಾಗುತ್ತವೆ. ಕೊಡಗಿನ ಸಮಾಜ ಕೂಡ ಚಾರಿತ್ರಿಕ ಕಾಲಘಟ್ಟದಲ್ಲಿ ಈ ರೀತಿಯ ಚಲನಶೀಲತೆಯ ಪ್ರಕ್ರಿಯೆಗೆ ಒಳಗಾಗುತ್ತಾ ಬಂದಿರುವುದನ್ನು ಕಾಣಬಹುದು.

೧೮೩೪ರವರೆಗೆ ಕೊಡಗಿನ ಒಕ್ಕಗಳು ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ತಮ್ಮ ಮಿತಿಗಳೊಳಗೆ ತಮ್ಮನ್ನು ತೊಡಗಿಸಿಕೊಂಡ ರೀತಿಯು ಐತಿಹಾಸಿಕವಾಗಿ ಪ್ರಧಾನವಾದ ವಿಚಾರವಾಗುತ್ತದೆ. ಆ ಕಾಲಘಟ್ಟದಲ್ಲಿ ಸಂಪರ್ಕ ಸಾಧನಗಳು ಹಾಗೂ ಆಧುನಿಕ ವಿದ್ಯಾಭ್ಯಾಸದ ಕಲ್ಪನೆ ಇಲ್ಲದಿರುವುರಿಂದ “ಇಂದ್ರಜಾಲ ಮತ್ತು ಮಹೇಂದ್ರಜಾಲ” ಮೊದಲಾದ ಮೋಡಿವಿದ್ಯೆಯನ್ನು ಕಲಿತ ಕೆಲವೇ ಕೆಲವರನ್ನು ಸಮಾಜದಲ್ಲಿ ಗೌರವದ ದೃಷ್ಟಿಯಿಂದ ಕಾಣಲಾಗುತ್ತಿತ್ತೆಂದು ಇಂದಿಗೂ ಹಿರಿಯರು ನೆನಪಿಸಿಕೊಳ್ಳುತ್ತಾರೆ.[೨೮] ಅಂತಹವರಲ್ಲಿ ಕಲ್ಯಾಟಂಡ ಪೊನ್ನಪ್ಪ, ಅಪ್ಪಚ್ಚಿ ಮಂದಣ್ಣ,

ಮಹಾವೀರ ಅಚ್ಚುನಾಯಕ, ಕಾಪಾಳ ಬೊಳ್ತು, ಪರದಂಡ ಪೊನ್ನಪ್ಪ ಮುಂತಾದ ಮೊದಲ ತಲೆಮಾರಿನ ಪ್ರಭಾವಿ ವ್ಯಕ್ತಿಗಳು ತಮ್ಮ ಮನೆತನಗಳ ಹೆಸರುಗಳ ಕೀರ್ತಿಯನ್ನು ಅಥವಾ ಕೊಡವ ಭಾಷೆಯಲ್ಲಿ ಹೇಳುವುದಾದರೆ 'ಕ್ಥೇಳಿ'(ಪ್ರಸಿದ್ಧಿ, ಜನಪ್ರಿಯತೆ) ಎತ್ತರಕ್ಕೆ ಕೊಂಡೊಯ್ಯುವಲ್ಲಿ ಸಫಲವಾದರು ಎನ್ನುವುದನ್ನು ಐತಿಹಾಸಿವಾಗಿ ಒಕ್ಕಗಳ ವಿಕಾಸವನ್ನು ಅವಲೋಕಿಸಿದಾಗ ತಿಳಿದುಬರುತ್ತದೆ. ಹಾಗೆಯೇ ಈ ಅಂಶ ಬಹಳ ಮಹತ್ವದ್ದು ಕೂಡ ಆಗುತ್ತದೆ. ಏಕೆಂದರೆ ಮುಂದಿನ ಪೀಳಿಗೆಯ ಮುಖಂಡರು ಉನ್ನತ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದು ರಾಜಕೀಯವಾಗಿ ಹಾಗೂ ಸಾಮಾಜಿಕವಾಗಿ ವಿವೇಕಯುತ ದೃಷ್ಟಿಕೋನವುಳ್ಳವರಾಗಿದ್ದರು. ಅಂತಹವರಲ್ಲಿ ಅಪ್ಪಾರಂಡ ಬೋಪು ದಿವಾನ, ಚೌರೀರ ಪೊನ್ನಪ್ಪ, ಬಿದ್ದಂಡ ಬೋಪು, ಚಪ್ಪುಡಿ ಪೊನ್ನಪ್ಪ ಮೊದಲಾದ ಮುಖಂಡರು ಪ್ರಮುಖರು. ಇವರೆಲ್ಲರೂ ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಪ್ರಬಲರಾದುದರಿಂದ ಅವರ ಒಕ್ಕವು ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಕೂಡ ಪ್ರಾಬಲ್ಯವನ್ನು ಕಂಡಿತು. ಹೀಗಾಗಿ ಇಂತಹ ಕೆಲವು ಒಕ್ಕಗಳು 'ಕ್ಥೇಳಿಪಟ್ಟ' ಒಕ್ಕಗಳು ಅಥವಾ ಕೀರ್ತವಂತ ಒಕ್ಕಗಳಾಗಿ ಕಾಣಿಸತೊಡಗಿದವು. ಕೊಡಗಿನ ಪ್ರಬಲ ಸಮುದಾಯದಲ್ಲಿ ಈ ಸಂದರ್ಭದಲ್ಲಿಯೇ ಮೊದಲ ಬಾರಿಗೆ ಐಡಿಯಾಲಾಜಿಕ್ ಆದ ಅಂತರವೇರ್ಪಟ್ಟಿತು ಎನ್ನಬಹುದು. ಏಕೆಂದರೆ ಈ ಎಲ್ಲ ಪ್ರಬಲ ಒಕ್ಕಗಳು ತಮ್ಮದೇ ಸಮುದಾಯದ ಪ್ರಬಲರಲ್ಲದ, ನಿಶ್ಶಕ್ತರಾದ ಒಕ್ಕಗಳೊಡನೆ ಸಂಬಂಧವನ್ನು ಇಟ್ಟುಕೊಳ್ಳಲು ಇಷ್ಟಪಡಲಿಲ್ಲ. ತಮ್ಮ ಪ್ರಾಬಲ್ಯ ಮತ್ತು ಅಂತಸ್ತನ್ನು ಕಾಯ್ದುಕೊಳ್ಳಲು ತಮ್ಮ ಅಂತಸ್ತುಗಳಿಗೆ ಸಮಾನವಾದ ಸ್ಥಾನಮಾನ ಹೊಂದಿರುವ ಕುಟುಂಬದೊಂದಿಗೆ ವೈವಾಹಿಕ ಸಂಬಂಧ ಹಾಗೂ ಇತರ ಸಂಬಂಧಗಳನ್ನು ಸಾಧಿಸುವ ಪ್ರಯತ್ನ ನಡೆಯಿತು. ಇದಕ್ಕೆ ಪೂರಕವಾಗಿ ಇಂಗ್ಲಿಷ್ ವಿದ್ಯಾಭ್ಯಾಸ ಈ ಮೇಲ್ವರ್ಗದ ಒಕ್ಕಗಳಿಗೆ ಲಭಿಸಿದುದರಿಂದ ತಮ್ಮ ಸಂಸ್ಕೃತಿಗೆ ಔನ್ನತ್ಯದ ಒಂದು ಛಾಪು ಕೊಟ್ಟು ಉಳಿದ ಒಕ್ಕಗಳಿಂದ ತಾವು ಭಿನ್ನ ಹಾಗೂ ಉನ್ನತರು ಎನ್ನುವ ಅಭಿಪ್ರಾಯ ಸೃಷ್ಟಿಯಾಗುವಂತೆ ಮಾಡಿದುದು, ಸಾಮಾಜಿಕವಾಗಿ ಕೊಡಗಿನಲ್ಲಿ ಒಂದು ಸ್ಥಿತ್ಯಂತರ ಉಂಟಾಗಲು ಕಾರಣವಾಯಿತು.

ಮುಂದಿನ ತಲೆಮಾರಿನಲ್ಲಿ ೨೦ನೆಯ ಶತಮಾನದ ವಸಾಹತು ಕಾಲಘಟ್ಟದ ಅನೇಕ ನಾಯಕರು ಅಥವಾ ಮಾದರಿ ವ್ಯಕ್ತಿತ್ವದವರು ಮಧ್ಯಮವರ್ಗದ ಒಕ್ಕದವರಾಗಿದ್ದು, ಇವರು ಆದರ್ಶವಾದಿಗಳಾಗಿದ್ದರು. ೧೮೩೪ರ ನಂತರ ಕೊಡಗಿನಲ್ಲಿ ಅಧಿಕಾರ ನಡೆಸುತ್ತಿದ್ದ ಬ್ರಿಟಿಷ್ ಆಡಳಿತದಲ್ಲಿ ಮುಖ್ಯಪಾತ್ರ ವಹಿಸಿ ಉನ್ನತ ಹುದ್ದೆಗಳಲ್ಲಿ ಇವರು ಬಹಳ ಎತ್ತರಕ್ಕೆ ಏರಿದರು. ಅವರಲ್ಲಿ ರಾವ್ ಬಹದ್ದೂರ್ ಕೋಡಿರ ಉತ್ತಪ್ಪ, ರಾವ್ ಬಹದ್ದೂರ್ ಕೇಟೋಳಿರ ಚಂಗಪ್ಪ, ರಾವ್ ಬಹದ್ದೂರ್ ಪಟ್ಟಡ ಉತ್ತಪ್ಪ, ರಾವ್‌ಬಹದ್ದೂರ್ ಮಂಡೇಪಂಡ ಮಂದಣ್ಣ, ಫೀಲ್ಡ್ ಮಾರ್ಷಲ್ ಕೊಡಂದೆರ ಕಾರ್ಯಪ್ಪ, ಜನರಲ್ ಕೊಡಂದೆರ ತಿಮ್ಮಯ್ಯ, ಜನರಲ್ ಅಪ್ಪಾರಂಡ ಅಯ್ಯಪ್ಪ ಇವರು ಮೇಲ್ವರ್ಗದ ಆದರ್ಶಗಳನ್ನು ಹೊತ್ತು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಎತ್ತರಕ್ಕೆ

ಏರುವುದು ಮಾತ್ರವಲ್ಲದೆ ತಮ್ಮ ತಮ್ಮ ಒಕ್ಕಗಳು ಕೊಡಗಿನ ಸಂದರ್ಭದಲ್ಲಿ ಉನ್ನತಿಯನ್ನು ಸಾಧಿಸುವುದರಲ್ಲಿಯೂ ನೆರವಾದರು. ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ಕೊಡಗಿನಲ್ಲಿ ಇಂಗ್ಲಿಷ್ ಮಾದರಿಯ ಶಿಕ್ಷಣ ಪಡೆದ ಮಧ್ಯಮವರ್ಗದ ಗುಂಪೊಂದು ಮೇಲ್ವರ್ಗವಾಗಿ ರೂಪುಗೊಂಡಿತು.

ಆ ಕಾಲಘಟ್ಟದ ಮೇಲ್ವರ್ಗದ ಆದರ್ಶಗಳನ್ನು ಹೊತ್ತ ಈ ಎಲ್ಲ ಪ್ರಮುಖ ವ್ಯಕ್ತಿತ್ವಗಳಿಗೂ ತಮ್ಮ ತಮ್ಮ ಐಡೆಂಟಿಟಿಗಳನ್ನು ಮೆರೆಯುವುದು ಅನಿವಾರ್ಯವಾಗಿರಲಿಲ್ಲ. ಆದರೆ ಅವರ ಒಕ್ಕಗಳಿಗೆ ಅವರೊಂದು ಹೆಮ್ಮೆಯ ಸಂಕೇತವಾಗಿದ್ದರು. ಕೆಲವು ಒಕ್ಕಗಳ ಪ್ರಾಬಲ್ಯ ಪ್ರಾರಂಭ ಆಗಿರುವುದೇ ಒಕ್ಕದ ಒಬ್ಬರು ಇಬ್ಬರು ಆದರ್ಶಪ್ರಾಯ ವ್ಯಕ್ತಿತ್ವಗಳ ಸಾಧನೆಯಿಂದ. ಲಿಂಗಾಯತ ಅರಸರ ಕಾಲದಲ್ಲಿ ಕೆಲವು ಒಕ್ಕಗಳಲ್ಲಿನ ಕೆಲವು ವ್ಯಕ್ತಿತ್ವಗಳು ತಮ್ಮ ಒಕ್ಕದ ಪ್ರತಿಷ್ಠೆಯನ್ನು ಮೇಲಕ್ಕೆತ್ತಿದ್ದರೆ, ಬ್ರಿಟಿಷರ ಆಡಳಿತಾವಧಿಯಲ್ಲಿ ಇನ್ನೂ ಕೆಲವು ಒಕ್ಕಗಳು ಪ್ರಾಬಲ್ಯವನ್ನು ಸಾಧಿಸಿದವು. ಆದರೆ ಅನೇಕ ಒಕ್ಕಗಳು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಔಪಚಾರಿಕ ಶಿಕ್ಷಣದ ಪರಿಣಾಮವಾಗಿ ತಮ್ಮ ತಮ್ಮ ಒಕ್ಕಗಳಿಗೆ ಶಕ್ತಿಯನ್ನು ತುಂಬಿದವು. ಅನೇಕ ಪ್ರತಿಷ್ಠಿತ ಒಕ್ಕಗಳು ಎಂದು ಕರೆಸಿಕೊಳ್ಳುವ ಮನೆತನಗಳಲ್ಲಿ ಎಲ್ಲರೂ ಸಾಧಿಸಿದವರಲ್ಲ. ಆದರೆ ಕೆಲವೇ ವ್ಯಕ್ತಿಗಳ ಸಾಧನೆಗಳು ಅಂತಹ ಒಕ್ಕಗಳಿಗೆ ವರಗಳಾಗಿ ಮಾರ್ಪಾಡಾದವು.

ಈ ಮೇಲಿನ ಎಲ್ಲಾ ಕಾಲಘಟ್ಟಗಳಲ್ಲಿ ಒಂದು ಅಂಶವನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು. ಮೇಲ್ವರ್ಗ, ಮಧ್ಯಮವರ್ಗ, ಕೆಳಮಧ್ಯಮವರ್ಗದ ಅನೇಕರು ಆಧುನೀಕರಣದ ಪರಿಣಾಮವಾಗಿ ಹಲವಾರು ಕ್ಷೇತ್ರಗಳಲ್ಲಿ ಸಾಧನೆಯನ್ನು ಮಾಡಿದರೆ ಇವೆಲ್ಲದರಿಂದ ವಂಚಿತರಾಗಿ ಉಳಿದು ಬಿಡುವ ಒಂದು ವರ್ಗದ ಜನರನ್ನು ಕೊಡಗಿನ ಎಲ್ಲ ಸಮುದಾಯಗಳಲ್ಲೂ ಕಾಣಬಹುದು. ಇವತ್ತಿಗೂ ಅಲ್ಪಸ್ವಲ್ಪ ಆರ್ಥಿಕ ಸ್ಥಿತಿಯಲ್ಲಿ ಸುಧಾರಣೆಯಾಗಿದ್ದರೂ, ಕೊಡಗಿನ ಪಾರಂಪರಿಕ ಆಚಾರ ವಿಚಾರಗಳನ್ನು ಕಾಯ್ದುಕೊಂಡು ಬಂದಿರುವ ವರ್ಗ ಇದು. ಕೊಡವರಿರಬಹುದು ಅಥವಾ ಉಳಿದ ಎಲ್ಲಾ ಸ್ಥಳೀಯ ಸಮುದಾಯಗಳಿರಬಹುದು ಕೊಡಗಿನ ಸಂಸ್ಕೃತಿಯನ್ನು ತಮ್ಮದಾಗಿಸಿ ಉಳಿಸಿಕೊಂಡಿರುವ ವರ್ಗ ಎಂದರೆ ಈ ತಳವರ್ಗವೇ ಎನ್ನುವುದರಲ್ಲಿ ಸಂಶಯವಿಲ್ಲ.

ಈ ಹಿನ್ನೆಲೆಯಲ್ಲಿ ಕೊಡಗಿನ ಒಕ್ಕಗಳ ಚಾರಿತ್ರಿಕ ಸ್ಥಿತ್ಯಂತರಗಳನ್ನು ಗಮನಿಸುವಾಗ ಎರಡು ಕಾಲಘಟ್ಟಗಳಾಗಿ ವಿಂಗಡಿಸಿಕೊಂಡು ಅವಲೋಕಿಸುವುದು ಸೂಕ್ತವಾಗಿದೆ. ೧. ಸ್ವಾತಂತ್ರ್ಯ ಪೂರ್ವದ ಕಾಲಘಟ್ಟ ೨. ಸ್ವಾತಂತ್ರ್ಯ ನಂತರದ ಕಾಲಘಟ್ಟ. ಈ ವರ್ಗೀಕರಣದ ಹಿನ್ನೆಲೆಯಲ್ಲಿ ಒಕ್ಕಗಳಲ್ಲಾದ ಬದಲಾವಣೆಯನ್ನು ಗಮನಿಸಬಹುದು.

ಸ್ವಾತಂತ್ರ್ಯಪೂರ್ವದ ಕಾಲಘಟ್ಟದ ಆರಂಭವನ್ನು ಹದಿನೇಳನೆಯ ಶತಮಾನದಿಂದ ಪರಿಗಣಿಸಲಾಗುವುದು. ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿ ಕೊಡಗಿನ ಸಾಮಾಜಿಕ ನೆಲೆಗಟ್ಟಿನಲ್ಲಿ ಎರಡು ತೀವ್ರ ಬದಲಾವಣೆಗಳು ಘಟಿಸಿದವು.

ಆರಂಭದಲ್ಲಿ ಉಚ್ಚಸ್ಥಿತಿಯಲ್ಲಿದ್ದ ಕೊಡಗಿನ ಕೆಲವು ಒಕ್ಕಗಳು ವಿಘಟನೆಗೊಂಡು ರಕ್ತಸಂಬಂಧಿಗಳಾಗಿದ್ದ ಒಂದೇ ಮೂಲದ ಕುಟುಂಬಗಳು ಒಂದೇ ಮನೆಪೆದ(ನಾಮ)ದಿಂದ ಪ್ರತ್ಯೇಕವಾಗಿ ರಚನೆಗೊಂಡವು. ಈ ಪ್ರಕ್ರಿಯೆಯಿಂದ ರಕ್ತಸಂಬಂಧಿಗಳಾಗಿದ್ದರೂ, ಯಾವುದೇ ರೀತಿಯ ಸಂಬಂಧವನ್ನು ಮುಂದುವರಿಸಬಯಸಲಿಲ್ಲ. ಉದಾಹರಣೆಗೆ ಕೊಳುವಂಡ, ಕುಟ್ಟಂಜೆಟ್ಟಿರ, ನಡಿಕೇರಿಯಂಡ ಮೊದಲಾದ ಮನೆತನಗಳು ವಿಭಜನೆಗೊಂಡದ್ದನ್ನು ಗಮನಿಸಬಹುದು. ಉದಾಹರಣೆಗೆ ಸುಮಾರು ೨೦೦ ವರ್ಷಗಳ ಹಿಂದೆ ಅಂದರೆ ಸುಮಾರು ಎಂಟು ತಲೆಮಾರಿನ ಹಿಂದೆ ನಡಿಕೇರಿಯಂಡ ಕುಟುಂಬವು (ಒಕ್ಕ) ಇಬ್ಭಾಗವಾಯಿತು. ಈ ಒಕ್ಕದ ಒಂದು ಭಾಗವು ಕರಡ ಗ್ರಾಮದಲ್ಲಿಯೂ, ಇನ್ನೊಂದು ಭಾಗವು ಪಾಲಂಗಾಲ ಗ್ರಾಮದಲ್ಲಿಯೂ ನೆಲೆಸಿದೆ. ಸುಮಾರು ಐದು ತಲೆಮಾರಿನ ಹಿಂದಿನವರೆಗೆ ತೂಟ್‌ಂಗಳ (ಸ್ಮಶಾನ)ವು ಎರಡೂ ಭಾಗದವರಿಗೆ ಒಂದೇ ಆಗಿತ್ತು. ಪಾಲಂಗಾಲ ಗ್ರಾಮದಲ್ಲಿ ನೆಲೆಸಿದ್ದ ೧೨೦ ವರ್ಷಕ್ಕೆ ಹಿಂದೆ ಬಾಳಿದ್ದ ಪೂವಯ್ಯ ಎಂಬ ವ್ಯಕ್ತಿಯೊಬ್ಬನಿಗೆ ಚರ್ಮ ರೋಗವಿದ್ದ ಕಾರಣ ಆ ಸ್ಮಶಾನದಿಂದ ದೂರದಲ್ಲಿ ಒಂದು ಕಡೆ ಹೊಸ ಸ್ಮಶಾನ ತೆರೆಯಲಾಯಿತು. ಅಂದಿನಿಂದ ಈ ಎರಡು ಒಕ್ಕಗಳಿಗೆ ಸ್ಮಶಾನವೂ ಕೂಡ ಬೇರೆ ಬೇರೆಯಾಗಿದ್ದು, ಬಾಯಿ ಮಾತಿಗೆ ಒಂದೇ ಮನೆಯವರು ಎಂದು ಹೇಳುತ್ತಾರೆ. ಆದರೆ ಯಾವುದೇ ಆಚರಣೆಗಲ್ಲಿ ಒಟ್ಟಾಗಿ ಭಾಗವಹಿಸುವುದಿಲ್ಲ. ಭಾವನಾತ್ಮಕವಾಗಿ ಕೂಡ ಒಂದೇ ಮೂಲದ ಎರಡು ಕುಟುಂಬಗಳು ವಿಮುಖವಾಗಿರುವುದು ಕುತೂಹಲಕಾರಿಯಾಗಿದೆ. ಒಳಜಗಳಗಳ ಕಾರಣದಿಂದ ಈ ರೀತಿಯಲ್ಲಿ ಅನೇಕ ಒಕ್ಕಗಳು ಛಿದ್ರಗೊಂಡಿರುವುದಕ್ಕೆ ಅಲ್ಲಲ್ಲಿ ಬೇಕಾದಷ್ಟು ನಿದರ್ಶನಗಳು ಸಿಗುತ್ತವೆ.

ಆ ಕಾಲಘಟ್ಟದಲ್ಲಿ ನಶಿಸಿಹೋದ ಕೆಲವು ಒಕ್ಕಗಳ ಆಸ್ತಿಗೆ ದೊಡ್ಡವೀರರಾಜೇಂದ್ರ ಮತ್ತು ನಂತರದ ಅರಸರು ಒಕ್ಕಗಳನ್ನು ಪುನರುತ್ಥಾನಗೊಳಿಸುವ ದೃಷ್ಟಿಯಿಂದ ಕೊಡಗಿನ ಹೊರಗಿನಿಂದ ಜನರನ್ನು ಕರೆತಂದು ಈ ಒಕ್ಕಗಳನ್ನು ಪುನರುಜ್ಜೀವನಗೊಳಿಸಿದರು ಎಂಬುದಾಗಿ ಕಾವೇರಿ ಪೊನ್ನಪ್ಪನವರು ದಾಖಲಿಸಿದ್ದಾರೆ(ಪೊನ್ನಪ್ಪ, ೨೦೧೩:೮೮-೮೯).

೧೮ನೇ ಶತಮಾನದ ಉತ್ತರಾರ್ಧದ ಆರಂಭದಲ್ಲಿ ೩೫-೪೦ ಮಂದಿ ವಯಸ್ಕ ಪುರುಷರು ಒಂದೇ ಮನೆಯಲ್ಲಿ ಜೀವಿಸುತ್ತಿದ್ದರು. ಇಂತಹ ಅನೇಕ ಒಕ್ಕಗಳಲ್ಲಿ ಹೆಂಗಸರು, ಮಕ್ಕಳು ಸೇರಿ ಒಟ್ಟಾರೆ ೧೨೦-೧೫೦ ಜನರು ಐನ್‌ಮನೆಗಳಲ್ಲಿ ಜೀವಿಸುತ್ತಿದ್ದರು (ರೈಸ್, ೧೮೭೮:೩೯). ೧೯ನೆಯ ಶತಮಾನದ ಆರಂಭದವರೆಗೂ ಒಕ್ಕ/ಅವಿಭಕ್ತ ಕುಟುಂಬದ ಆಸ್ತಿಯು ವಿಭಜನೆಗೆ ಒಳಪಟ್ಟಿರಲಿಲ್ಲ. ಇಂತಹ ಆಸ್ತಿಯು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ವರ್ಗಾವಣೆಯಾಗುತ್ತಿತ್ತೇ ವಿನಾ ವಿಭಜನೆಗೆ ಅವಕಾಶವಿರಲಿಲ್ಲ. ಭಾರತದ ಬೇರೆ ಬೇರೆ ಭಾಗಗಳಲ್ಲಿ ಕೃಷಿ ಭೂಮಿಯ ವಿಘಟನೆ ಕೊಡಗಿನ ಪರಿಸರದಲ್ಲಿ ಆಗದಿದ್ದರಿಂದ ಅವಿಭಕ್ತ ಕುಟುಂಬ ಮುಂದುವರಿಯಲು ಸಾಧ್ಯವಾಯಿತು. ಆಸ್ತಿ ವಿಚಾರಕ್ಕೆ ಸಂಬಂಧಿಸಿದಂತೆ ಕಾಲಾನಂತರದಲ್ಲಿ ಕೊಡಗಿನ ಸಾಂಪ್ರದಾಯಿಕ ನಿಯಮಾವಳಿಗಳಿಗೆ ವ್ಯತಿರಿಕ್ತವಾಗಿ ಉಳಿದೆಡೆ ಕಂಡುಬರುವ ಹಿಂದೂ

ಉತ್ತರಾಧಿಕಾರತ್ವ ನಿಯಮಗಳ ಮಾದರಿಯನ್ನು ಅನುಸರಿಸಿ ಲಿಂಗಾಯತ ಅರಸರು ವಿಭಜನೆಗೆ ಪ್ರೋತ್ಸಾಹಿಸಿದರು" ಎಂದು ಎಂ.ಎನ್. ಶ್ರೀನಿವಾಸ್ ಅವರು ಅಭಿಪ್ರಾಯಪಡುತ್ತಾರೆ(ಶ್ರೀನಿವಾಸ್, ೧೯೮೯(೧೯೫೨): ೫೧-೫೨). ಅದರಂತೆ ಒಕ್ಕದ ಸದಸ್ಯರ ನಡುವೆ ವೈಮನಸ್ಸು, ಭಿನ್ನಾಭಿಪ್ರಾಯಗಳು ತಲೆದೂರಿ ಒಕ್ಕಗಳು ಒಡೆದಂತೆ ಕಾಣುತ್ತದೆ. ಆದ್ದರಿಂದ ಒಕ್ಕದ ಸದಸ್ಯರು ತಮ್ಮ ಆಸ್ತಿಯನ್ನು ವಿಭಜಿಸಿ ಕೊಡುವಂತೆ ಲಿಂಗಾಯತ ಅರಸರಿಗೆ ೧೮೦೫ರಲ್ಲಿ ದೂರು ನೀಡಿದರು(ಮುತ್ತಣ್ಣ, ೧೯೫೩: ೩೧೦). ಹೀಗಾಗಿ ಒಕ್ಕಗಳ ಆಸ್ತಿ ವಿಭಜನೆಗೆ ಲಿಂಗಾಯತ ಅರಸರು ಕೆಲವೊಂದು ನಿಯಮಗಳನ್ನು ರೂಪಿಸಿದ್ದಿರಬಹುದು ಅಥವಾ ಒಕ್ಕದ ಸದಸ್ಯರು ಕೈಗೊಳ್ಳುವ ತೀರ್ಮಾನವನ್ನು ಆಧರಿಸಿ ಸದಸ್ಯನು ಒಕ್ಕದಿಂದ ಹೊರಹೋಗಬಹುದೇ, ಅಥವಾ ಇಲ್ಲವೇ ಎಂಬ ನಿರ್ಣಯವನ್ನು ತೆಗೆದುಕೊಳ್ಳುವ ಹಕ್ಕನ್ನು ಒಕ್ಕಕ್ಕೆ ಕೊಟ್ಟಂತೆ ಕಾಣುತ್ತದೆ. ಏಕೆಂದರೆ ಈ ಬಗೆಗೆ ರೈಸ್ ಅವರು ಕೆಲವು ಸುಳಿವುಗಳನ್ನು ಕೊಟ್ಟಿದ್ದಾರೆ (ರೈಸ್, ೧೮೭೮: ೩೨೯). ಅವರ ಅಭಿಪ್ರಾಯದಂತೆ:

> ಇತ್ತೀಚಿನ ಕೆಲವು ಬೆಳವಣಿಗೆಗಳನ್ನು ಗಮನಿಸಿದಾಗ ಕೆಲವೊಮ್ಮೆ ಒಕ್ಕಗಳಲ್ಲಿ ಒಡಕು ಉಂಟಾಗಿರುವುದನ್ನು ಗಮನಿಸಬಹುದು. ಕೆಲವರು ಶಕ್ತಿ ಉಳ್ಳವರು ಸ್ವಂತ ಆಸ್ತಿಗಳನ್ನು ಖರೀದಿಸಿರುವುದನ್ನು ಕಾಣಬಹುದು. ಆದರೆ ಈ ರೀತಿಯ ಖಾಸಗಿ ಸ್ವತ್ತನ್ನು ಹೊಂದುವುದು ಒಕ್ಕದ ಇತರ ಸದಸ್ಯರ ಒಪ್ಪಿಗೆ ಮೇರೆಗೆ ಹಾಗೂ ಕುಟುಂಬದ ಆಸ್ತಿಯಲ್ಲಿ ಇವರು ಯಾವುದೇ ಪಾಲುದಾರಿಗೆ ಕೇಳುವಂತಿಲ್ಲ. ಒಕ್ಕದ ಹಿರಿಯನ ಹೆಸರಿನಲ್ಲಿರುವ ಕುಟುಂಬದ ಆಸ್ತಿಯನ್ನು ಯಾವುದೇ ಕಾರಣಕ್ಕೆ ವಿಭಜಿಸುವಂತಿಲ್ಲ. ಹಾಗೆಯೇ ಸ್ವತಂತ್ರರಾಗಬಯಸುವ ಸದಸ್ಯರು ತಮ್ಮ ಸ್ವಂತ ಗಳಿಕೆಯಿಂದ ಮಾತ್ರ ಮಾಡಬಹುದಾಗಿದೆ(ರೈಸ್, ೧೮೭೮:೩೨೯).

ಹೀಗೆ ಕೆಲವೊಮ್ಮೆ ಕುಟುಂಬದ ಆಸ್ತಿಯು ವಿಭಜನೆಗೊಳಪಡುತ್ತದೆ. ಆದರೆ ಈ ಪ್ರಕ್ರಿಯೆಯು ಎಲ್ಲ ಸದಸ್ಯರು ಒಪ್ಪಿಗೆ ಮೇರೆಗೆ ನಡೆಯಬೇಕಾಗಿತ್ತು. ಒಬ್ಬ ವ್ಯಕ್ತಿ ಒಕ್ಕದಿಂದ ಹೊರನಡೆಯಲು ಇಚ್ಛಿಸಿದ ಸಂದರ್ಭದಲ್ಲಿ ಒಕ್ಕದ ಸದಸ್ಯರು ಒಪ್ಪಿಗೆಯನ್ನು ಸೂಚಿಸದಿದ್ದಲ್ಲಿ ಆತನಗೆ ಯಾವುದೇ ರೀತಿಯ ಆಸ್ತಿಯ ಪಾಲುದಾರಿಕೆ ದೊರೆಯುತ್ತಿರಲಿಲ್ಲ. ಅಂತಹ ಸದಸ್ಯನನ್ನು ಬಹಿಷ್ಕೃತ ವ್ಯಕ್ತಿಯಾಗಿ ಪರಿಗಣಿಸುತ್ತಿದ್ದರು. ಕುಟುಂಬದ ಎಲ್ಲ ಆಸ್ತಿಯು ಪಟ್ಟೆದಾರ್ ಅಥವಾ ಕೊರವಕಾರನ ಹೆಸರಿನಲ್ಲಿ ಇರುತ್ತಿತ್ತು. ಆಗಿನ ಅವಿಭಕ್ತ ಕುಟುಂಬದ ಆಸ್ತಿ ವಿಭಜನೆಯ ಪ್ರಕ್ರಿಯೆಯನ್ನು ಕೊಡಗಿನ ಲಿಂಗಾಯತ ಅರಸರು ಪರೋಕ್ಷವಾಗಿ ಬೆಂಬಲಿಸಿದರು. ಏಕೆಂದರೆ, ಅಂದಿನ ಕಾಲದಲ್ಲಿ ಪ್ರಚಲಿತದಲ್ಲಿದ್ದ ಬಹುಪತಿತ್ವ ಪದ್ಧತಿಯನ್ನು(ರೈಸ್, ೧೮೭೮:೧೧೧) ಕೂಡ ನಿರ್ಮೂಲನೆಗೊಳಿಸುವುದರ ಜೊತೆಜೊತೆಗೆ ಕೃಷಿ ಚಟುವಟಿಕೆಯನ್ನು ವಿಸ್ತರಿಸುವುದೂ ಆಗಿತ್ತು. ಆಸ್ತಿಯನ್ನು ವ್ಯಕ್ತಿಗತವಾಗಿ ಹಂಚಿಕೆ ಮಾಡಿ ಅವರ ಸುಪರ್ದಿಗೆ ನೀಡಿದರೆ ತನ್ನ ಜಮೀನನ್ನು ಅಭಿವೃದ್ಧಿಪಡಿಸಲು ಬಯಸುತ್ತಾರೆ ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಕೊಡಗಿನ ರಾಜರು ರಾಜ್ಯದ ಭೂಮಿಯನ್ನು ಸಾಗುವಳಿಗೆ ನೀಡುತ್ತಿದ್ದುದುಂಟು. ಆಳುಗಳು ಇಲ್ಲದಿದ್ದರೆ ಪನ್ಯ ಜಮೀನುಗಳಲ್ಲಿದ್ದ ದಲಿತ ವರ್ಗದ ಜಮ್ಮದಾಳುಗಳನ್ನು ನೀಡುತ್ತಿದ್ದರು(ನಾಗರಾಜ್, ೨೦೦೪: ೧೬೪). ಉಂಬಳಿ ಭೂಮಿಯ

ನೀಡಿಕೆ ವಿಶೇಷ ಸೇವಾ ಕಾರಣಕ್ಕೆ ಕೊಡಲಾಗುತ್ತಿತ್ತು. ಜಮ್ಮ ಒಡೆಯರ ಮತ್ತು ಜಮ್ಮದಾಳುಗಳ ವಿಚಾರವನ್ನು ವಿಜಯ್ ಪೂಣಚ್ಚ ತಂಬಂಡ ಅವರ 'ಅಸ್ಪೆಕ್ಟ್ಸ್ ಆಫ್ ಸ್ಲೇವರಿ ಇನ್ ದಿ ನೈನ್‌ಟೀನ್ತ್ ಸೆಂಚುರಿ(ಇಂಡಿಕಾ, ಮುಂಬೈ, ೧೯೯೨)'ನಲ್ಲಿ ಪ್ರಕಟವಾದ ಲೇಖನದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಕುತ್ತಿ(ವಂಶ) ನಾಶವಾದ ಒಕ್ಕದವರ ಜಮೀನನ್ನು ರಾಜ್ಯಕ್ಕೆ ಸೇವೆ ಸಲ್ಲಿಸಿದವರಿಗೆ ಕೊಡಲಾಗುತ್ತಿತ್ತು. ಈ ಸಲುವಾಗಿ ರಾಜನು ಕೊಟ್ಟ ನಿರೂಪಗಳಿವೆ(ನಾಗರಾಜ್, ೨೦೦೪: ೧೬೪). ಇದಲ್ಲದೆ ಮತ್ತೊಂದು ಅಂಶ ವೈಯಕ್ತಿಕ ಆಸ್ತಿಯ ಅಸ್ತಿತ್ವಕ್ಕೆ ಕಾರಣವಾಯಿತು. ಅದೇನೆಂದರೆ, ಬ್ರಿಟಿಷರು ೧೮೩೭ರ ಕೆನರಾದಂಗೆಯನ್ನು ಅಡಗಿಸುವ ಸಂದರ್ಭದಲ್ಲಿ ತಮ್ಮ ಜೊತೆಗಿದ್ದ ಕೊಡವ ಯೋಧರಿಗೆ ಜಾಗೀರು ಮೊದಲಾದ ಕಂದಾಯರಹಿತ ಜಮೀನನ್ನು ಮಂಜೂರು ಮಾಡಿದರು. ಇಂತಹ ಜಮೀನುಗಳು ವೈಯಕ್ತಿಕ ಆಸ್ತಿಯಾಗಿದ್ದವೇ ವಿನಹ ಕುಟುಂಬದ ಆಸ್ತಿಗಳಾಗಿರಲಿಲ್ಲ. ಪರೋಕ್ಷವಾಗಿ ಒಕ್ಕದ ಹಿಡಿತದಿಂದ ಸದಸ್ಯನು ಹೊರಹೋಗಲು ಇದು ಸಾಧನವಾಯಿತು (ಶ್ರೀನಿವಾಸ್, ೧೯೮೯(೧೯೫೨):೫೨). ಇವಲ್ಲದೆ, ಕೊಡಗಿನ ವಸಾಹತುಪೂರ್ವ ಸಂಪ್ರದಾಯದಂತೆ ಒಕ್ಕದ ಕಿರಿಯ ಸದಸ್ಯರು ಸ್ವಯಾರ್ಜಿತ ಚರಾಸ್ತಿಯನ್ನು ಸಂಪಾದಿಸಲು ಯಾವುದೇ ಆಕ್ಷೇಪಣೆ ಇರಲಿಲ್ಲ. ಉದಾಹರಣೆಗೆ ಪ್ರಾಚೀನ ಸಂದರ್ಭದಲ್ಲಿ ಅರಿಶಿಣ ಮತ್ತು ಶುಂಠಿ ಬೆಳೆಗಳನ್ನು ಬೆಳೆದು ಒಂದು ಭಾಗವನ್ನು ಒಕ್ಕಕ್ಕೆ ನೀಡಿ ಉಳಿದದ್ದನ್ನು ತಾವು ಅನುಭವಿಸಬಹುದಾಗಿತ್ತು. ವಸಾಹತುಕಾಲಘಟ್ಟದಲ್ಲಿ ಆಸ್ತಿಗಳ ವಿಭಜನೆಗೆ ಮತ್ತು ಖಾಸಗಿ ಸ್ವತ್ತಿನ ಕಲ್ಪನೆಗೆ ಉತ್ತೇಜನ ಕೊಡಲಾಯಿತು. ಪರಿಣಾಮವಾಗಿ ಕೊಡಗಿನ ಮೂಲ ರೂಪದಲ್ಲಿದ್ದ ಪೂರ್ವಿಕರ ಆಸ್ತಿಯನ್ನು ವಿಭಜನೆಗೆ ಒಳಪಡಿಸಲಾಯಿತು. ಇದು ಆ ವೇಳೆಗಾಗಲೆ ಭಾರತದಾದ್ಯಂತ ಹೊಸ ರಾಜಕೀಯ ಮತ್ತು ಆರ್ಥಿಕ ಸಂರಚನೆಗೆ ಸಂವಾದಿಯಾಗಿದ್ದವು. ಈ ರೀತಿಯ ವೈಯಕ್ತಿಕ ಆಸ್ತಿಯ ಕಲ್ಪನೆಯು ಆಸಕ್ತಿದಾಯಕವಾಗಿತ್ತು. ಆದ್ದರಿಂದಲೆ ಇದು ಒಕ್ಕಗಳ ಸಮಗ್ರತೆ ಧಕ್ಕೆಯಾಗುವಂತಹ ಸಂಗತಿಯಾಗಿತ್ತು. ಈ ಸಂದರ್ಭದಲ್ಲಿ ಒಕ್ಕದ ಮೂಲಕುಟುಂಬದ ರಚನೆ ದುರ್ಬಲವಾಗುತ್ತಾ ಹೋಗುವ ಮೂಲಕ ಹೊಸರೂಪವನ್ನು ಪಡೆಯತೊಡಗಿತು (ಶ್ರೀನಿವಾಸ್, ೧೯೮೯(೧೯೫೨): ೫೩). ಕೆಲವೊಮ್ಮೆ ಸರ್ಕಾರಿ ಸೇವೆಯಲ್ಲಿದ್ದ ಒಕ್ಕದ ಸದಸ್ಯನೊಬ್ಬ ಹೊಸ ಜಮೀನನ್ನು ಕುಟುಂಬದ ಆಸ್ತಿಯ ಪಕ್ಕದಲ್ಲಿ ಕೊಂಡುಕೊಂಡಲ್ಲಿ ಅದನ್ನು 'ಕೊಪ್ಪ' ಎಂದು ಕರೆಯಲಾಗುತ್ತಿತ್ತು. ಇದು ಅವನ ಸ್ವಂತದಾಗಿದ್ದು, ಅವನ ಸಂಸಾರದ ನಿರ್ವಹಣೆಗೆ ಸಾಕಾಗುತ್ತಿತ್ತು. ಅಲ್ಲದೆ, ಅಲ್ಲಿ ಅವನು ತನ್ನ ಸ್ವಂತ ಮನೆ ಕಟ್ಟಿಕೊಳ್ಳಲು ತನ್ನ ಮೂಲಕುಟುಂಬದ ಒಪ್ಪಿಗೆ ಇರುತ್ತಿತ್ತು. ಈ ರೀತಿಯ ಸ್ವಾಭಾವಿಕವಾದ ವಿಭಜನೆಗಳು, ಸಾಮಾಜಿಕ ಪರಿವರ್ತನೆಗೆ ಹೊಸ ಆಯಾಮವನ್ನು ಕೊಟ್ಟಿತು. ತಮ್ಮ ಸ್ವಯಾರ್ಜಿತ ಆಸ್ತಿಯಲ್ಲಿ ಮನೆ ಕಟ್ಟಿ ಸಂಸಾರ ಹೂಡಿದ ಉತ್ಸಾಹಿ ಸದಸ್ಯರು ಕೆಲವೊಮ್ಮೆ ಈ ವಿಭಜನೆಯಿಂದ ಕಷ್ಟಕ್ಕೊಳಪಟ್ಟರೂ ತಮಗೆ ದೊರೆತ ವೈಯಕ್ತಿಕ ಸ್ವಾತಂತ್ರ್ಯದಿಂದಾಗಿ ತಮ್ಮ ಮುಂದಿನ ಪೀಳಿಗೆಗೆ ತಾನು ಸಂಪಾದಿಸಿದ ಆಸ್ತಿ

ಹಸ್ತಾಂತರಗೊಳ್ಳುವ ಪ್ರಕ್ರಿಯೆಯು ಸೃಷ್ಟಿಯಾಯಿತು(ರಿಕ್ಟರ್, ೨೦೧೪(೧೮೭೦):೧೩೦). ಈ ಎಲ್ಲ ಘಟನೆಯಿಂದ ಜರ್ಜರಿತರಾದ ತಕ್ಕ ಮುಖ್ಯಸ್ಥರು ಬ್ರಿಟಿಷ್ ಸರ್ಕಾರಕ್ಕೆ ೧೮೫೮ರಲ್ಲಿ ಅಹವಾಲೊಂದನ್ನು ಸಲ್ಲಿಸಿ ತಮ್ಮ ಆಸ್ತಿಪಾಸ್ತಿಗಳು ವಿಭಜನೆಗೊಳಪಟ್ಟು ಸಾಕಷ್ಟು ಕಷ್ಟನಷ್ಟಗಳನ್ನು ಅನುಭವಿಸುವಂತಾಗಿದೆ. ಈ ವಿಭಜನೆಯು ನಮ್ಮ ಪಾರಂಪರಿಕ ಕಟ್ಟುಕಟ್ಟಳೆಗಳಿಗೆ ಧಕ್ಕೆ ತರುವಂತದ್ದಾಗಿರುವುದರಿಂದ ಇದಕ್ಕೆ ಸೂಕ್ತ ಪರಿಹಾರವನ್ನು ಸೂಚಿಸುವಂತೆ ಕೋರುತ್ತಾರೆ. ಅಂದಿನ ಜುಡಿಷಿಯಲ್ ಕಮೀಷನರ್ ಅವರು ವಿಶೇಷ ಮೇಲ್ಮನವಿ ದಾವೆ ಸಂ: ೧೧೭ರ ೧೮೫೮-೫೯ರಲ್ಲಿ ಆಜ್ಞೆಯೊಂದನ್ನು ಹೊರಡಿಸಿ ಆಸ್ತಿಗಳ ವಿಭಜನೆಯು ಕೊಡವರ ಪರಂಪರಾಗತ ಕಟ್ಟುಕಟ್ಟಳೆಗೆ ವಿರುದ್ಧವಾದುದರಿಂದ ಕೌಟುಂಬಿಕ ಆಸ್ತಿಯು ವಿಭಜನೆಗೆ ಒಳಪಡುವಂತಹದ್ದಲ್ಲ ಎಂದು ತಿಳಿಸುವುದರ ಮೂಲಕ ಒಕ್ಕ ಹೆಚ್ಚಿನ ವಿಭಜನೆಗೊಳ್ಳುವುದನ್ನು ತಡೆಯಿತು(ಶ್ರೀನಿವಾಸ್, ೧೯೮೯(೧೯೫೨): ೫೨). ಆನಂತರ ಎಂದರೆ ೧೮೭೦ರ ದಶಕದಲ್ಲಿ ಕೊಡಗಿನ ಒಕ್ಕಗಳು ಸಾಧಾರಣವಾಗಿ ೨೦-೩೦ ಸದಸ್ಯರನ್ನು ಒಳಗೊಂಡಿರುತ್ತಿದ್ದವು. ಒಮ್ಮೊಮ್ಮೆ ೫೦ ಸದಸ್ಯರೂ ಒಂದೇ ಚಾವಡಿಯಡಿ ಜೀವಿಸುತ್ತಿದ್ದರೆಂದು ರೈಸ್ ಅವರು ದಾಖಲಿಸುತ್ತಾರೆ(ರೈಸ್, ೧೮೭೮: ೩೨೯). ಆದರೆ ಆ ಹೊತ್ತಿಗಾಗಲೇ ಅಂದರೆ ೧೮೪೦ರಿಂದ ೧೮೬೦ರ ಅವಧಿಯಲ್ಲಿ ಆಸ್ತಿ ವಿಭಜನೆಯ ವಿಚಾರದಲ್ಲಿ ಸಿವಿಲ್ ನ್ಯಾಯಾಲಯಗಳಲ್ಲಿ ಸಾಕಷ್ಟು ಇತ್ಯರ್ಥಗಳಾಗಿರುವುದನ್ನು ವಿಜಯ್ ಪೂಣಚ್ಚ ತಂಬಂಡ ೧೯೯೦ರಲ್ಲಿ ಅವರು ಈ ಕುರಿತಂತೆ ಅಭಿಪ್ರಾಯಪಟ್ಟಿರುವುದು ಕುತೂಹಲಕಾರಿಯಾಗಿದೆ.

> ೧೮೪೦ ಮತ್ತು ೧೮೫೮ರ ನಡುವೆ 'ಆದರ್ಶ ಅವಿಭಕ್ತ ಕುಟುಂಬ' ವ್ಯವಸ್ಥೆಯು ನಲುಗಿ ಹೋಗುತ್ತದೆ. ಪ್ರಮುಖವಾಗಿ ಸರಕಾರಿ ನೌಕರರು ತಮ್ಮ ತಮ್ಮ ಪಾಲನ್ನು ಯಶಸ್ವಿಯಾಗಿ ತೆಗೆದುಕೊಂಡು ಪ್ರತ್ಯೇಕವಾಗಿ ಜೀವಿಸಲು ಪ್ರಾರಂಭಿಸಿದ್ದಾರೆ ಎಂದು ಕಡಿಯುತ್ತೂರು ನಾಡಿನ ಪ್ರಮುಖರು ಮತ್ತು ಮುಖ್ಯಸ್ಥರು[ಇವರಲ್ಲಿ ಕೊಡವರು ಮಾತ್ರವಕ್ಕದೆ ಕೊಡವ ಭಾಷಿಕ ಭೂಹಿಡುವಳಿದಾರರಾದ ಹೆಗ್ಗಡೆ ಸಮುದಾಯದ ಮುಖ್ಯಸ್ಥರೂ ಇದ್ದರೆನ್ನುವುದು ಗಮನಾರ್ಹ] ಅರ್ಜಿ ಸಲ್ಲಿಸಿದ್ದರು. ಆ ಹೊತ್ತಿಗಾಗಲೇ ಹಲವಾರು ಕುಟುಂಬದ ಒಟ್ಟು ಆಸ್ತಿಯಲ್ಲಿರುವ ತಮ್ಮ ಪಾಲಿಗಾಗಿ ನ್ಯಾಯಾಲಯದ ಮೊರೆ ಹೋಗಿ ಯಶಸ್ವಿಯಾಗಿ ಆಸ್ತಿಯನ್ನು ದಕ್ಕಿಸಿಕೊಂಡದ್ದು ಉಂಟು. ೧೮೪೧ ರಿಂದ ೧೮೫೮ರವರೆಗೆ ೨೪೨ ಒರಿಜಿನಲ್ ಹಾಗೂ ೧೨೯ ಎಪೀಲ್ ಡಿಕ್ರಿಗಳು ಸಿವಿಲ್ ನ್ಯಾಯಾಲಯಗಳಲ್ಲಿ ಇತ್ಯರ್ಥವಾಗಿರುವುದು ಕಂಡುಬರುತ್ತದೆ. ಹಲವಾರು ಜನರ ಆಸ್ತಿಗಳು ಗುಟ್ಟಾಗಿ ವಿಭಜನೆಯಾಗಿದೆ ಎಂದು ಆಗಿನ ಜುಡಿಷಿಯಲ್ ಕಮಿಷನರ್ ಅಭಿಪ್ರಾಯಪಡುತ್ತಾರೆ. ೧೮೫೮ರಲ್ಲಿ ಕೊಡಗಿನ ಎಲ್ಲ ತಕ್ಕರು ಮತ್ತು ಮುಖ್ಯಸ್ಥರು ಆಸ್ತಿಯ ವಿಭಜನೆಯಿಂದಾಗಿ ಅವರ ಪುರಾತನ ಮನೆಗಳೆಲ್ಲವೂ ನಾಶವಾಗುತ್ತಿದೆಯೆಂದು ಸರಕಾರಕ್ಕೆ ದೂರು ಸಲ್ಲಿಸಿದ್ದರು.(ವಿಜಯ್: ೧೯೯೦)

ಎಂಬುದಾಗಿ ವಿಜಯ್ ಪೂಣಚ್ಚ ತಂಬಂಡ ಅವರು "ಇನ್ನರ್ ಟೆನ್ಷನ್ಸ್ ಇನ್ ಜಮ್ಮ ಟೆನ್ಯೂರ್ಸ್" ಎಂಬ ಲೇಖನದಲ್ಲಿ ದಾಖಲಿಸುತ್ತಾರೆ. ಅವರ ಬರವಣಿಗೆಗಳಲ್ಲಿ ರಿಕ್ಟರ್, ರೈಸ್,

ಶ್ರೀನಿವಾಸ್ ಮತ್ತು ಮುತ್ತಣ್ಣ ಮೊದಲಾದವರು ದಾಖಲಿಸುವಂತೆ ವಿಭಜನೆಯ ಪ್ರಕ್ರಿಯೆ ಮತ್ತು ಇತ್ಯರ್ಥಗಳು ೧೮೫೮ರಿಂದ ಅಲ್ಲ, ಅದಕ್ಕೆ ಮೊದಲೇ ಅಂದರೆ ೧೮೪೦ರಲ್ಲಿಯೇ ಒಕ್ಕದೊಳಗೆ ಪ್ರಾರಂಭವಾಗಿದೆ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ.

ಇದರಿಂದ ತಿಳಿಯುವುದೇನೆಂದರೆ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ವಿಭಜನೆಗೊಂಡಿದ್ದ ಒಕ್ಕಗಳು ೧೮೫೮ರ ಆಜ್ಞೆಯ ನಂತರ ಪುನರುತ್ಥಾನಗೊಳ್ಳತೊಡಗಿದವು. ಆದರೆ ೨೦ನೆಯ ಶತಮಾನದ ಆರಂಭದ ಹೊತ್ತಿಗೆ ಬಲಗೊಂಡ ಕಾನೂನು ಮತ್ತು ನ್ಯಾಯಾಂಗ ವ್ಯವಸ್ಥೆ, ಶಿಕ್ಷಣ ಮತ್ತು ಖಾಸಗಿ ಆಸ್ತಿಯ ಹಕ್ಕು ಅಲ್ಲದೆ ಸೇನೆಯಲ್ಲಿನ ಸೇವೆಗಾಗಿ ಹಾಗೂ ನೌಕರಿಗಾಗಿ ದೂರದ ಊರುಗಳಿಗೆ ಒಕ್ಕದ ಸದಸ್ಯರು ವಲಸೆ ಹೋಗಬೇಕಾದ್ದರಿಂದ ಒಕ್ಕಗಳು ಮತ್ತೆ ಟಿಸಿಲೊಡೆಯತೊಡಗಿದವು. ಇದು ಸ್ವಾತಂತ್ರ್ಯಾನಂತರದಲ್ಲಿ ಮತ್ತಷ್ಟು ತೀವ್ರಗೊಂಡಿತು.

ಈ ಸಂದರ್ಭದಲ್ಲಿ ವಿಜಯ್ ಪೂಣಚ್ಚ ತಂಬಂಡ ಅವರ ಅಭಿಪ್ರಾಯವನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಿದೇಶಿ ಬರಹಗಾರರಾದ ರಿಕ್ತರ್, ರೈಸ್, ಮೋಗ್ಲಿಂಗ್ ಮೊದಲಾದವರು ಹಾಗೂ ದೇಶಿ ಬರಹಗಾರರಾದ ಎಂ.ಎನ್. ಶ್ರೀನಿವಾಸ್, ಐ.ಮಾ.ಮುತ್ತಣ್ಣ, ಬಿ.ಡಿ. ಗಣಪತಿ ಹಾಗೂ ಇತ್ತೀಚಿನ ಬರಹಗಾರರಾದ ಎಂ.ಜಿ. ನಾಗರಾಜ್, ಕಾವೇರಿ ಪೊನ್ನಪ್ಪ, ಮೊದಲಾದವರಿಗಿಂತ ಭಿನ್ನವಾಗಿರುವುದನ್ನು ಗಮನಿಸಬಹುದು.

> ಕೊಡಗಿನಲ್ಲಿ ಅವಿಭಕ್ತ ಕುಟುಂಬ ಕೂಡು ಬಾಳಿಕೆ ಇದ್ದುದ್ದರಿಂದಲೇ ಕೊಡವರು ಉತ್ಕೃಷ್ಟ ವ್ಯಕ್ತಿತ್ವ ಹೊಂದಿದವರು ಮತ್ತು ನಿಷ್ಠೆ ನಿಯಮಗಳ ವ್ಯಕ್ತಿತ್ವ ಹೊಂದಿದವರೂ ಆಗಿದ್ದರು. ಆದರೆ ಆಧುನಿಕತೆಯ ಒತ್ತಡದಿಂದ ಒಕ್ಕವೆನ್ನುವ ಅವಿಭಕ್ತ ಕುಟುಂಬ ನಾಶ ಹೊಂದಿದ್ದರಿಂದ ಕೊಡವರು ಇಂದು ವ್ಯಕ್ತಿತ್ವವಾದಿಳಾಗಿ ತಮ್ಮ ಚಾರಿತ್ರಿಕ ಸತ್ವವನ್ನು ಕಳೆದುಕೊಂಡಿದ್ದಾರೆ ಎನ್ನುವ ಅನೇಕ ಬರವಣಿಗೆಗಳು ನಮಗೆ ಸಿಗುತ್ತದೆ. ಆದರೆ ನನ್ನ ನಿಲುವೇನೆಂದರೆ ಕೊಡಗಿನ ಒಕ್ಕ ವ್ಯವಸ್ಥೆ ಕೆಲವು ಆಂತರಿಕ ಕಾರಣಗಳಿಂದಲೂ ಬಿದ್ದುಹೋಯಿತು. ನಾವು ಸಾಧಾರಣವಾಗಿ ಹೇಳುವಂತೆ ಇಂಗ್ಲಿಷ್ ವಿದ್ಯಾಭ್ಯಾಸ, ಸರ್ಕಾರಿ ನೌಕರಿ, ವೈಯಕ್ತಿಕ ಆಸ್ತಿಯ ಪರಿಕಲ್ಪನೆ ಹಾಗೂ ಸ್ವಯಂ ತಾಂತ್ರಿಕ ನಿಲುವುಗಳ ಜನಪ್ರಿಯತೆಗಳೇ ಒಕ್ಕದ ವಿಭಜನೆಗೆ ಕಾರಣಗಳಲ್ಲ ಅಥವಾ ಹೊರಗಿನವರು ಕೊಡಗಿಗೆ ಬಂದು ನೆಲೆಸತೊಡಗಿದ್ದೇ ಒಕ್ಕದ ವಿಭಜನೆ ಕಾರಣವಲ್ಲ.

ಎಂಬ ಅಭಿಪ್ರಾಯಗಳು ಮುಖ್ಯವಾಗುತ್ತದೆ (ತಂಬಂಡ ೨೦೦೦: ೫೧). ಮುಂದುವರಿದು ವಿಜಯ್ ಪೂಣಚ್ಚ ತಂಬಂಡ ಅವರು ತಮ್ಮ ನಿಲುವನ್ನು ಸ್ಪಷ್ಟೀಕರಿಸುತ್ತಾ ವಿದೇಶಿ ಬರಹಗಾರರಿಂದ ಹಿಡಿದು ಎಂಬತ್ತರ ದಶಕದವರೆಗಿನ ಎಲ್ಲ ದೇಶಿ ಬರಹಗಾರರ ಅಭಿಪ್ರಾಯಗಳನ್ನು ವಿಮರ್ಶಿಸುತ್ತಾ ಒಕ್ಕದ ಆಸ್ತಿ ವಿಭಜನೆಗೆ ಸಂಬಂಧಪಟ್ಟಂತೆ ತಮ್ಮ ವಾದವನ್ನು ೨೦೦೦ನೇ ಇಸವಿಯಲ್ಲಿ ಪ್ರಕಟಿಸಿದ 'ಆಧುನಿಕ ಕೊಡಗು' ಕೃತಿಯಲ್ಲಿ ವಿಸ್ತೃತವಾಗಿ ಚರ್ಚೆಗೊಳಪಡಿಸಿದ್ದಾರೆ.

ಚರಿತ್ರೆಕಾರರಾದ ವಿಜಯ್ ಪೂಣಚ್ಚ ತಂಬಂಡ ಅವರು ಒಕ್ಕಗಳ ವಿಭಜನೆಗೆ ಈ ಕೆಳಗಿನ ಪ್ರಮುಖ ಅಂಶಗಳನ್ನು "ಇನ್ನರ್ ಟೆನ್ಷನ್ಸ್ ಇನ್ ಜಮ್ಮ ಟೆನ್ಯೂರ್ಸ್" ಎಂಬ ಲೇಖನದಲ್ಲಿ ಗುರುತಿಸಿದ್ದಾರೆ.

೧. ಆದರ್ಶ ಅವಿಭಕ್ತ ಕುಟುಂಬ ವ್ಯವಸ್ಥೆಯ ಹಿಡಿತ ಒಳಜಗಳಗಳ ಜಗಳಗಳ ಕಾರಣದಿಂದ ಮತ್ತು ಆಧುನಿಕ ದೃಷ್ಟಿಕೋನದ ಕಾರಣದಿಂದ ಸಡಿಲವಾಯಿತು.

೨. ಉಸ್ತುವಾರಿಗಾಗಿ ವಿಭಜನೆ (ಮೈಂಟೆನೆನ್ಸ್ ಡಿವಿಜನ್) ಎನ್ನುವ ಹೆಸರಿನಲ್ಲಿ ವಿಭಜನೆಯ ಹೊಸರೂಪ ೧೮೫೦ರ ದಶಕದಲ್ಲಿ ಬೆಳೆಯಿತು.

೩. ೧೮೫೮ಕ್ಕಿಂತ ಮೊದಲು ೩೦ ವರ್ಷಗಳಿಂದ ಯುದ್ಧಗಳಿಲ್ಲದ್ದರಿಂದ ಕೊಡಗಿನ ಯುವಕರು ನಿರುದ್ಯೋಗಿಗಳಾದವರು. ಹಾಗಾಗಿ ಬೇರೆ ನಿರ್ವಾಹವಿಲ್ಲದೆ. ಹೊಸ ಭೂಮಿಗಳನ್ನು ಆಕ್ರಮಿಸಿಕೊಂಡು ಸ್ವಂತ ಉಳುವರಿ ಮಾಡತೊಡಗಿದರು.

೪. ೧೮೩೭ ಅಮರ ಸುಳ್ಯ ದಂಗೆಯನ್ನು ಅಡಗಿಸಲು ಸಹಕರಿಸಿದ ಕೊಡಗಿನ ಜನರನ್ನು ಸಂತುಷ್ಟಗೊಳಿಸಲು ಬ್ರಿಟಿಷ್ ಆಡಳತವು ಉಂಬಳಿ ಹಾಗೂ ಜಮ್ಮ ಭೂಮಿಗಳನ್ನು ಕೊಟ್ಟರು. ಹೀಗೆ ಕೊಟ್ಟ ಅನೇಕ ಜಮೀನುಗಳು ಒಕ್ಕದ ಆಸ್ತಿಯೊಳಗೆ ಸೇರದೆ ಖಾಸಗಿ ಆಸ್ತಿಗಳಾದವು. ಹಾಗಾಗಿ ಅವಿಭಕ್ತ ಕುಟುಂಬದಿಂದ ಹೊರಬರಲು ಇದೊಂದು ಸಾಧನ ಮಾರ್ಗವಾಯಿತು.

೫. ವಿಭಜನೆಯ ಕಾರಣದಿಂದ ಹಿಟ್ಟಿ ಬಿಟ್ಟಿ ಚಾಕ್ರಿ ಅಥವಾ ಅರಮನೆ ಚಾಕ್ರಿಯಿಂದ ತಪ್ಪಿಸಿಕೊಳ್ಳುವ ಸಾಧ್ಯತೆ ಇದ್ದುದರಿಂದ ಕೊಡಗರು ಈ ಸಂದರ್ಭವನ್ನು ಬಳಸಿಕೊಂಡರು.

೬. ದೇಶವು ಬ್ರಿಟಿಷ್ ನಿರಂಕುಶ ಪ್ರಭುತ್ವದಿಂದ ಸ್ವಾತಂತ್ರ್ಯದ ಸ್ಥಿತಿಗೆ ಚಲಿಸುವ ಸಂಕ್ರಮಣ ಸ್ಥಿತಿಯಲ್ಲಿದ್ದುದರಿಂದ ಕೊಡಗಿನ ಯುವಕರು ತಮ್ಮ ಹಿರಿಯ ಅಧೀನದಲ್ಲಿರಲು ಇಷ್ಟ ಪಡದಿದ್ದಾಗ ಬ್ರಿಟಿಷ್ ನ್ಯಾಯಾಲಯಗಳು ಈ ರೀತಿಯ ದಾವೆಗಳನ್ನು ತಿರಸ್ಕರಿಸಲಾಗದ ಸ್ಥಿತಿಯಲ್ಲಿದ್ದುದರಿಂದ ಆ ಸಂದರ್ಭದಲ್ಲಿ ವಿಭಜನೆಗಳನ್ನು ಪುರಸ್ಕರಿಸಲಾಗುವುದು.

ಈ ಮೇಲಿನ ಎಲ್ಲ ಮುಖ್ಯವಾದ ಕಾರಣಗಳಿಂದ ಆದರ್ಶ ಅವಿಭಕ್ತ ಕುಟುಂಬ ಕೊಡಗಿನಲ್ಲಿ ನಶಿಸಿ ಹೋಯಿತು. ಎಂಬುದಾಗಿ ಅಭಿಪ್ರಾಯ ಪಡುವ ವಿಜಯ್ ಪೂಣಚ್ಚ ಅವರ ವಾದಗಳು ಚಾರಿತ್ರಿಕ ಸತ್ಯವಾಗಿದೆ(ವಿಜಯ್: ೧೯೯೦) (ತಂಬಂಡ ೨೦೦೦: ೫೧-೫೯). ಹೀಗೆ ಕೊಡಗಿನ ಅವಿಭಕ್ತ ಕುಟುಂಬಗಳ ಸ್ವರೂಪಗಳಲ್ಲಿ ಬದಲಾಗುತ್ತಾ ಬರುವ ಪ್ರಕ್ರಿಯೆ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗಿರುತ್ತದೆ.

## ೨.೫. ಸ್ವಾತಂತ್ರ್ಯಾನಂತರದ ಕಾಲಘಟ್ಟ (ಆಧುನಿಕ)

ಸ್ವಾತಂತ್ರ್ಯಾನಂತರದ ಪ್ರಜಾತಂತ್ರ ವ್ಯವಸ್ಥೆ ಕೊಡಗಿನ ಜನರಲ್ಲಿ ಸ್ವತಂತ್ರವಾಗಿ ಚಿಂತಿಸಲು ಅವಕಾಶ ಮಾಡಿಕೊಟ್ಟಿತು. ಕೃಷಿಕ್ಷೇತ್ರ ಸಾಕಷ್ಟು ಬೆಳವಣಿಗೆಯನ್ನು ಕಂಡಿತು. ಈ ವೇಳೆಗೆ ಒಕ್ಕದೊಳಗೆ ಪ್ರೌಢಶಿಕ್ಷಣ, ಕಾಲೇಜು ಶಿಕ್ಷಣ, ಉನ್ನತ ಪದವಿಗಳನ್ನು ಪಡೆದ ಸದಸ್ಯರನ್ನು

ಕಾಣಬಹುದಾಯಿತು. ಬೆಂಗಳೂರಿನಂತಹ ನಗರಗಳಲ್ಲಿ ಬಿ.ಇ.ಎಂ.ಎಲ್., ಬಿ.ಇ.ಎಲ್., ಬಿ.ಹೆಚ್.ಇ.ಎಲ್., ಹೆಚ್.ಎ.ಎಲ್., ರೈಲ್ವೇಸ್ ಹಾಗೂ ಸೇನೆ, ನೌಕಾದಳ, ವಾಯುದಳ, ಬಿ.ಎಸ್.ಎಫ್, ಪೊಲೀಸ್ ಇಲಾಖೆ ಮೊದಲಾದ ಕಡೆಗಳಲ್ಲಿ ಉದ್ಯೋಗಗಳನ್ನು ಪಡೆಯಲಾರಂಭಿಸಿದರು. ಇದರಿಂದಾಗಿ ಕೊಡಗಿನ ಗಡಿಯನ್ನು ದಾಟಿ ಸಾವಿರಾರು ಕೊಡಗಿನ ಯುವಕರು ನಗರವಾಸಿಗಳಾಗಲಾರಂಭಿಸಿದರು. ಹೀಗಾಗಿ ಕೊಡಗಿನ ಒಕ್ಕಗಳು ಹಿಂದಿನ ಸ್ವರೂಪವನ್ನು ಕಳಚಿಕೊಂಡು ವಿಸ್ತೃತರೂಪವನ್ನು ಪಡೆದುಕೊಂಡದ್ದು ಸ್ಪಷ್ಟವಾಗಿ ಕಾಣಬರುತ್ತದೆ.

ಒಕ್ಕದ ಸದಸ್ಯರು ಒಂದೇ ಸೂರಿನಡಿಯಲ್ಲಿ ಬಾಳುತ್ತಿದ್ದರು. ಪರಸ್ಪರ ಹೊಂದಾಣಿಕೆ ಇರುವಂತೆಯೇ ವೈಷಮ್ಯವೂ ೧೮೦೦ರ ಆರಂಭದ ದಶಕಗಳಲ್ಲಿ ಪ್ರಾರಂಭವಾಗಿ ೧೮೪೦-೫೮ರ ಹೊತ್ತಿಗೆ ಒಕ್ಕದ ಆಸ್ತಿ ವಿಭಜನೆಯಲ್ಲಿ ಪರ್ಯವಸಾನಗೊಂಡಿದ್ದನ್ನು ಗಮನಿಸಿದ್ದೇವೆ. ಈ ವೈಷಮ್ಯತೆಗೆ ೧೮೪೦-೫೮ರ ಅವಧಿಯಲ್ಲಿ ಉಂಟಾದ ಒಕ್ಕದ ಆಸ್ತಿ ವಿಭಜನೆ ವಿಚಾರಗಳು ವೈಷಮ್ಯತೆಗೆ ಕಾರಣಗಳಿರಬಹುದು. ಒಕ್ಕದ ವೈರುಧ್ಯವೆಂದರೆ ವೈಷಮ್ಯಗಳು ಕಾಣುವಂತೆಯೇ ಇಂದು ಒಲವುಗಳು ಕೂಡ ಹೆಚ್ಚಾಗಿರುವುದನ್ನೂ ಕಾಣಬಹುದು. ಇದು ಒಕ್ಕಗಳು ಅಳಿಯದೇ ವಿಸ್ತೃತವಾದುದಕ್ಕೆ ಸಾಕ್ಷಿ.

ಔಪಚಾರಿಕ ಶಿಕ್ಷಣದ ಕಾರಣದಿಂದಾಗಿ ಕೊಡಗಿನ ಬಹುಪಾಲು ಜನ ಉದ್ಯೋಗವನ್ನು ಅರಸಿ ನಗರಗಳಿಗೆ ಬಂದು ನೆಲೆ ನಿಂತರು. ಹಲವರು ವಿದೇಶಗಳಿಗೆ ಹೋಗಿ ನೆಲೆಸಿದರು. ದೂರ ದೇಶಗಳಿಗೆ, ದೂರದ ಊರುಗಳಿಗೆ ಹೋಗಿ ನೆಲೆಸಿದರೂ ತಮ್ಮ ತಮ್ಮ ಮನೆತನದ ಬಗೆಗಿನ ಒಲವನ್ನು ಅವರು ಕಳೆದುಕೊಳ್ಳಲಿಲ್ಲ. ಇನ್ನೂ ಹೆಚ್ಚಾಗಿಯೇ ತಮ್ಮ ಒಕ್ಕದ ಮೇಲಿನ ಪ್ರೀತಿಯನ್ನು ಹೊಂದಿದ್ದರು. ಬೆಂಗಳೂರು, ಮೈಸೂರು, ಮಂಗಳೂರು, ಮುಂಬೈ, ಹೈದರಾಬಾದ್, ಮದರಾಸು, ದೆಹಲಿಗಳಂತಹ ನಗರಗಳಲ್ಲಿ ನೆಲೆಸಿದ ಕೊಡವರು ಕೊಡವ ಸಮಾಜ/ಸಂಘಗಳನ್ನು ಸ್ಥಾಪಿಸಿಕೊಂಡರು. ಇವು ಸಾಂಪ್ರದಾಯಿಕ ನಾಡಿನ ಕಲ್ಪನೆಗಿಂತ ಭಿನ್ನವಾದ ವ್ಯವಸ್ಥೆ ಹೊಂದುವ ಚಾರಿತ್ರಿಕ ವಿಷಯವಾಗಿದೆ.

ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶವೆಂದರೆ ಒಕ್ಕದ ಒಲವು ಸಾಮುದಾಯಿಕ ಒಲವಾಗಿ ಬೆಳೆದ ರೀತಿ. ಒಕ್ಕಗಳು ಅವನತಿ ಹೊಂದಿದವು ಎನ್ನುವ ಕಾಲದಲ್ಲಿಯೇ ದೂರದೂರುಗಳಲ್ಲಿರುವ ಜನ ತಮ್ಮ ಒಕ್ಕಗಳ ಬಗೆಗೆ ಯೋಚಿಸುವ, ಕರುಳುಬಳ್ಳಿ ಸಂಬಂಧಗಳನ್ನು ಕಟ್ಟಿಕೊಳ್ಳುವ ಕ್ರಿಯೆಯಲ್ಲಿ ತೊಡಗಿರುವುದು ಒಕ್ಕಗಳು ವಿಸ್ತರಿಸಿದ ವಿಷಯವನ್ನು ಬಿಂಬಿಸುತ್ತದೆಯೇ ಹೊರತು ಒಕ್ಕಗಳು ಅಳಿದುದನ್ನಲ್ಲ. ಕೌಟುಂಬಿಕ ಒಲವು ಸಾಮುದಾಯಿಕ ಒಲವಾಗಿ ಬೆಳೆದ ಬಗೆಯೂ ಇಲ್ಲಿ ಮುಖ್ಯವಾಗುತ್ತದೆ. ಬೆಂಗಳೂರಿನಂತಹ ನಗರಗಳಲ್ಲಿ ನೆಲೆಸಿದ ಸಾವಿರಾರು ಕೊಡವರು ನಗರದ ವಾತಾವರಣದ ಒಳಗೂ ಸಂಜಯನಗರ, ವಿದ್ಯಾರಣ್ಯಪುರ, ಸುಲ್ತಾನ್ ಪಾಳ್ಯ, ಪೀಣ್ಯ ದಾಸರಹಳ್ಳಿ, ಕೃಷ್ಣರಾಜಪುರ, ರಾಜಾಜಿನಗರ, ಜಯನಗರ ಮುಂತಾದ ಮೂವತ್ತೆರಡು

ಭಾಗಗಳಲ್ಲಿ ಕೊಡವ ಸಂಘಗಳನ್ನು ಸ್ಥಾಪಿಸಿ ಕೊಡವರ ಕ್ಷೇಮಾಭಿವೃದ್ಧಿಯಲ್ಲಿ ತೊಡಗಿರುವುದು ಗಮನಾರ್ಹವಾದ ಬೆಳವಣಿಗೆಯಾಗಿದೆ. ಇಲ್ಲಿ ಮುಖ್ಯವಾಗಿ ಗುರುತಿಸಬೇಕಾದ ಅಂಶವೇನೆಂದರೆ ಕೊಡವರು ಒಂದು ಪ್ರಬಲ ಸಮುದಾಯವಾಗಿ ಹೊರಹೊಮ್ಮಿದುದು. ಭೂಹಿಡುವಳಿ, ಇಂಗ್ಲೀಷ್ ವಿದ್ಯಭ್ಯಾಸ, ಹೆಚ್ಚಿನ ಜನಸಂಖ್ಯೆ ಮತ್ತು ಅಧಿಕಾರಕ್ಕೆ ಶತಮಾನಗಳಿಂದ ಹತ್ತಿರ ಇದ್ದುದರಿಂದ ಊರ್ಧ್ವಮುಖಿಯಾದ ಚಲನಶೀಲತ್ವವನ್ನು ಉಳಿಸಿಕೊಂಡು ಕೊಡವ ಸಮುದಾಯ ಬೆಳೆಯುವುದರಲ್ಲಿ ಸಫಲವಾಯಿತು ಅಥವಾ ಸ್ಥಿತ್ಯಂತರಗೊಂಡಿತು ಎನ್ನಬಹುದು.

ಒಕ್ಕ ಪದ್ಧತಿಯನ್ನು ಕುರಿತು ಮಾತನಾಡುವಾಗ ಹೇಳುವ ಎಲ್ಲಾ ಅಂಶಗಳು ಈಗ ವಿಸ್ತೃತ ಪರಿಧಿಯಲ್ಲಿ ಒಕ್ಕಗಳು ಬೆಳೆದಿರುವುದನ್ನು ಸ್ಪಷ್ಟವಾಗಿಯೇ ಗುರುತಿಸಬಹುದು. ಮನೆತನದ ಸದಸ್ಯರು ದೂರದಲ್ಲಿದ್ದರೂ ತಮ್ಮ ಮನೆತನದ ಗೌರವ ಕಾಪಾಡುವಲ್ಲಿ ತನ್ನ ಮನೆತನದ ಬಗೆಗೆ ಹೆಮ್ಮೆಪಡುವಲ್ಲಿ ಒಗ್ಗಟ್ಟನ್ನು ಕಾಣುತ್ತದೆ. ಅಲ್ಲದೆ ಕೊಡವರಂತೆಯೇ 'ಕೊಡವ ಮುಸ್ಲಿಂ ಅಸೋಸಿಯೇಶನ್' ಕೂಡ ಬೆಂಗಳೂರಿನಲ್ಲಿ ಕುವ್ಟೆಂಡ ಹಂಸತುಲ್ಲಾ ಅವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಕೊಡಗು ಗೌಡ ಸಮುದಾಯ, ಹೆಗ್ಗಡೆ ಸಮುದಾಯ, ಐರಿಸಮುದಾಯ ಹಾಗೂ ಇತರ ಸಮುದಾಯಗಳೂ ಅಲ್ಲಲ್ಲಿ ಸಮುದಾಯಗಳನ್ನು, ಸಂಘಸಂಸ್ಥೆಗಳನ್ನು ಕಟ್ಟಿಕೊಂಡಿದ್ದಾರೆ. ಒಂದು ರೀತಿಯಲ್ಲಿ ಹೀಗೆ ಕೊಡಗಿನ ಸಾಂಸ್ಕೃತಿಕ ವೈಶಿಷ್ಟ್ಯಗಳು ತೀವ್ರಗೊಂಡಿರುವುದನ್ನು ಗುರುತಿಸಬಹುದಾಗಿದೆ. ಕೊಡಗಿನ ನೆಲದಿಂದ ದೂರ ಉಳಿದರೂ ಸಾಂಸ್ಕೃತಿಕ ಅನನ್ಯತೆಯನ್ನು ನೆಲೆಯೂರಿದ ನೆಲದಲ್ಲಿಯೇ ಕಟ್ಟಿಕೊಳ್ಳುವ ಮೂಲಕ ಸಾಂಸ್ಕೃತಿಕ ವಲಯಗಳನ್ನು ನಗರಗಳಲ್ಲಿ ಸೃಷ್ಟಿಸಿಕೊಳ್ಳುತ್ತಿರುವುದು ಒಕ್ಕಗಳ ಚಲನಶೀಲತೆ ಮತ್ತು ವಿಕಾಸಕ್ಕೆ ಸಾಕ್ಷಿಯಾಗಿದೆ. ಆದರೂ ಕೂಡ ಕೊಡಗಿನ ಇತರ ಸಮುದಾಯಗಳ ಜನಸಂಖ್ಯೆ ಅಷ್ಟೇನು ಗಣನೀಯವಲ್ಲದಿರುವುದರಿಂದ ಪ್ರಬಲ ವರ್ಗವಾದ ಕೊಡವರಂತೆ ಅಲ್ಲಲ್ಲಿ ಸಂಘಗಳನ್ನು ಕಟ್ಟಿಕೊಳ್ಳಲಾರದ ಅಸಹಾಯಕ ಸ್ಥಿತಿಯನ್ನು ಗಮನಿಸಬಹುದು.

ಈ ಎಲ್ಲಾ ಬೆಳವಣಿಗೆಗಳ ಬೆನ್ನಲ್ಲೇ ಕೊಡಗಿನ ಆಧುನಿಕ ವಿದ್ಯಾವಂತ ಯುವಜನತೆ ತಮ್ಮ ತಾಯಿನಾಡಿನ ಮೇಲೆ ಪ್ರೇಮ ಬೆಳೆಸಿಕೊಂಡಿದ್ದು ಗಮನಾರ್ಹ ವಿಚಾರ. ಕೊಡಗಿನ ಪ್ರತಿಯೊಬ್ಬ ವ್ಯಕ್ತಿಯೂ ಹಲವು ಬಾರಿ ತಮ್ಮ ಊರುಗಳಿಗೆ, ತೋಟಗಳಿಗೆ ಹೋಗಿ ಬರುವ ಪರಿಪಾಟವನ್ನು ರೂಢಿಸಿಕೊಂಡಿದ್ದಾರೆ. ಜಾಗತೀಕರಣದ ಸಂದರ್ಭದಲ್ಲಿ ಐಡೆಂಟಿಟಿ ಕ್ರೈಸಿಸ್ ಸೃಷ್ಟಿಸಿದ ಅನನ್ಯತೆಯ ಬಿಕ್ಕಟ್ಟು ಮತ್ತು ಕೆಲವು ಆಧುನಿಕತೆಯ ವಿಚಾರಗಳು ಕೊಡಗರನ್ನು ತಮ್ಮ ಅಳಿವು ಉಳಿವಿನ ಬಗೆಗೆ ಚಿಂತನೆ ಮಾಡಲು ಪ್ರೇರೇಪಿಸಿದವು.

* * *

ಲಿಂಗಾಯತ ಅರಸರ ಆಗಮನದ ಪೂರ್ವದಲ್ಲಿ ಕೊಡಗಿನ ಸಂಸ್ಕೃತಿಯ ಮೇಲೆ ಮಲಬಾರ್ ಪ್ರಾಂತ್ಯದ ಪ್ರಭಾವ ತೀವ್ರವಾಗಿತ್ತು. ಬಹುಶಃ ಲಿಂಗಾಯತ ಅರಸರು ಕೊಡಗಿನಲ್ಲಿ ಆಳ್ವಿಕೆ

ನಡೆಸದಿದ್ದಲ್ಲಿ ಇಂದಿನ ಕೊಡಗು ಕೇರಳದ ಜೊತೆಗೆ ತನ್ನ ಅನನ್ಯತೆಯನ್ನು ಗುರುತಿಸಿಕೊಳ್ಳುತ್ತಿತ್ತೆಂದು ಕಾಣುತ್ತದೆ. ವಸಾಹತು ಕಾಲಘಟ್ಟದಲ್ಲಿ ಕೊಡಗಿನ ಸಂಸ್ಕೃತಿಯ ಮೇಲೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ತೀವ್ರವಾಯಿತು. ಅವರ ವೇಷಭೂಷಣ, ಮ್ಯಾನರಿಸಂ, ಮನೆಯೊಳಗಿನ ಪೀಠೋಪಕರಣ ಗಳು, ಅಲಂಕರಣ, ಆಹಾರ ಮತ್ತು ಪಾನೀಯ ಮೊದಲಾದವುಗಳ ಮೇಲೆ ಪ್ರಭಾವಗಳನ್ನು ಗುರುತಿಸಬಹುದು. ಈ ರೀತಿಯ ಪ್ರಭಾವ ಪ್ರೇರಣೆಗಳನ್ನು ಮೇಲ್ವರ್ಗ ಮತ್ತು ಮಧ್ಯಮವರ್ಗದ ಕೃಷಿಕೇಂದ್ರಿತ ಸಮುದಾಯಗಳಲ್ಲಿ ಗಮನಿಸಬಹುದು. ಇದು ಒಕ್ಕದ ಆಂತರಿಕ ಸ್ವರೂಪದ ಮೇಲೂ ಪರಿಣಾಮ ಬೀರಿದೆ.

ಕೊಡಗಿನ ಒಕ್ಕಗಳ ಹಿಗ್ಗುವಿಕೆ ಮತ್ತು ಕುಗ್ಗುವಿಕೆಯಲ್ಲಿ ಅನೇಕ ಚಾರಿತ್ರಿಕ ಅಂಶಗಳನ್ನು ಗಮನಸಿದ್ದೇವೆ. ಎರಡು ಹಂತಗಳಲ್ಲಿ ಒಕ್ಕಗಳ ವಿಘಟನೆ ಆರಂಭವಾಯಿತು. ಒಂದು ೧೯ನೆಯ ಶತಮಾನದ ಆರಂಭದಲ್ಲಿ, ಮತ್ತೊಂದು ೨೦ನೆಯ ಶತಮಾನದ ಆರಂಭದಲ್ಲಿ. ವಿಘಟನೆಗೆ ಬಾಹ್ಯಕಾರಣಗಳೇನೇ ಇರಲಿ, ಒಕ್ಕಗಳು ಹಿಗ್ಗಿದಂತೆಲ್ಲ ಅವುಗಳ ಸದಸ್ಯರ ನಡುವೆ ಆಂತರಿಕ ಐಕ್ಯತೆಗೆ ಧಕ್ಕೆಯಾಗುತ್ತಿದ್ದುದು ಆಂತರಿಕ ಕಾರಣವೆಂದು ಪರಿಗಣಿಸಬೇಕಾಗುತ್ತದೆ. ಅನೇಕ ಅಡೆತಡೆಯ ನಡುವೆಯೂ ತನ್ನ ಮೂಲದ್ರವ್ಯವನ್ನು ಕಾಪಾಡಿಕೊಂಡು ಬಂದಿದ್ದ ಕೊಡಗಿನ ಸಂಸ್ಕೃತಿ ಇಂದು ಬದಲಾವಣೆಯ ಕಾಲಘಟ್ಟದಲ್ಲಿ ನಿಂತಿದೆ. ಈ ಹಿನ್ನೆಲೆಯಲ್ಲಿ "ಆಧುನಿಕ ಮತ್ತು ಜಾಗತೀಕರಣದ ಕಾರಣದಿಂದ ಕೊಡಗಿನ ಸಂಸ್ಕೃತಿಯು ಸಾವಿರಾರು ವರ್ಷಗಳಿಂದ ಕಾಪಾಡಿಕೊಂಡು ಬಂದ ಮೌಲ್ಯಗಳು ಕಣ್ಮರೆಯಾಗುತ್ತಿದ್ದು, ಹೊಸ ಮೌಲ್ಯಗಳು ತಲೆ ಎತ್ತುತ್ತಿರುವ ಸಂಕ್ರಮಣ ಕಾಲ ಇದು" ಎಂದು ಕಾವೇರಿ ಪೊನ್ನಪ್ಪ ಗುರುತಿಸುತ್ತಾರೆ(ಕಾವೇರಿ, ೨೦೧೩:೨೩). ಭೂಮಿಗೆ ಸಂಬಂಧಿಸಿದಂತೆ ಸರ್ಕಾರಗಳು ಜಾರಿಗೆ ತರುತ್ತಿರುವ ಹೊಸ ಕಾನೂನುಗಳು ಕೂಡ ತಲೆತಲಾಂತರಗಳಿಂದ ಅನುಭವಿಸಿಕೊಂಡು ಬರುತ್ತಿದ್ದ ಜಮೀನುಗಳ ಜೊತೆಜೊತೆಗೆ ಸಾಂಸ್ಕೃತಿಕ ಪರಂಪರೆಗಳ ಮೇಲೆ ಭಾರಿ ಹೊಡೆತವನ್ನು ಆಧುನಿಕತೆ ಮತ್ತು ಜಾಗತೀಕರಣಗಳು ನೀಡುತ್ತಿವೆ (ಕಾವೇರಿ, ೨೦೧೩:೨೩).

ಭೂಮಿಯನ್ನು ಕಳೆದುಕೊಂಡವರು ಒಂದು ಕಡೆಯಾದರೆ, ಉದ್ಯೋಗವನ್ನು ಅರಸುತ್ತಾ ವಿಶ್ವನಾಗರಿಕರಾದ ಕೃಷಿಕೇಂದ್ರಿತ ಸಮುದಾಯಗಳು ಇವರೆಲ್ಲರೂ ಮತ್ತೊಂದು ಕಡೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ನಾವು ಈಗಾಗಲೇ ಕೊಡಗಿನ ಸಮಾಜದಲ್ಲಿ ಗುರುತಿಸಿದ ಮೂರು ಮುಖ್ಯ ಅಂಗಗಳಾದ ಕೃಷಿಕೇಂದ್ರಿತ ಸಮುದಾಯ, ಕುಶಲಕರ್ಮಿ ಸಮುದಾಯ ಮತ್ತು ಕೃಷಿಕಾರ್ಮಿಕ ಸಮುದಾಯಗಳು ಸ್ವಾತಂತ್ರ್ಯಾನಂತರ ಅದರಲ್ಲೂ ಮುಖ್ಯವಾಗಿ ಜಾಗತೀಕರಣ ಸಂದರ್ಭದಲ್ಲಿ ಹೇಗೆ ಒಂದು ಚಲನಶೀಲ ಪ್ರಕ್ರಿಯೆಗೆ ಒಳಗಾಯಿತು ಎಂಬುದು. ಕೃಷಿಕೇಂದ್ರಿತ ಸಮುದಾಯಗಳಲ್ಲಿಯೂ ಮೇಲ್ವರ್ಗ, ಮಧ್ಯಮವರ್ಗ ಮತ್ತು ಕೆಳಮಧ್ಯಮ ವರ್ಗವೆಂಬ ಭಿನ್ನತೆಗಳನ್ನು ಗುರುತಿಸಬಹುದು. ಇವರೆಲ್ಲರೂ ಒಂದು ಕಾಲಕ್ಕೆ ಕೃಷಿಯೇ ಪ್ರಧಾನವಾಗಿದ್ದ ಜೀವನಕ್ರಮವನ್ನು

ಕ್ರಮೇಣ ಬದಿಗಿರಿಸಿ ಜಾಗತೀಕರಣದ ಸಂದರ್ಭದಲ್ಲಿ ತಮ್ಮ ಸಂಸ್ಕೃತಿಗಿಂತ ಭಿನ್ನವಾದ ಜೀವನಕ್ರಮವನ್ನು ಅನುಸರಿಸುತ್ತಿರುವುದನ್ನು ಕಾಣಬಹುದು. ಹಾಗೆಯೇ ಕುಶಲಕರ್ಮಿ ಸಮುದಾಯಗಳೂ ಕೂಡ ತಮ್ಮ ಸಾಂಪ್ರದಾಯಿಕ ವಿದ್ಯೆ, ಕಲೆಗಳನ್ನು ಕ್ರಮೇಣ ಮರೆತು ನಗರಗಳ ಸಂಕೀರ್ಣ ಬದುಕಿಗೆ ಹೊಂದಿಕೊಂಡಿದ್ದಾರೆ ಮತ್ತು ಕೃಷಿಕಾರ್ಮಿಕರೂ ಕೂಡ ವಿದ್ಯಾಭ್ಯಾಸ, ಮೀಸಲಾತಿ, ಆಧುನಿಕ ಜೀವನಶೈಲಿ, ಶೋಷಿತಪ್ರಜ್ಞೆ ಮೊದಲಾದ ಕಾರಣಗಳಿಂದಾಗಿ ಶತಮಾನಗಳಿಂದ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಮುಖ್ಯಪಾತ್ರವಹಿಸಿದ್ದ ಜೀವನಕ್ರಮವನ್ನು ದಾಟಿ ಪ್ರಜ್ಞಾವಂತ ಹಾಗೂ ಸಮಾನತೆಯೆಂಬ ಬದುಕನ್ನು ಕಂಡುಕೊಳ್ಳುತ್ತಿದ್ದಾರೆ. ಹಾಗಾಗಿ ಕೊಡಗಿನ ಒಕ್ಕಗಳ ಸಂಸ್ಕೃತಿ ಮತ್ತು ಸಾಂಪ್ರದಾಯಿಕ ಮೌಲ್ಯಗಳು ಶಿಥಿಲಗೊಳ್ಳುತ್ತಿವೆ. ಇವರೆಲ್ಲರೂ ಮೂಲಬೇರಿನಿಂದ ಕಳಚಿಕೊಂಡು ದೂರ ಉಳಿದಿರುವುದು ತನ್ನ ಅನನ್ಯತೆಯನ್ನೇ ಕಳೆದುಕೊಂಡಂತಾಗಿದೆ ಎಂಬುದು ಜನಜನಿತ ವಿಚಾರವಾಗಿದೆ. ಆದ್ದರಿಂದ ಇವರು ತಮ್ಮ ಮೂಲಬೇರನ್ನರಸಲು ಸನ್ನದ್ಧರಾಗಿದ್ದು, ಸಂಘಟಿತರಾಗುತ್ತಿರುವುದು ಇತ್ತೀಚಿನ ವಿದ್ಯಮಾನವಾಗಿದೆ.

ಸಮಾಜಶಾಸ್ತ್ರಜ್ಞರು ವಿವರಿಸುವ ಅವಿಭಕ್ತ ಕುಟುಂಬ ಕೊಡಗಿನ ಒಕ್ಕ ಸ್ವಾಮ್ಯತೆಯನ್ನು ಸಾಧಿಸಿದೆ ಎಂಬ ಕಾರಣಕ್ಕೆ ಅವಿಭಕ್ತ ಕುಟುಂಬದಲ್ಲಿ ಕೊಡಗಿನ ಒಕ್ಕವನ್ನು ಸಮೀಕರಿಸಿಕೊಳ್ಳಲಾಗಿದೆ. ಆದರೆ ಕೊಡಗಿನ ಒಕ್ಕವು ಅವಿಭಕ್ತ ಕುಟುಂಬದ ಆಳ, ಅಗಲಗಳನ್ನು ಮೀರಿದ ಒಂದು ವೈಶಿಷ್ಟ್ಯತೆಯನ್ನು ಕೊಡಗಿನ ಪರಿಸರದಲ್ಲಿ ಹೊಂದಿರುವುದನ್ನು ಈ ಹಿಂದೆ ಮನಗಂಡಿದ್ದೇವೆ. ಹೀಗೆ ಒಕ್ಕ ಒಕ್ಕಗಳು ಸೇರಿ ನಿರ್ಮಾಣವಾದ ಸಮಾಜದಲ್ಲಿನ ವಿವಿಧ ಸಮುದಾಯಗಳೊಂದಿಗಿನ ಸಂಬಂಧಗಳನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ನೋಡಲಾಗುವುದು.

**ಕೊನೆ ಟಿಪ್ಪಣಿಗಳು**

೧. ಕೆಂಬಟ್ಟಿ – ಎಂದರೆ ಕೊಡಗಿನ ತಳವರ್ಗದ ಸಮುದಾಯಗಳಲ್ಲಿ ಒಂದು. ಕೊಡಗಿನ ಸಂಸ್ಕೃತಿ ಈ ಸಮುದಾಯದಿಂದ ಆರಂಭವಾಯಿತು ಎನ್ನುವ ಮಾತಿದೆ. ಅರಸರ ಕಾಲದಲ್ಲಿ ಭೂಮಿ ಜಮ್ಮದಾಳುಗಳು ಎಂದು ಇವರನ್ನು ಗುರುತಿಸುತ್ತಿದ್ದರು.

೨. ಅಣ್ಣಿಕುಟ್ಟಡ – ಎಂದರೆ ಕೆಂಬಟ್ಟಿ ಸಮುದಾಯದ ಒಕ್ಕ ಒಂದರ ಹೆಸರು.

೩. ಭೂಮಿ ಜಮ್ಮದಾಳುಗಳು – ಅರಸರ ಕಾಲದಲ್ಲಿ ಭೂಮಿ ಜಮ್ಮದಾಳುಗಳು ಭೂಮಿಯೊಡನೆ ಬರುವ ಜೀತದಾಳುಗಳು. ಭೂಮಿಯನ್ನು ಯಾರೇ ಕೊಂಡುಕೊಂಡರೂ ಆಳುಗಳು ಭೂಮಿಯೊಡನೆ ಇರುತ್ತಿದ್ದರು. ಬಿಟ್ಟು ಹೋದ ಒಡೆಯನ ಜೊತೆಗೆ ಹೋಗುತ್ತಿರಲಿಲ್ಲ.

೪. ಒಕ್ಕಲು ಜಮ್ಮದಾಳುಗಳು – ಈ ವರ್ಗದ ಆಳುಗಳಿಗೆ ಭೂಮಿಯೊಡನೆ ಭಾವನಾತ್ಮಕ ಸಂಬಂಧ ಇರುವುದಿಲ್ಲ. ಬದಲಾಗಿ ಒಡೆಯನೊಡನೆ ಭಾವನಾತ್ಮಕ ಸಂಬಂಧವಿತ್ತು. ಒಕ್ಕವು ಸ್ಥಳಾಂತರಗೊಂಡಾಗ ಈ ಆಳುಗಳು ಅವರನ್ನು ಹಿಂಬಾಲಿಸುತ್ತಿದ್ದರು.

೫. ಪನ್ನಂಗಾಲತಮ್ಮೆ – ಕೆಂಬಟ್ಟಿ ಸಮುದಾಯದವರ ಆರಾಧ್ಯ ದೇವತೆ. ಕೊಡಗಿನ ಪ್ರಮುಖ ದೇವರಾದ ಇಗ್ಗುತ್ತಪ್ಪನ ಸೋದರಿ. ಇಗ್ಗುತ್ತಪ್ಪ ಮೇಲ್ವರ್ಗದ ಸಮುದಾಯಗಳ ಆರಾಧ್ಯ ದೇವರು.

೬. ತರವಾಡು – ಕೇರಳದ ನಾಯರ್ ಸಮುದಾಯದ ಅವಿಭಕ್ತ ಕುಟುಂಬಗಳ ಮನೆ.

೭. ಇಲ್ಲಂ – ಕೇರಳದ ನಂಬೂದ್ರಿ ಸಮುದಾಯದ ಅವಿಭಕ್ತ ಕುಟುಂಬಗಳ ಮನೆ.

೮. ಮಿಲಿಟರಿ ಸೇವೆ – ಕೊಡಗಿನ ಅರಸರ ಕಾಲದಲ್ಲಿ ಮತ್ತು ಬ್ರಿಟಿಷ್ ಆಡಳಿತದಲ್ಲಿ ಜಮ್ಮ ಹಿಡುವಳಿಯ ತೆರಿಗೆ ವಿನಾಯಿತಿಯ ಫಲವಾಗಿ ಕೊಡಗಿನ ಕೃಷಿಕೇಂದ್ರಿತ ಸಮುದಾಯಗಳು ತಿಂಗಳಲ್ಲಿ ಹದಿನೈದು ದಿನ ಮಾಡಬೇಕಾಗಿದ್ದ ಅರಮನೆಯ ಚಾಕರಿಯನ್ನು ಮಿಲಿಟರಿ ಸೇವೆ ಎನ್ನುತ್ತಿದ್ದರು(ಹೆಚ್ಚಿನ ಮಾಹಿತಿಗಾಗಿ– ಆಧುನಿಕ ಕೊಡಗು, ೨೦೦೦, ವಿಜಯ್ ಪೂಣಚ್ಚ ತಂಬಂಡ).

೯. ಮಾಹಿತಿದಾರರು – ಜೈನಿರ ಗನ್ನಿ, ವಯಸ್ಸು ೫೦, ಚೆಯ್ಯಂಡಾಣೆ ಕೊಡಗು, ದಿನಾಂಕ ೧೮.೨.೨೦೧೪.

೧೦. ಕೊರವುಕಾರ – ಒಕ್ಕ ಅಥವಾ ಅವಿಭಕ್ತ ಕುಟುಂಬದ ಹಿರಿಯ.

೧೧. ಕೊರವುಕಾರ್ತಿ – ಕೊಡಗಿನ ಅವಿಭಕ್ತ ಕುಟುಂಬದ ಹಿರಿಯನ ಹೆಂಡತಿ.

೧೨. ಅರಿವವನೇ ಪೆರಿಯಂವ – ತಿಳುವಳಿಕೆಯುಳ್ಳವನೇ ಹಿರಿಯವನು ಎಂದು ಅರ್ಥ. ಕೊಡಗಿನ ಒಕ್ಕಗಳಲ್ಲಿ ಒಕ್ಕದ ಹಿರಿಯ ಸಮರ್ಥನಲ್ಲದಿದ್ದರೆ, ಒಕ್ಕದ ಕಿರಿಯ ಸದಸ್ಯನಾದರೂ ತಿಳುವಳಿ ಇರುವವನೂ, ಸಮರ್ಥನೂ ಒಕ್ಕದ ಜವಾಬ್ದಾರಿ ಹೊರಬೇಕಾಗಿತ್ತು.

೧೩. ಗುತ್ತು – ದಕ್ಷಿಣ ಕನ್ನಡದ ಬಂಟ ಸಮುದಾಯದ ಅವಿಭಕ್ತ ಕುಟುಂಬ ಮತ್ತು ಅದಕ್ಕೆ ಸಂಬಂಧಪಟ್ಟ ಆಸ್ತಿಗಳು.

೧೪. ಅರುವ – ಕಷ್ಟ ಸುಖಗಳಲ್ಲಿ ಭಾಗಿಯಾಗುವ ನೆರೆಯ ಗೆಳೆಯ ಒಕ್ಕ.

೧೫. ಜಮ್ಮ, ಜಾಗೀರು, ಉಂಬಳಿ, ಸಾಗು, ಗೇಣಿ ಮೊದಲಾದ ವಿವಿಧ ರೀತಿಯ ಭೂಹಿಡುವಳಿಗಳು ಲಿಂಗಾಯತ ರಾಜರ ಕಾಲದಿಂದ ಹರಿದುಬಂದು ಬ್ರಿಟಿಷ್ ಆಡಳಿತದ ಮೂಲಕ ಸ್ವಾತಂತ್ರ್ಯೋತ್ತರದ ಇಂದಿನ ಕಾಲದವರೆಗೆ 'ಒಕ್ಕ'ದ ಸಂಸ್ಕೃತಿಯು ನಾಶ ಹೊಂದದಂತೆ ನಿಯಂತ್ರಿಸುತ್ತದೆ. ಪ್ರತಿ 'ಒಕ್ಕ'ದ ಅಸ್ತಿತ್ವವೂ ಈ ಭೂಹಿಡುವಳಿಗಳಿಗೆ ಹೊಂದಿಕೊಂಡೇ ಉಳಿದುಕೊಂಡವು. ಜಮೀನು ಇಲ್ಲದೆ 'ಒಕ್ಕ'ದ ಅಸ್ತಿತ್ವವಿಲ್ಲ. ಇದೇ ಕೊಡಗಿನ ಸಂಸ್ಕೃತಿಯ ಮೂಲ. ಕೊಡಗಿನ 'ಒಕ್ಕ' ಸಂಸ್ಕೃತಿಯಲ್ಲಿ ಕೊಡವೇತರ ಒಕ್ಕಗಳಿಗೂ 'ಜಮ್ಮ' ಭೂಹಿಡುವಳಿ ಇದೆ. ಇದಕ್ಕೆ ಸಂಬಂಧ ಪಟ್ಟ ವಿಶೇಷ ಸವಲತ್ತುಗಳಲ್ಲಿ ಒಂದಾದ ಕೋವಿಯ 'ವಿನಾಯಿತಿ ಪ್ರಮಾಣಪತ್ರ' ದೇಶದ ಉಳಿದೆಡೆ ಕಾಣಸಿಗುವುದಿಲ್ಲ. ಈ ರೀತಿಯ ಸವಲತ್ತುಗಳು ಕೊಡವ ಮತ್ತು ಕೊಡವೇತರರಾದ ಕೊಡವರ 'ಒಕ್ಕ'ಗಳಿಗೆ ಕೊಡಗಿನ ರಾಜರ ಆಳ್ವಿಕೆಯ ಅವಧಿಯಿಂದಲೇ ಬಂದವುಗಳಾಗಿರುತ್ತದೆ. ಈ ರೀತಿಯ ಭೂಹಿಡುವಳಿಗಳು 'ಒಕ್ಕ' ಸಂಸ್ಕೃತಿಯ ಅವಿಭಾಜ್ಯ ಅಂಗವಾಯಿತು. 'ಒಕ್ಕ'ದ ಅಸ್ತಿತ್ವ ಇರುವುದೇ ಈ ರೀತಿಯ ಭೂ ಹಿಡುವಳಿಗಳಲ್ಲಿ. ಪ್ರತಿಯೊಬ್ಬ 'ಒಕ್ಕ'ದೊಳಗಿನ ವ್ಯಕ್ತಿಯೂ ಜಮ್ಮ, ಜಾಗೀರು, ಉಂಬಳಿ ಮೊದಲಾದ ಭೂಹಿಡುವಳಿಗಳಿಗೆ ಹಕ್ಕುದಾರರಾಗಲು ಪ್ರೌಢರಾದ ತಕ್ಷಣವೇ ೬ನೇ ಕಲಂ ಅಥವಾ ೯ನೇ ಕಲಂಗೆ(ರೆವಿನ್ಯೂ ಇಲಾಖೆಯ ದಾಖಲಾತಿ) ಸೇರುವುದು ಅನಿವಾರ್ಯ. ಒಕ್ಕಕ್ಕೆ ಸಂಬಂಧಿಸಿದ ಮೇಲೆ ತಿಳಿಸಿದ ಆಸ್ತಿಗಳ ಮೇಲೆ ಸಾಲ ತೆಗೆಯುವಾಗ, ವಿಭಜನೆಗೆ ಒಳಪಡಿಸುವಾಗ ಮುಂತಾದ ಸಂದರ್ಭಗಳಲ್ಲಿ ೬ ಅಥವಾ ೯ನೇ ಕಲಂಗೆ ನೋಂದಣಿಯಾದ

ಸದಸ್ಯನನ್ನು ಕಡ್ಡಾಯವಾಗಿ ಪರಿಗಣಿಸಬೇಕಾಗುತ್ತದೆ. ಆಧುನಿಕ ಕಾಲಘಟ್ಟದ ಈ ದಿನಗಳಲ್ಲಿಯೂ ಕೂಡ ಅಮೆರಿಕಾದಂತಹ ಪಾಶ್ಚಾತ್ಯ ದೇಶಗಳಲ್ಲಿ 'ಒಕ್ಕ' ಸದಸ್ಯನೊಬ್ಬ ನೆಲೆಸಿದ್ದರೂ ಕೂಡ ಅವನು ತನ್ನ ಒಕ್ಕಕ್ಕೆ ಸಂಬಂಧಪಟ್ಟ ಭೂಮಿಗೆ ಹಕ್ಕುದಾರನಾಗಲು ರೆವಿನ್ಯೂ ಇಲಾಖೆಯ ೯ನೇ ಕಲಂ ಅಥವಾ ೬ನೇ ಕಲಂ ದಾಖಲಾತಿಯಲ್ಲಿ ದಾಖಲಾಗುತ್ತಾನೆಂದರೆ ಒಕ್ಕಲುತನಕ್ಕೂ, ಭೂಮಿಗೂ ಹಾಗೂ ಪ್ರತಿಯೊಬ್ಬ ಒಕ್ಕದ ಸದಸ್ಯನಗೂ ಇರುವ ಸಂಬಂಧವನ್ನು ಊಹಿಸಿಕೊಳ್ಳಬಹುದು. ಒಕ್ಕದಿಂದ ಒಬ್ಬನನ್ನು ಕಾರಣಾಂತರಗಳಿಂದ ಬಹಿಷ್ಕರಿಸಿದರೂ ಒಕ್ಕದ ಹಕ್ಕುದಾರಿಕೆ ಹಾಗೂ ಭೂಮಿಯ ಹಕ್ಕುದಾರಿಕೆಯನ್ನು ಅವನಿಂದ ಕಸಿದುಕೊಳ್ಳಲಾಗದು. ಇದು ಒಕ್ಕ–ವ್ಯಕ್ತಿ–ಒಕ್ಕಲುತನ–ಜಮ್ಮ–ಜಾಗೀರುಗಳ ಅವಿನಾಭಾವ ಸಂಬಂಧಕ್ಕೆ ಸಾಕ್ಷಿ.

ಒಂದು ಕಾಲದಲ್ಲಿ ಒಕ್ಕಲುತನವನ್ನೇ ಅವಲಂಬಿಸಿದ್ದ ಒಕ್ಕಮಕ್ಕಳು ತಮ್ಮ ಒಕ್ಕದ ಭೂಮಿಯೊಂದಿಗೆ ಗಾಢವಾದ ಸಂಬಂಧವನ್ನು ಹೊಂದಿದ್ದರು. ಭೂಮಿಯ ಜೊತೆಗೆ ಒಕ್ಕದ ಸದಸ್ಯನ ನಾಭಿ ಸಂಬಂಧವನ್ನು ಕಲ್ಪಿಸಲಾಗುತ್ತಿತ್ತು. ಆದರೆ, ಇಂದು ನಾಭಿ ಸಂಬಂಧ ಅಂದರೆ ಆತನಿಗೂ, ಆ ಭೂಮಿಗೂ ನಿಕಟಸಂಬಂಧವಿರಬೇಕೆಂಬ ಭಾವನೆ ಕಡಿಮೆಯಾಗಿದ್ದು, ಸಂಬಂಧಗಳಲ್ಲಿ ಪಲ್ಲಟಗೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಅಂದರೆ, ವರ್ತಮಾನದ ಸಂದರ್ಭದಲ್ಲಿ ಮೂಲ ಒಕ್ಕಲುತನದಿಂದ ದೂರ ಉಳಿದ ಕೊಡವರು, ತಮ್ಮ ಮಕ್ಕಳು ಉತ್ತಮ ಶಿಕ್ಷಣ ಪಡೆದು ಉನ್ನತ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸಬೇಕೆಂದು ಬಯಸುತ್ತಾರೆ. ಆದ್ದರಿಂದ ತಮ್ಮ ಹಿರಿಯ ಮಗನು ಜನಿಸಿದಾಗ ಕತ್ತರಿಸಿದ ನಾಭಿಬಳ್ಳಿಯನ್ನು ತಮ್ಮ ಅಪೇಕ್ಷೆಯ ಅಥವಾ ಕನಸಿನ ಸಂಸ್ಥೆಗಳ ಆವರಣದಲ್ಲಿ, ಇಲ್ಲವೇ ಉತ್ತಮ ವಿದ್ಯಾಸಂಸ್ಥೆಯ ಆವರಣದಲ್ಲಿ ಹೂಳಿಡುವ ಸಂಪ್ರದಾಯವೂ ಕೊಡವರಲ್ಲಿದೆ. ಇಂತಹ ವಿಭಿನ್ನ ಪದ್ಧತಿಯನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅರಿಯಲಾಗಿದೆ. ಇದು ಭೂಮಿಯ ಬಗೆಗಿದ್ದ ಕೊಡವರ ಒಲವಿನಲ್ಲಾದ ಬದಲಾವಣೆ ಎಂದು ಭಾವಿಸಬಹುದಾಗಿದೆ.

೧೬. ಜಹಗೀರು – ಕೊಡಗಿನ ಒಂದು ಭೂಹಿಡುವಳಿಯ ಪ್ರಕಾರ.

೧೭. ಮಾಹಿತಿದಾರರು – ನಡಿಕೇರಿಯಂಡ ವಿಠಲ ಚಿಣ್ಣಪ್ಪ, ವಯಸ್ಸು ೬೩, ಪಾಲಂಗಾಲ ಗ್ರಾಮ, ಕೊಡಗು ಜಿಲ್ಲೆ, ದಿನಾಂಕ ೬.೯.೨೦೧೨.

೧೮. ಗುರುಕಾರೋಣ – ಅಂದರೆ ಕುಟುಂಬದ ಮೂಲಪುರುಷ. ಕುಟುಂಬದ ಅಥವಾ ಒಕ್ಕದ ಏಳ್ಗೆಗೆ ಮತ್ತು ಬೆಳವಣಿಗೆಗೆ ಕಾರಣಕರ್ತನಾಗಿರುತ್ತಾನೆ. ಕೊಡಗಿನಲ್ಲಿ ಕಂಡುಬರುವ ಕೊಡವ, ಅಮ್ಮಕೊಡವ, ಹೆಗ್ಗಡೆ, ಐರಿ, ಕೋಯವ, ಐಂಬೊಕ್ಕಳು, ಕೆಂಬಟ್ಟಿ ಮೊದಲಾದ ಕೊಡವ ಭಾಷಿಕ ಸಮುದಾಯಗಳು ತಮ್ಮ ಮೂಲ ಪುರುಷನನ್ನು ನಂಬಿ ಪೂಜಿಸುವುದು ವಾಡಿಕೆ.

೧೯. ಕನ್ನಿಮಂಗಲ – ಹೆಣ್ಣು ಮತ್ತು ಗಂಡಿಗೆ ಮೊದಲ ಬಾರಿ ನಡೆಯುವ ಮದುವೆ.

೨೦. ಕೂಡಾವಳಿ – ಹೆಣ್ಣು ಅಥವಾ ಗಂಡಿಗೆ ಎರಡನೇ ಅಥವಾ ಅದಕ್ಕಿಂತ ಹೆಚ್ಚಿನ ಬಾರಿ ನಡೆಯುವ ಮದುವೆ.

೨೧. ಒಕ್ಕಪರಿಜೆ – ಒಂದು ಒಕ್ಕದಲ್ಲಿ ಗಂಡು ಸಂತಾನವಿಲ್ಲದಿದ್ದು, ಹೆಣ್ಣು ಮಕ್ಕಳು ಮಾತ್ರ ಇದ್ದರೆ ಅಂತಹ ಕುಟುಂಬಕ್ಕೆ ಇನ್ನೊಂದು ಒಕ್ಕದಿಂದ ಗಂಡನ್ನು ತಂದು ಹೆಣ್ಣಿಗೆ ಮದುವೆ ಮಾಡಿಸಿ, ಆ ಒಕ್ಕದ ಸಂತಾನೋತ್ಪತ್ತಿ ಮತ್ತು ಒಕ್ಕದ ಮುಂದುವರಿಕೆಗೆ ಮಾಡುವ ವ್ಯವಸ್ಥೆ.

೨೨. ಮಕ್ಕಪರಿಜೆ – ಗಂಡು ಸಂತಾನವಿಲ್ಲದ ಒಕ್ಕದ ಹೆಣ್ಣುಮಗಳನ್ನು ಮದುವೆಯಾಗುವ ಗಂಡು ತನ್ನ ಒಕ್ಕದ ಹಕ್ಕನ್ನು ಕಳೆದುಕೊಳ್ಳದೇ, ಹೆಂಡತಿಯ ಒಕ್ಕದ ಹಕ್ಕನ್ನು ಒಪ್ಪಿಕೊಳ್ಳದೇ ಮದುವೆ ಮಾಡಿಕೊಳ್ಳಬಹುದು. ಆದರೆ ಇಂತಹ ಮದುವೆಯಲ್ಲಿ ಹುಟ್ಟುವ ಮಕ್ಕಳು ಒಕ್ಕದ ಮುಂದುವರಿಕೆಗೆ ಅರ್ಹರಾಗುತ್ತಾರೆ. ಇದೇ ಮಕ್ಕಪರಿಜೆ

೨೩. ಬೆಂದುಪರಿಜೆ – ಮದುವೆಗೆ ಮುನ್ನ ಗಂಡು ಮತ್ತು ಹೆಣ್ಣು ಒಂದಾಗಿ ಹೆಣ್ಣು ಗರ್ಭಿಣಿಯಾದರೆ ಅಥವಾ ಮಕ್ಕಳು ಮದುವೆಗೆ ಮುನ್ನ ಹುಟ್ಟಿಬಿಟ್ಟರೆ ಅಂತಹ ಸಂದರ್ಭದಲ್ಲಿ ಉಭಯ ಕಡೆಯ ಸಂಬಂಧಿಕರು ಮದುವೆ ತೀರ್ಮಾನ ಮಾಡಿ, ಸಂಬಂಧವನ್ನು ಗಟ್ಟಿಗೊಳಿಸುವ ಪ್ರಕ್ರಿಯೆಯನ್ನು ಬೆಂದುಪರಿಜೆ ಎನ್ನುತ್ತಾರೆ.

೨೪. ಕುಟ್ಟಪರಿಜೆ – ಗಂಡು ಹೆಣ್ಣು ಮದುವೆಗೆ ಮುಂಚೆ ಕೂಡಿ ಹೆಣ್ಣು ಗರ್ಭವತಿಯಾದಾಗ ಅಥವಾ ಮಕ್ಕಳಾದಾಗ ಗಂಡು ತೀರಿ ಹೋದ ಸಂದರ್ಭದಲ್ಲಿ ಸತ್ತವನ ದೇಹವನ್ನು ಮಣ್ಣು ಮಾಡುವ ಮೊದಲು ಹೆಂಡತಿ ಮತ್ತು ಮಕ್ಕಳನ್ನು ಅವನ ಒಕ್ಕಕ್ಕೆ ಸಂಬಂಧ ಕಲ್ಪಿಸಿ ಹಕ್ಕನ್ನು ಸ್ಥಾಪಿಸುವ ಪ್ರಕ್ರಿಯೆ.

೨೫. ಪೈತಾಂಡೆಕಳಪ – ಹತ್ತು ಮಕ್ಕಳನ್ನು ಹಡೆದ ತಾಯಿಗೆ ಸಂಭ್ರಮದಿಂದ ಗೌರವಗಳನ್ನು ಊಟೋಪಚಾರಗಳ ಸಮೇತ ನೀಡುವುದು.

೨೬. ಕೆಮಿಕುತ್ತಿ ಮಂಗಲ – ಕೊಡಗರಲ್ಲಿ ಯುವಕರಿಗೆ ಶುಭ ಮುಹೂರ್ತದಲ್ಲಿ ಕಿವಿ ಚುಚ್ಚುವ ಪ್ರಕ್ರಿಯೆ ಇದೆ. ಮುಖ್ಯವಾಗಿ ಹುಡುಗರು ಯೌವ್ವನಾವಸ್ಥೆಗೆ ಕಾಲಿಟ್ಟಾಗ ಮಾಡುತ್ತಿದ್ದ ಪ್ರಕ್ರಿಯೆ.

೨೭. ನರಿಮಂಗಲ – ಹುಲಿಕೊಂದ ವೀರನಿಗೆ ಸಲ್ಲಿಸುತ್ತಿದ್ದ ಸಂಭ್ರಮ, ಗೌರವ.

೨೮. ಕೊದಿಮಂಗಲ – ದಕ್ಷಿಣ ಕೊಡಗಿನ ಪುತ್ತ್ ಭಗವತಿ ದೇವಸ್ಥಾನ ಮತ್ತು ಉತ್ತರ ಕೊಡಗಿನ ಪೇರೂರಿನ ರಾಟೆದೇವಸ್ಥಾನದಲ್ಲಿ ಚಿಕ್ಕಮಕ್ಕಳಿಗೆ ಮದುವೆ ಮಾಡಿಸುತ್ತೇವೆಂದು ಹರಕೆ ಹೊತ್ತುಕೊಂಡ ಪ್ರಕಾರ ಚಿಕ್ಕ ಹುಡುಗಿಯರಿಗೆ ಗಂಡಸರ ಮದುವೆ ಉಡುಪು, ಹುಡುಗರಿಗೆ ಹೆಣ್ಣಿನ ಮದುವೆ ಉಡುಪು ಉಡಿಸಿ ಮದುವೆ ಮಾಡುವರು. ಇದನ್ನು ಕೊದಿಮಂಗಲ ಎನ್ನುತ್ತಾರೆ.

೨೯. 'ಕುತ್ತಿ' ಎಂದರೆ ವಂಶ. ಒಕ್ಕವೊಂದರ ಮುಂದುವರಿಕೆಗೆ ಮತ್ತೊಂದು ಕುಟುಂಬದ ಗಂಡೊಬ್ಬನನ್ನು ತಂದು ನಿಲ್ಲಿಸುವುದು.

೩೦. ಪಚ್ಚಡತ್‌ಪೊಣ್ಣ್ – ಕೀಳು ಜಾತಿಯ ಹೆಣ್ಣನ್ನು ಮೇಲ್ವರ್ಗದ ಗಂಡಸು ಸೀರೆ ಒಂದನ್ನು ಕೊಟ್ಟು ತನ್ನವಳನ್ನಾಗಿ ಮಾಡಿಕೊಳ್ಳುವುದು. ಹಚ್ಚಡ ಕೊಟ್ಟು ವರಿಸುವ ಹೆಣ್ಣು ಪಚ್ಚಡತ್ ಪೊಣ್ಣ್ ಆಗುತ್ತಾಳೆ. ಈ ಪದ್ಧತಿ ಪ್ರಸ್ತುತ ಇರುವುದಿಲ್ಲ.

೩೧. 'ಆದರೆ' – ಕೊಡಗಿನ ಆಷಾಢ ತಿಂಗಳಗಿಂತ ಮೊದಲು ಬರುವ ತಿಂಗಳು. ಸಾಧಾರಣವಾಗಿ ಜೂನ್ ೧೫ರಿಂದ ಜುಲೈ ೧೫ರವರೆಗೆ ಆದರೆ ತಿಂಗಳು ಆಗಿರುತ್ತದೆ.

೩೨. ಕಕ್ಕಡ – ಇದು ಕೊಡಗರ ಆಷಾಢ ಮಾಸ. ತಮಿಳಿನ ಆಡಿ ಮಾಸಕ್ಕೆ ಸಮಾನವಾಗಿರುತ್ತದೆ. ನಾಟಿ ಕೆಲಸ ಈ ಸಮಯದಲ್ಲಿ ನಡೆಯುತ್ತದೆ. ಸಾಧಾರಣವಾಗಿ ಜುಲೈ ೧೫ರಿಂದ ಆಗಸ್ಟ್ ೧೫ರವರೆಗೆ ಇರುತ್ತದೆ.

೩೩. ಕಣಿಪೂಜುಸುವುದು – ಕಾವೇರಿ ಸಂಕ್ರಮಣದ ದಿವಸ ಕಾವೇರಿ ಮಾತೆಯ ಕಳಸವನ್ನಿಟ್ಟು ಪ್ರತಿ ಮನೆಗಳಲ್ಲೂ ಮಹಿಳೆಯರು ಪೂಜಿಸುವ ಪ್ರಕ್ರಿಯೆಯನ್ನು ಕೊಡಗಿನಲ್ಲಿ ಕಣಿಪೂಜುಸುವುದು ಎನ್ನುತ್ತಾರೆ.

೩೪. ಕದಿರು ತೆಗೆಯುವುದು – ಹುತ್ತರಿ ಹಬ್ಬದ ದಿನ ಶುಭ ಮುಹೂರ್ತದಲ್ಲಿ ಹೊಸ ಭತ್ತ ಬೆಳೆಯನ್ನು ಒಕ್ಕದವರೆಲ್ಲ ಸಂಭ್ರಮದಿಂದ ಕುಯ್ಯುವ ಪ್ರಕ್ರಿಯೆ.

೩೫. ಊರುಪತ್ತಿ – ಊರುಪತ್ತಿ ಅಥವಾ ಭಾರಣಿ ಎಂದರೆ ದೇವರಿಗೆ ಬಲಿ ಕೊಟ್ಟ ಪ್ರಾಣಿಗಳ ಮಾಂಸಗಳ ಒಂದು ಭಾಗವು ಊರಿನ ಹಕ್ಕಾಗಿರುತ್ತದೆ: ಆ ಮಾಂಸವನ್ನು ಒಟ್ಟು ಸೇರಿಸಿ ಬೇಯಿಸಿ ಗಂಡು ಸದಸ್ಯರು ಒಟ್ಟಾಗಿ ಸೇವಿಸುತ್ತಾರೆ. ಇದನ್ನು ಊರುಪತ್ತಿ ಅಥವಾ ಭಾರಣಿ ಎನ್ನುತ್ತಾರೆ.

೩೬. ಬೋಡ್‌ನಮ್ಮೆ – ಕೊಡಗಿನ ಕೆಲವು ಗ್ರಾಮಗಳಲ್ಲಿ ವೇಷಧರಿಸಿ ಕುಣಿದು ಕೊನೆಗೆ ಗ್ರಾಮದೇವರ ಸನ್ನಿಧಿಗೆ ಹೋಗುವ ಪ್ರಕ್ರಿಯೆ ಇವೆ. ಇದನ್ನು ಬೋಡ್‌ನಮ್ಮೆ ಎನ್ನುತ್ತಾರೆ.

೩೭. ಮಾಹಿತಿದಾರರು – ಪರದಂಡ ಚಂಗಪ್ಪ, ವಯಸ್ಸು ೯೭, ನಾಲಡಿ ಗ್ರಾಮ, ಕೊಡಗು ಜಿಲ್ಲೆ, ದಿನಾಂಕ ೨೫.೧೨.೨೦೧೪.

೩೮. ಪಟ್ಟೆದಾರ – ಒಕ್ಕದ ಮುಖ್ಯಸ್ಥ.

೩೯. ಕುತ್ತಿನಾಶ – ವಂಶ ನಾಶವಾಗುವುದು.



ಅಧ್ಯಾಯ : ಮೂರು

# ಕೊಡಗಿನ ಸಾಮಾಜಿಕ ಸಂರಚನೆ ಮತ್ತು ಮೂಲನಿವಾಸಿ ಒಕ್ಕಗಳ ಆಂತರಿಕ ಸಂಬಂಧಗಳು

## ಅಧ್ಯಾಯ : ಮೂರು

# ಕೊಡಗಿನ ಸಾಮಾಜಿಕ ಸಂರಚನೆ ಮತ್ತು ಮೂಲನಿವಾಸಿ ಒಕ್ಕಗಳ ಆಂತರಿಕ ಸಂಬಂಧಗಳು

**ಒ**ಕ್ಕಗಳು ಕೊಡಗಿನ ಸಮಾಜದ ತಾಯಿಬೇರಿದ್ದಂತೆ. ಆ ಒಕ್ಕಗಳ ಸ್ವರೂಪ, ರಚನೆ ಹಾಗೂ ಚಾರಿತ್ರಿಕ ಕಾಲಘಟ್ಟದಲ್ಲಿ ಅವುಗಳು ಬೆಳೆದುಬಂದ ಬಗೆಯನ್ನು ಕುರಿತು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿದ್ದು ಸರಿಯಷ್ಟೆ. ಪ್ರಸ್ತುತ ಅಧ್ಯಾಯದಲ್ಲಿ ಒಕ್ಕಗಳಿಂದ ರೂಪುಗೊಂಡಿರುವ ಕೊಡಗಿನ ಸಮಾಜದ ರಚನೆ ಮತ್ತು ಮೂಲನಿವಾಸಿ ಒಕ್ಕಗಳ ನಡುವಿನ ಸಂಕೀರ್ಣವಾದ ಸಂಬಂಧಗಳನ್ನು ಚರ್ಚಿಸಲಾಗುವುದು. ಸಮಾಜದ ಅಧ್ಯಯನಕ್ಕೆ ಸಂಬಂಧಿಸಿದ ವಿಷಯವ್ಯಾಪ್ತಿಯನ್ನು ವಸಾಹತುಶಾಹಿ ಬರಹಗಾರರು 'ಕೂರ್ಗ್ ಪ್ರಾಪರ್'[೧] ಎಂದು ಬಳಸುವ ಕೊಡಗಿನ ಕೇಂದ್ರ ಪ್ರದೇಶ ಅಥವಾ ಕೊಡಗಿನ ಎತ್ತರ ಪ್ರದೇಶಕ್ಕೆ ಸೀಮಿತಗೊಳಿಸಲಾಗಿದೆ(ರೈಸ್, ೨೦೦೪(೧೮೭೮): ೨೩೭). 'ಕೂರ್ಗ್ ಪ್ರಾಪರ್' ಅನ್ನು ಕೊಡಗಿನ ಸಾಂಸ್ಕೃತಿಕ ಔನ್ನತ್ಯದ ತಾಣವೆಂದು ಪರಿಗಣಿಸ ಬಹುದಾದ್ದರಿಂದ ಮತ್ತು ಕೊಡಗು ಭಾಷಿಕರು ಈ ಭಾಗದಲ್ಲಿ ಕೇಂದ್ರೀಕೃತವಾಗಿರುವುದರಿಂದ ಆ ಪ್ರದೇಶವನ್ನು ಇಲ್ಲಿನ ಅಧ್ಯಯನದ ಕೇಂದ್ರವಾಗಿ ಇರಿಸಿ ಅಭ್ಯಸಿಸಲು ಯತ್ನಿಸಲಾಗಿದೆ.'

ಕೊಡಗಿನ ಸಮಾಜದಲ್ಲಿನ ಜಾತಿವ್ಯವಸ್ಥೆ, ವಿವಿಧ ವೃತ್ತಿ ವರ್ಗಗಳು, ಗ್ರಾಮಸಮುದಾಯದಲ್ಲಿನ ಸಾಂಪ್ರದಾಯಿಕ ನಾಯಕತ್ವದ ರಚನೆ, ಅಧಿಕಾರ, ಗ್ರಾಮ ಸಮುದಾಯವು ಒಟ್ಟಾಗಿ ಆಚರಿಸುವ ಧಾರ್ಮಿಕ ಹಬ್ಬಹರಿದಿನಗಳು ಮೊದಲಾದ ಸಾಮಾಜಿಕ ಸಂಗತಿಗಳನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಕೊಡಗಿನ ಸಮಾಜವನ್ನು ಪೋಷಿಸುತ್ತಿರುವ ವಿವಿಧ ವೃತ್ತಿವರ್ಗಗಳು ಮತ್ತು ಕುಶಲಕರ್ಮಿಗಳ ಪಾತ್ರವು ಈ ನಿಟ್ಟಿನಲ್ಲಿ ಮಹತ್ವಪೂರ್ಣವಾದುದು. ದೇಶಿ ಮತ್ತು ವಿದೇಶಿ ವಿದ್ವಾಂಸರು ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಕೊಡಗಿನ ಚರಿತ್ರೆ ಎಂದರೆ ಪ್ರಬಲ ವರ್ಗವಾದ ಕೊಡವರದೇ ಸಂಸ್ಕೃತಿ ಮತ್ತು ಚರಿತ್ರೆ ಎಂಬಂತೆ ಬಿಂಬಿಸಿದರು. ಕೊಡಗು ಭಾಷಿಕರಾದ ಇತರ ೧೭ ಸಮುದಾಯಗಳ ಸಂಸ್ಕೃತಿ ಪದ್ಧತಿಗಳು, ಜೀವನ ಶೈಲಿಗಳಲ್ಲಿ ಅಷ್ಟೇನೂ ವ್ಯತ್ಯಾಸವಿಲ್ಲದಿದ್ದರೂ ಈ ಸಮುದಾಯಗಳ ಅಧ್ಯಯನವನ್ನು ಕೊಡಗಿನ ಚರಿತ್ರೆ ಬರವಣಿಗೆಗಳಲ್ಲಿ ನಿರ್ಲಕ್ಷಿಸಲಾಗಿದೆ. 'ಕೊಡಗು' ಎಂದರೆ 'ಕೊಡವ' ಎಂಬ ನಿಲುವನ್ನು ಆಧರಿಸಿ ಕಟ್ಟಿದ ಚರಿತ್ರೆಗಳು ಆಕ್ಷೇಪಣಾರ್ಹವಾಗಿವೆ. ಇವರಲ್ಲಿ

ಕಾರ್ಮಿಕ ಸಮುದಾಯವಿರಬಹುದು, ಕುಶಲ ಕರ್ಮಿಗಳಿರಬಹುದು, ಅಲ್ಪಸಂಖ್ಯಾತ ಕೃಷಿ ಕೇಂದ್ರಿತ ಸಮುದಾಯಗಳಿರಬಹುದು, ಇವೆಲ್ಲವೂ ನಿರ್ಲಕ್ಷಿತ ಸಮುದಾಯಗಳೇ ಆಗಿವೆ. ಈ ಹಿನ್ನಲೆಯಲ್ಲಿ ಒಟ್ಟು ಕೊಡಗಿನ ಸಮಾಜದೊಳಗೆ ಈ ರೀತಿಯ ನಿರ್ಲಕ್ಷಿತ ವರ್ಗಗಳನ್ನು ಚರಿತ್ರೆ ಬರವಣಿಗೆ ಸಂದರ್ಭದಲ್ಲಿ ಅಧ್ಯಯನ ಮಾಡುವುದು ಮುಖ್ಯವೆನಿಸುತ್ತದೆ.

ಅಲ್ಲದೆ, ಸಮಾಜದ ಜೊತೆ ಜೊತೆಗೆ ತಳಕು ಹಾಕಿಕೊಂಡಿರುವ ಗ್ರಾಮವ್ಯವಸ್ಥೆಯೊಳಗಿನ ಆರ್ಥಿಕ ಸಂಗತಿಗಳಾದ ಕೃಷಿಕ ವರ್ಗದ ಸಂರಚನೆ, ಕುಶಲಕರ್ಮಿಗಳು, ಜೀತದಾಳುಗಳು, ಭೂಸುಧಾರಣೆ, ನ್ಯಾಯದಾನ ಪದ್ಧತಿ ಮುಂತಾದ ವಿಚಾರಗಳನ್ನೂ ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗುವುದು. ಸಾಮಾನ್ಯವಾಗಿ ಭೂ ಒಡೆತನವುಳ್ಳವರು, ಸಾಮಾಜಿಕ ಸ್ತರವಿನ್ಯಾಸದಲ್ಲಿ ಮೇಲಿನವರೇ ಆಗಿರುತ್ತಾರೆ. ಇವರ ಭೂಮಿಗಳಲ್ಲಿ ದುಡಿಯುವ, ಜೀತ ಕೆಲಸಕ್ಕಿರುವ ಸಮುದಾಯಗಳು ಸಾಮಾಜಿಕ ಸ್ತರವಿನ್ಯಾಸದಲ್ಲಿ ಕೆಳಹಂತದಲ್ಲಿ ಇರುತ್ತಾರೆ. ಕೊಡಗಿನ ಇತ್ತೀಚಿನ ಸಾಮಾಜಿಕ ಚರಿತ್ರೆಯನ್ನು ಅಧ್ಯಯನಕ್ಕೆ ಒಳಪಡಿಸಿದಾಗ ತೀವ್ರ ಸ್ವರೂಪದ ಸಂಘರ್ಷಗಳು ಏರ್ಪಟ್ಟಿರುವುದು ಗೋಚರಿಸುತ್ತವೆ. ಅದೇ ರೀತಿ ಅಲ್ಲಲ್ಲಿ ಸಾಮಾಜಿಕ ಸಮನ್ವಯಕ್ಕೆ ಸಂಬಂಧಿಸಿದ ವಿವರಗಳೂ ದೊರಕುತ್ತವೆ. ಸಾಮಾಜಿಕ ಸಂಘರ್ಷ ಮತ್ತು ಸಮನ್ವಯತೆಗಳನ್ನು ಚಾರಿತ್ರಿಕ ನೆಲೆಗಟ್ಟಿನಲ್ಲಿ ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಾಯವು ಹೊಂದಿದೆ.

## ೩.೧. ಕೊಡಗಿನ ಸಾಮಾಜಿಕ ಸಂರಚನೆ

ಒಂದು ಭೌಗೋಳಿಕ ಪರಿಧಿಯೊಳಗಿನ ಸಮುದಾಯಗಳು ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಮೊದಲಾದ ಚಟುವಟಿಕೆಗಳನ್ನು ಪರಸ್ಪರವಾಗಿ ಸಾಂಪ್ರದಾಯಕ ನೀತಿ ನಿಯಮಗಳ ಕಟ್ಟಳೆಯೊಳಗೆ ನಡೆಸಿಕೊಂಡು ಹೋಗುವ ಮೂಲಕ ಸಾಂಘಿಕ ಜೀವನ ನಡೆಸುವುದನ್ನು 'ಸಾಮಾಜಿಕ ಸಂರಚನೆ' ಎನ್ನುವ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯವನ್ನು ರೂಪಿಸಲಾಗಿದೆ.

> ಕೊಡಗಿನ ಗ್ರಾಮಸ್ಥರು ಗುಂಪು ಕಟ್ಟಿ ಒಂದೆಡೆ ಮನೆಮಠಗಳನ್ನು ಮಾಡಿಕೊಂಡು ಜೀವಿಸುವ ಪದ್ಧತಿ ಇಲ್ಲ. ಗ್ರಾಮದ ಪ್ರತಿಯೊಂದು ಕುಟುಂಬವೂ ಇನ್ನೊಂದರಿಂದ ಬೇರ್ಪಟ್ಟು ದೂರ ದೂರವಿರುತ್ತದೆ. ಒಂದು ಕುಟುಂಬದ ಆಸ್ತಿ, ತೋಟ ಮೊದಲಾದವು ಇನ್ನೊಂದು ಕುಟುಂಬದಿಂದ ವಿಂಗಡಿಸಲ್ಪಟ್ಟಿದ್ದು, ಆಯಾಯ ಆಸ್ತಿ ತೋಟಗಳ ಮಧ್ಯದಲ್ಲಿ ಆಯಾಯ ಕುಟುಂಬಗಳು ನೆಲೆಸಿರುತ್ತವೆ. ಗುಂಪಾಗಿರುವ ಮನೆಗಳ ಸಮೂಹವು ಪಟ್ಟಣಗಳಲ್ಲಿ ವಿನಹ ಕೊಡಗಿನ ಗ್ರಾಮಗಳಲ್ಲಿ ಇಲ್ಲ. ಪ್ರತ್ಯೇಕ ಮತ್ತು ಸ್ವತಂತ್ರವಾದ ಹಲವು ಕುಟುಂಬಗಳು ಸೇರಿ ಒಂದು ಗ್ರಾಮವಾಗಿರುತ್ತದೆ. ಹಲವು ಕುಟುಂಬಗಳು ಸದಸ್ಯರಾಗಿರುವ ದೊಡ್ಡದೊಂದು ಕುಟುಂಬವೇ ಗ್ರಾಮವೆನ್ನಲು ಅಡ್ಡಿ ಇಲ್ಲ(ಚಂಗಪ್ಪ, ೨೦೧೦(೨೦೦೩):೯೭-೯೮).

ಎನ್ನುವ ಪರದಂಡ ಚಂಗಪ್ಪನವರ ಅಭಿಪ್ರಾಯ ಇಲ್ಲಿ ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಕೊಡಗಿನ ಗ್ರಾಮರಚನೆಗಳಿಗೂ, ಬೇರೆ ಪ್ರದೇಶಗಳಲ್ಲಿನ ಗ್ರಾಮರಚನೆಗಳಿಗೂ ಇರುವ ಭಿನ್ನತೆಯನ್ನು ಕಂಡುಕೊಳ್ಳಬಹುದಾಗಿದೆ.

ಪ್ರತಿಯೊಂದು ಗ್ರಾಮದಲ್ಲೂ ಹತ್ತಾರು ವಿವಿಧ ಬುಡಕಟ್ಟಿಗೆ ಸೇರಿದ ಜನಾಂಗಗಳಿವೆ. ಈ ವಿವಿಧತೆಯಲ್ಲೂ ಏಕೀಕೃತವಾಗಿ ಒಂದು ಕುಟುಂಬದಂತೆ ಅದ್ಭುತ ಆದರ್ಶವು ಕೊಡಗಿನ ಗ್ರಾಮಗಳದು ಎಂಬುದು ಪರದಂಡ ಚಂಗಪ್ಪನವರ ಅಭಿಪ್ರಾಯವಾಗಿದೆ(ಚಂಗಪ್ಪ, ೨೦೧೦ (೨೦೦೩):೧೦೩). ಇದಕ್ಕೆ ವ್ಯತಿರಿಕ್ತವಾದ ಅಭಿಪ್ರಾಯ ವಿಜಯ ತಂಬಂಡ ಅವರದಾಗಿದೆ. ಅವರ ಪ್ರಕಾರ ಕೊಡಗಿನ ಸಾಮಾಜಿಕ ಸಂರಚನೆಯ ಒಳಗೆ ವಿವಿಧ ಸಮುದಾಯಗಳ ನಡುವಿನ ಪರಸ್ಪರ ಗ್ರಹಿಕೆಯಿಂದ ಕೂಡಿ ಬಾಳುವುದನ್ನು ಒಂದು ಮೌಲ್ಯವಾಗಿ ಗುರುತಿಸ ಬಹುದಾದರೂ, ಇಂದಿನ ಜಾಗೃತ ಸಮಾಜದೊಳಗೆ ಅದು ಒಂದು ಶೋಷಣೆಯ ರೂಪವೆಂದೇ ಪರಿಗಣಿಸಲಾಗುತ್ತದೆ (ತಂಬಂಡ, ೨೦೦೦:೩೬). ಪರದಂಡ ಚಂಗಪ್ಪನವರ ಅಭಿಪ್ರಾಯವು ವಸಾಹತು ಪೂರ್ವ ಕಾಲಘಟ್ಟದ ಗ್ರಾಮೀಣ ವ್ಯವಸ್ಥೆಯದ್ದಾಗಿದೆ. ಕೃಷಿ ಕೇಂದ್ರಿತ ಸಮುದಾಯಗಳಿಗೆ, ಕುಶಲಕರ್ಮಿಗಳು ಮತ್ತು ಕೃಷಿ ಕಾರ್ಮಿಕ ವರ್ಗಗಳ ಸಹಕಾರ, ಸಹಯೋಗಗಳು ಉತ್ತಮ ಬದುಕನ್ನು ರೂಪಿಸಿಕೊಳ್ಳುವಲ್ಲಿ ಅಗತ್ಯವಾಗಿದ್ದುದರಿಂದ ಅನಿವಾರ್ಯವಾಗಿ ಪರಸ್ಪರ ಗೌರವಯುತವಾಗಿ ಬಾಳಬೇಕಾಗಿತ್ತು. ಆದರೆ ಜಾಗತೀಕರಣದ ಸಂದರ್ಭದಲ್ಲಿ ಮುಖ್ಯವಾಗಿ ಎಂಬತ್ತರ ದಶಕದ ನಂತರ ಮತ್ತು ಕಾಫಿ ಬೆಳೆಯು ಪ್ರಬುದ್ಧ ಕಮರ್ಸಿಯಲ್ ಬೆಳೆಯಾಗಿ ರೂಪುಗೊಂಡ ಸಂದರ್ಭದಲ್ಲಿ ಕೃಷಿಕೇಂದ್ರಿತ ಸಮುದಾಯಗಳಿಗೆ ಕುಶಲಕರ್ಮಿ ಸಮುದಾಯಗಳ ಮತ್ತು ಅಲ್ಪಸಂಖ್ಯಾತ ಕೃಷಿ ಕಾರ್ಮಿಕರ ಬಗ್ಗೆ ನಿರ್ಲಕ್ಷ್ಯ ಬೆಳೆಯುತ್ತದೆ ಮತ್ತು ಕುಶಲಕರ್ಮಿ ಹಾಗೂ ಕೃಷಿ ಕಾರ್ಮಿಕ ಸಮುದಾಯಗಳೂ ಈ ಬೆಳವಣಿಗೆಗಳನ್ನು ಜಾಗ್ರತವಾಗಿ ಗಮನಿಸುತ್ತಿದೆ ಎಂಬುದನ್ನು ಮನಗಾಣಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ಕೊಡಗಿನ ಜಾತಿವ್ಯವಸ್ಥೆ, ಮೂಲನಿವಾಸಿ ಸಮುದಾಯಗಳ ಒಕ್ಕಗಳೊಂದಿಗಿನ ಸಂಬಂಧಗಳನ್ನು ಮತ್ತು ವೈರುದ್ಯಗಳನ್ನು ಗಮನಿಸಬಹುದು. ಅವುಗಳ ವಿವರಗಳನ್ನು ಇಲ್ಲಿ ಚರ್ಚಿಸಲು ಉದ್ದೇಶಿಸಲಾಗಿದೆ.

### ೩.೩.೧. ಜಾತಿವ್ಯವಸ್ಥೆ

ವಸಾಹತುಪೂರ್ವ ಕಾಲದಲ್ಲಿ ಕೊಡಗಿನ ಸಮಾಜದಲ್ಲಿನ ವಿವಿಧ ಜಾತಿಯ ಜನರು ತಮ್ಮ ಜಾತಿಯಾಧಾರಿತ ವೃತ್ತಿಗಳನ್ನೇ ಅವಲಂಬಿಸುವುದು ಅನಿವಾರ್ಯವಾಗಿತ್ತು. ಅಂದಿನ ಕಾಲದಲ್ಲಿ ಆಯಾಯ ಜನಾಂಗಗಳು ತಮಗೆ ನಿಶ್ಚಿತವಾದ ಕುಲಕಸುಬುಗಳನ್ನು ಮಾಡುತ್ತಿದ್ದು, ಅದರಲ್ಲಿಯೇ ತೃಪ್ತರಾಗಿದ್ದರು. ಇಂದಿನಂತೆ ಬ್ರಾಹ್ಮಣನಾಗಲಿ, ಪಣಿಕನಾಗಲಿ ವ್ಯವಸಾಯವನ್ನೂ,

ಕೊಡವನಾಗಲಿ, ಕೆಂಬಟ್ಟಿಯನ್ನಾಗಲಿ ಮರಗೆಲಸವನ್ನೂ ಮಾಡುತ್ತಿರಲಿಲ್ಲ. ಅವರವರ ವೃತ್ತಿಗಳನ್ನು ಅವರವರು ಮಾಡುತ್ತಿದ್ದುದರಿಂದ ಜನಾಂಗಗಳು ಒಂದನ್ನೊಂದು ಅವಲಂಬಿತವಾಗಿ ಹೊಂದಿ ಕೊಂಡು ಜೀವಿಸುವುದು ಅನಿವಾರ್ಯವಾಗಿತ್ತು. ಗ್ರಾಮಜೀವನದ ಐಕ್ಯತೆ ಮತ್ತು ಭದ್ರತೆಗೆ ಇದು ಅತ್ಯಗತ್ಯವಿತ್ತೆಂದು ಪರದಂಡ ಚಂಗಪ್ಪನವರು ಅಭಿಪ್ರಾಯಪಟ್ಟಿದ್ದಾರೆ(ಚಂಗಪ್ಪ, ೨೦೧೦ (೨೦೦೩):೧೦೫). ಇದಕ್ಕೆ ಪೂರಕವೆಂಬಂತೆ ಕೊಡವರು ಇತರ ಜಾತಿಯವರೊಂದಿಗೆ ಅಚ್ಚುಕಟ್ಟಾದ ಘಟಕರೂಪದ ಸಂಬಂಧವನ್ನು ಹೊಂದಿದ್ದರು ಎಂದೆನ್ನುತ್ತಾರೆ ಎಂ.ಎನ್. ಶ್ರೀನಿವಾಸ್(ಶ್ರೀನಿವಾಸ್, ೧೯೫೨:೩೩). ಈ ಹಿನ್ನೆಲೆಯಲ್ಲಿ ಭಾರತೀಯ ಸಮಾಜದಲ್ಲಿನ ಜಾತಿವ್ಯವಸ್ಥೆಯ ಪ್ರತಿರೂಪವೆಂಬಂತೆ ಕೊಡಗಿನ ಸಮಾಜದಲ್ಲಿಯೂ ಜಾತಿವ್ಯವಸ್ಥೆ ಇರುವುದಾದರೂ, ಸ್ವರೂಪದಲ್ಲಿ ಭಿನ್ನತೆ ಇರುವುದನ್ನು ಗುರುತಿಸಬಹುದು. ಅಂದರೆ, ಸಾಂಪ್ರದಾಯಿಕ ಭಾರತೀಯ ಸಮಾಜದಲ್ಲಿ ಇರುವ ಮಡಿವಂತಿಕೆ ಮತ್ತು ಅಸ್ಪೃಶ್ಯತಾ ಆಚರಣೆಗಳ ಜಟಿಲತೆಯು ಕೊಡಗಿನ ಸಮಾಜದಲ್ಲಿ ಕಾಣುವುದು ವಿರಳ. ಆದರೆ, ಕೊಡವ ಸಮುದಾಯದಲ್ಲಿನ ಕೆಲವೊಂದು ಕಟ್ಟುಪಾಡುಗಳು ಭಾರತೀಯ ಸಮಾಜದ ಶ್ರೇಣೀಕರಣ ವ್ಯವಸ್ಥೆಗೆ ಪೂರಕವಾಗಿರುವುದನ್ನು ನೋಡಬಹುದು. ಕೊಡವರು ಮೂಲತಃ ಒಂದು ಬುಡಕಟ್ಟು ಸಂಸ್ಕೃತಿಯ ಜನ. ಎಲ್ಲಿ ಭೂಒಡೆತನ ಮತ್ತು ಅದರಲ್ಲಿನ ಉತ್ಪನ್ನದ ಮೇಲಿನ ನಿಯಂತ್ರಣ ಆರಂಭವಾಗುತ್ತದೆಯೋ ಅಲ್ಲಿಂದ ಅಧಿಕಾರದ ಪ್ರಶ್ನೆ ಉದ್ಭವವಾಗುತ್ತದೆ. ಕೊಡಗಿನ ಪರಿಸರದಲ್ಲಿ ಕೊಡವರು ಪ್ರಬಲ ಸಮುದಾಯವಾಗಿ ಹೊರಹೊಮ್ಮುವುದಕ್ಕೆ ಚಾರಿತ್ರಿಕ ಕಾರಣಗಳೂ ಇವೆ. ಲಿಂಗಾಯತ ಅರಸರ ಕಾಲದಲ್ಲಿ ಕೆಲವು ಕೊಡವ ಒಕ್ಕದವರು ಪ್ರಭುತ್ವಕ್ಕೆ ಹತ್ತಿರವಾದರು. ಆ ಒಕ್ಕಗಳು ಇಂದಿಗೂ ಪ್ರತಿಷ್ಠಿತ ಒಕ್ಕಗಳಾಗಿ ಕೊಡಗಿನಲ್ಲಿ ಹೆಸರಾಗಿವೆ. ಚಿಕ್ಕವೀರರಾಜೇಂದ್ರನ ಕಾಲದಲ್ಲಿ ಸವಿತಾ ಸಮಾಜದ ಬಸವಯ್ಯ ಎಂಬಾತನು ರಾಜನಿಗೆ ಹತ್ತಿರವಾಗಿ ಹಂತಹಂತವಾಗಿ ದಿವಾನ ಪದವಿಗೇರುತ್ತಾನೆ. ಇವನನ್ನು ಮೇಲ್ವರ್ಗದ ಇತಿಹಾಸಕಾರರು ವಾಸ್ತವವನ್ನು ಮರೆಮಾಚುವ ಮೂಲಕ ನಕಾರಾತ್ಮಕವಾಗಿ ಚಿತ್ರಿಸಿರುವುದನ್ನು ಕಾಣಬಹುದು (ಚಿಣ್ಣಪ್ಪ, ೨೦೦೬(೧೯೨೪):೬೭).

ಆದರೆ, ವಿಜಯ್ ಪೂಣಚ್ಚ ತಂಬಂಡ ಅವರು "ರಾಜನೊಂದಿಗೆ ಕೊನೆಯ ಉಸಿರಿರು ವವರೆಗೂ ಇದ್ದುದಕ್ಕಾಗಿ ಈತ(ಬಸವಯ್ಯ) ತನ್ನ ಪ್ರಾಣ ಕಳೆದುಕೊಳ್ಳಬೇಕಾಯಿತು. ಚಿಕ್ಕವೀರರಾಜನ ಉಳಿದ ದಿವಾನರಾದ ಚೆಪ್ಪುಡಿರಪೊನ್ನಪ್ಪ, ಅಪ್ಪಾರಂಡ ಬೋಪಣ್ಣ(ಕೊಡವ ದಿವಾನರು) ಕೊಡಗು ರಾಜನ ಬೆನ್ನಿಗಿರಿದು ದೇಶಭಕ್ತಿ ಪ್ರಕಟಿಸಿ ಬ್ರಿಟಿಷರ ಕೃಪೆಯಿಂದ ಪ್ರಾಣ ಉಳಿಸಿಕೊಂಡದ್ದು ಒಂದು ವ್ಯಂಗ್ಯ" ಎಂದು ಅಭಿಪ್ರಾಯಪಡುತ್ತಾರೆ(ತಂಬಂಡ, ೨೦೦೪: ೫೪). ಮುಂದುವರಿದು, "ಹಜಾಮ ಜಾತಿಯ ಬಸವ ದಿವಾನ ತನ್ನನ್ನು ಎಲ್ಲಾ ರೀತಿಯಿಂದಲೂ ಬಳಸಿಕೊಂಡ ಲಿಂಗಾಯತ ರಾಜ ಚಿಕ್ಕವೀರರಾಜ, ಕೊಡವ ದಿವಾನರಾದ ಪೊನ್ನಪ್ಪ, ಬೋಪಣ್ಣ ಮತ್ತು ಬ್ರಾಹ್ಮಣ ದಿವಾನ ಲಕ್ಷ್ಮೀನಾರಾಯಣನಿಂದ ಎಲ್ಲಾ ರೀತಿಯಲ್ಲೂ ಉಪೇಕ್ಷೆಗೊಳಗಾದ ಎಂಬ

ಅಂಶಗಳು ಕೊಡಗಿನ ನೆಲದ ಜಾತಿಸಂಘರ್ಷಗಳ ಅಭಿವ್ಯಕ್ತತೆಗೆ ಒಂದು ಮೈಲುಗಲ್ಲೆಂದರೆ ಉತ್ಪ್ರೇಕ್ಷೆಯಾಗಲಿಕ್ಕಿಲ್ಲ" ಎನ್ನುತ್ತಾರೆ (ತಂಬಂಡ, ೨೦೦೪:೫೪). ಆದರೆ ಇದು ರಾಜಕೀಯ ಪ್ರೇರಿತವಾದ ಸಂಘರ್ಷವಾದ್ದರಿಂದ ಜಾತಿಯ ನೆಲೆಯಲ್ಲಿ ಪರಿಗಣಿಸುವುದು ಸೂಕ್ತವಾಗಲಾರದು. ಆದರೂ, ಮೇಲಿನ ಪ್ರಸಂಗಕ್ಕೆ ಭಿನ್ನವಾದ ನೆಲೆಯೊಂದನ್ನು ಕೊಡಗಿನ ಚರಿತ್ರೆಯಲ್ಲಿ ಗುರುತಿಸ ಬಹುದು. ಕೊಡಗಿನ ನಾಲ್ಕುನಾಡಿನ ಮೇಲ್ವರ್ಗದ ಕಲ್ಯಾಟಂಡ ಪೊನ್ನಪ್ಪ ಮತ್ತು ಅವನ ಸಹವರ್ತಿ ಕೆಳಜಾತಿಯ ಕಾಪಾಳರ ಬೊಳ್ತುವಿನ ಸ್ನೇಹದ ಕುರಿತು ಕಥೆಗಳು ಪ್ರತೀತಿಯಲ್ಲಿವೆ. ಕೊಡಗಿನ ಇತಿಹಾಸದಲ್ಲಿ ಕಂಡುಬರುವ ಬಹಳ ಮುಖ್ಯವಾದ ಪ್ರಸಂಗ ಕಲ್ಯಾಟಂಡ ಪೊನ್ನಪ್ಪನದು. ಇಂದಿಗೂ ಕಲ್ಯಾಟಜ್ಜಪ್ಪನ ಕೋಲ ಹಾಗೂ ತಿರೋಳಗಳು(ಪೊನ್ನಪ್ಪನ ಆತ್ಮವು ಜೀವಂತವಿರುವ ಮನುಷ್ಯನ ಮೈಮೇಲೆ ಬರುವುದು) ನಡೆಯುತ್ತಿದೆ. ಕೆಂಗುದುರೆ ಪೊನ್ನಪ್ಪನೆಂದು ಹೆಸರುವಾಸಿಯಾಗಿದ್ದ ಕಲ್ಯಾಟಂಡ ಪೊನ್ನಪ್ಪ ಲಿಂಗಾಯಿತ ಮೊದಲರಸನ ಸಮಕಾಲೀನನಾಗಿದ್ದು, ತನಗೂ ವೀರರಾಜನಿಗೂ ವೈರಿಯಾಗಿದ್ದ ಕರ್ಣೇಂಬಾಹುನಾಯಕನನ್ನು ಜಯಿಸಲು ತನ್ನ ಸ್ನೇಹಿತ ತಳ ವರ್ಗದ ಕಾಪಾಳ ಬೋಳ್ತುವಿನ ಸಹಕಾರವನ್ನು ಪಡೆದನು. ಹಾಗಾಗಿ ಪ್ರಬಲವರ್ಗದ ಪೊನ್ನಪ್ಪ ಮತ್ತು ದಲಿತವರ್ಗದ ಕಾಪಾಳರ ಬೊಳ್ತು ಅವರ ಸಾಹಸ ಮತ್ತು ಸ್ನೇಹಗಳು ಆದರ್ಶ ಮತ್ತು ಅಮರವಾಗಿದೆ ಎಂಬುದನ್ನು ಈ ಕೆಳಗಿನ ಬಾಳೊಪಾಟ್‌ನ ಸಾಲುಗಳಲ್ಲಿ ತಿಳಿದುಕೊಳ್ಳಬಹುದು.

ಪೊನ್ನಪ್ಪ ಬಯಿಂಬನೂ
ಪೊನ್ನಪ್ಪಂಡ ಸಂಜಾದಿ
ಕಾಟಾಳ ಬೊಳತುವೂ
ಚೋಕಂಡಾಣೆ ಮಂದ್‌ಂಜಿ
ವೈಯಿನೆ ಪೊರಟಿತ್
ಪಾಂಬ್ ಕಣ್ಣ್ ಪಾಲೇರಿ
ಚಿತ್ತಿರ ತರಮನೆ (ನಾಗರಾಜ್ ೨೦೦೪:೧೧೧)

ಅಂದರೆ ಪೊನ್ನಪ್ಪನೆಂಬ ವೀರ ಮತ್ತು ಅವನ ಗೆಳೆಯ ಕಾಟಾಳ ಬೊಳ್ತು ಇಬ್ಬರು ಕೂಡಿ ಚೋಕಂಡಾಣೆ ಎಂಬ ಮೈದಾನದಿಂದ ಹೊರಟು ಪಾಲೇರಿ ರಾಜನ ಅರಮನೆ ತಲುಪಿದರು ಎನ್ನುವ ಜನಪದ ಹಾಡುಗಳು ತಳವರ್ಗದ ಕಾಪಾಳ ಬೊಳ್ತುವಿನ ಅಂದಿನ ಕಾಲದ ಪ್ರಭಾವದ ಮೇಲೆ ಬೆಳಕು ಚೆಲುತ್ತದೆ. ಹೀಗೆ ವಿವಿಧ ಸಮುದಾಯಗಳ ನಡುವಿನ ಸಾಮರಸ್ಯವನ್ನು ಗಮನಿಸಬಹುದು.

ಕೊಡಗಿನ ಸಮಾಜದಲ್ಲಿ ಮೇಲ್ವರ್ಗದ ಕೊಡವ, ಅಮ್ಮಕೊಡವ ಮುಂತಾದ ಸಮುದಾಯಗಳ ಜೊತೆಗೆ ತಳಸಮುದಾಯವಾದ ಕೆಂಬಟ್ಟಿ ಹೊಲೆಯರ ಒಕ್ಕಗಳ ನಡುವಿನ ಭಾವನಾತ್ಮಕತೆಯ ಬಾಂಧವ್ಯ ಅಲ್ಲಿನ ಸೌಹಾರ್ದತೆಗೆ ನಿದರ್ಶನವೆನ್ನಬಹುದು. ಕೆಂಬಟ್ಟಿಗಳು 'ಪನ್ಯ' ಜಮೀನುಗಳಲ್ಲಿ

ನೆಲೆಸಿದ್ದು, ಇವರು ಸಂಬಂಧಪಟ್ಟ ಕೊಡವ ಒಕ್ಕಗಳ ಐನ್‌ಮನೆಗೆ ಸಮೀಪವಿರುತ್ತಾರೆ. ಆ ಒಕ್ಕದ ಕೃಷಿ ಚಟುವಟಿಕೆಗಳ ಜೊತೆಗೆ ಒಕ್ಕದ ಕಷ್ಟಸುಖಗಳಲ್ಲಿಯೂ ಒಕ್ಕದ ಸದಸ್ಯರಂತೆಯೇ ಭಾವನಾತ್ಮಕವಾಗಿ ಭಾಗಿಗಳಾಗುತ್ತಾರೆ. ಅದರ ತೀವ್ರತೆ ಎಷ್ಟಿದೆ ಎಂದರೆ ಕೆಂಬಟ್ಟಿಗಳ ಒಕ್ಕಕ್ಕೆ ತಮ್ಮದೇ ಒಕ್ಕನಾಮವಿದ್ದರೂ ಕೂಡ ತಾವು ನೆಲೆನಿಂತ ಕೊಡವ ಒಕ್ಕದ ಹೆಸರಿನಿಂದಲೇ ಗುರುತಿಸಿಕೊಳ್ಳುವುದನ್ನು ಕ್ಷೇತ್ರಕಾರ್ಯದಿಂದ ಗಮನಿಸಲಾಗಿದೆ. ಹೊರಗಿನಿಂದ ನಿಂತು ನೋಡು ವವರು ಕೆಂಬಟ್ಟಿಗಳನ್ನು ಶೋಷಿತ ವರ್ಗ ಎಂದು ಪರಿಗಣಿಸುತ್ತಾರಾದರೂ, ಅವರನ್ನು ಅಸ್ಪೃಶ್ಯರಂತೆ ಕಾಣುವ ಪರಿಪಾಟ ರೂಢಿಯಲ್ಲಿರುವುದಿಲ್ಲ. ಒಕ್ಕದ ಹಿರಿಯನು(ಒಡೆಯ) ಮರಣಿಸಿದ ಸಂದರ್ಭದಲ್ಲಿ 'ಅಂಗಕಳಿ'[೧] ಎನ್ನುವ ಸಂತಾಪಸೂಚಕ ನೃತ್ಯರೂಪಕವನ್ನು ನಡೆಸುವ ಹಕ್ಕುದಾರಿಕೆಯು ಆ ಒಕ್ಕದ ಕೆಂಬಟ್ಟಿಗಳಿಗೆ ಮಾತ್ರ ಇರುವುದು. ಆದರೂ ಕೂಡ ಈ ಸಂದರ್ಭದಲ್ಲಿ ವಿಜಯ್ ಪೂಣಚ್ಚ ತಂಬಂಡ ಅವರು ಅಭಿಪ್ರಾಯಪಡುವಂತೆ ೧೮೪೩ರಲ್ಲಿ ಕೊಡಗಿನ ಸೂಪರಿಂಟೆಂಡೆಂಟನು ತಯಾರಿಸಿದ ಗುಲಾಮರ ಬೆಲೆ ಪಟ್ಟಿಯ ಪ್ರಕಾರ ಕೆಂಬಟ್ಟಿ ಹೊಲೆಯ ಮತ್ತು ಅವನ ಹೆಂಡತಿಯ ಬೆಲೆ ೧೨ ಬಹಾದ್ರಿ ಪಗೋಡಗಳು" (ತಂಬಂಡ ೨೦೦೦:೪೭). ಹಾಗಾಗಿ ಪ್ರಬಲವರ್ಗದವರು ಕೆಂಬಟ್ಟಿಗಳ ಭಾವನಾತ್ಮಕತೆಯನ್ನು ದುರುಪಯೋಗಪಡಿಸಿಕೊಂಡ ವಿಷಯದ ಕುರಿತು ಅವರು ಹೀಗೆ ಹೇಳುತ್ತಾರೆ: "ವಾಸ್ತವಿಕವಾಗಿ ಕೆಂಬಟ್ಟಿ ಹೊಲೆಯರು ಭೂಮಿ ಜಮ್ಮದ ಆಳುಗಳಾಗಿ ಇರುವುದರಿಂದ ಎಷ್ಟೇ ಕಷ್ಟ ಬಂದರೂ, ಯಾರೇ ಶೋಷಣೆ ಮಾಡಿದರೂ, ಆ ಭೂಮಿಯೊಡನೆ ಬೇರ್ಪಡಿಸಲಾಗದ ಸಂಬಂಧವನ್ನು ಹೊಂದಿದ್ದರು. ಗರಿಷ್ಠ ಪ್ರಮಾಣದಲ್ಲಿ ದುಡಿಸಿಕೊಂಡು 'ಪ್ರಾಮಾಣಿಕರು ಹಾಗೂ ಓಡಿಹೋಗದ ಜಾತಿಗಳವರು' ಎಂದು ಹೇಳುತ್ತಲೇ ಅವರನ್ನು ಸದಾ ಶೋಷಣೆ ಮಾಡುತ್ತಿದ್ದ ಕೊಡವ ಮತ್ತು ಕೊಡವೇತರ ಭೂ ಮಾಲೀಕರು ಕೆಂಬಟ್ಟಿ ಹೊಲೆಯರಿಗಿದ್ದ ಭೂಮಿಯೊಂದಿಗಿನ ಸಂಬಂಧವನ್ನು ದುರುಪಯೋಗಪಡಿಸಿಕೊಂಡದ್ದು ದುರಂತವೇ ಸರಿ" (ತಂಬಂಡ ೨೦೦೦:೪೮). ಎನ್ನುವ ಅಭಿಪ್ರಾಯವನ್ನು ತಳ್ಳಿಹಾಕುವಂತಿಲ್ಲ.

ಈ ಹಿನ್ನೆಲೆಯಲ್ಲಿ ಕೊಡಗಿನಲ್ಲಿ ಕಂಡುಬರುವ ಸಮುದಾಯಗಳು ಮತ್ತು ಜಾತಿಗಳನ್ನು ಮೂರು ವಿಭಾಗಗಳಾಗಿ ನೋಡಬಹುದು.

೧. ಕೃಷಿ ಕೇಂದ್ರಿತ ಸಮುದಾಯಗಳು

೨. ವೃತ್ತಿ ಕೇಂದ್ರಿತ ಸಮುದಾಯಗಳು ಅಥವಾ ಕುಶಲಕರ್ಮಿ ಸಮುದಾಯಗಳು

೩. ಕೃಷಿ ಕಾರ್ಮಿಕ ಸಮುದಾಯಗಳು

ಕೃಷಿ ಕೇಂದ್ರಿತ ಸಮುದಾಯಗಳಲ್ಲಿ ಕೊಡವ, ಅಮ್ಮಕೊಡವ, ಹೆಗ್ಗಡೆ, ಕೊಡಗು ಗೌಡ, ಜಮ್ಮ ಮಾಪಿಳ್ಳೆಗಳು, ಅರೆಭಾಷೆ ಗೌಡರು ಹಾಗೂ ಕೊಡವ ನಾಯರ್ ಸಮುದಾಯಗಳನ್ನು ಗುರುತಿಸಬಹುದು.

ವೃತ್ತಿ ಕೇಂದ್ರಿತ ಸಮುದಾಯಗಳಲ್ಲಿ ಐರಿ(ಬಡಗಿಗಳು), ಗೊಲ್ಲ(ಗೋಪಾಲರು), ಕೋಯವ (ಮಡಿಕೆ ತಯಾರಕರು), ಕೊಲ್ಲ(ಕಬ್ಬಿಣದ ಕೆಲಸ ಮಾಡುವವರು), ಬಣ್ಣ(ಕೋಲ ಕಟ್ಟುವವರು), ಕಾಪಾಳ(ಕಾವಲುಗಾರರು), ಕುಡಿಯ(ಮರದಿಂದ ಹೆಂಡ ಇಳಿಸುವವರು), ನಾಯಿಂದ(ಕ್ಷೌರಿಕರು), ಮಡಿವಾಳ(ಬಟ್ಟೆ ಶುದ್ಧೀಕರಿಸುವವರು), ಪಣಿಕ ಮತ್ತು ಮಲೆಯ(ಕೋಲ ಕಟ್ಟುವುದು ಮತ್ತು ನಾಟಿ ವೈದ್ಯರು ಹಾಗೂ ಸಣ್ಣಪುಟ್ಟ ತಾಂತ್ರಿಕರು), ಮೇದ(ಬುಟ್ಟಿ ಹೆಣೆಯುವವರು), ಕಣಿಯ (ಜೋತಿಷಿಗಳು ಮತ್ತು ತಾಂತ್ರಿಕರು), ಬಾಣಿಯ(ಎಣ್ಣೆ ತೆಗೆಯುವವರು) ಮೊದಲಾದ ಸಮುದಾಯ ಗಳನ್ನು ಗುರುತಿಸಬಹುದು.

ಕೃಷಿ ಕಾರ್ಮಿಕ ವರ್ಗದಲ್ಲಿ ಪ್ರಮುಖವಾಗಿ ಕೆಂಬಟ್ಟಿಯವರು ಕಾಣಿಸಿಕೊಳ್ಳುತ್ತಾರೆ. ಇವರು ಸಾಂಪ್ರದಾಯಿಕ ವಾದ್ಯ ನುಡಿಸುವವರೂ ಆಗಿದ್ದಾರೆ. ಕೊಡಗಿನಲ್ಲಿ ಇವರಲ್ಲದೆ ಪ್ರಮುಖವಾಗಿ ಕಂಡುಬರುವ ಮಾದಿಗರು, ಮಾರಿ ಹೊಲೆಯರು, ಯರವರು, ಬೆಟ್ಟ ಕುರುಬರು, ಜೇನುಕುರುಬರು, ಪಣಿಯರವರು, ಪಂಜಿರಿಯರವರು, ಬಡಗಯರವರು, ಪಾಲೆಗಳು, ಕುಕ್ಕ ಹೊಲೆಯರು, ಅಡಿಯರು, ಮರ್ತಹೊಲೆಯರು ಮತ್ತು ಕಾಪಾಳರುಗಳವರನ್ನು ಶತಮಾನಗಳಿಂದ ಗುಲಾಮ ಸಮುದಾಯದವರು ಎಂದು ಗುರ್ತಿಸಲಾಗಿದೆ(ತಂಬಂಡ, ೨೦೦೦:೪೭).

ಕೊಡವ ಸಮುದಾಯವು ಕೊಡಗಿನ ಸಾಮಾಜಿಕ ಸಂರಚನೆಯಲ್ಲಿ ಸಂಖ್ಯೆಯ ದೃಷ್ಟಿಯಿಂದ ಪ್ರಬಲವರ್ಗಕ್ಕೆ ಸೇರುತ್ತದೆ. ಈ ಸಮುದಾಯಕ್ಕೆ ಕೃಷಿಯು ಪ್ರಮುಖ ಜೀವನಮಾರ್ಗವಾಗಿದ್ದು, ರಾಜಕೀಯವಾಗಿ ಲಿಂಗಾಯತ ಅರಸರ ಕಾಲದಲ್ಲಿ ಹಾಗೂ ಬ್ರಿಟಿಷರ ಆಳ್ವಿಕೆಯ ಸಂದರ್ಭದಲ್ಲಿ ಸಾಕಷ್ಟು ಪ್ರಾಬಲ್ಯವನ್ನು ಸಾಧಿಸಿತು. ಅದರ ಫಲವಾಗಿ ಜಮೀನುದಾರಿ ವರ್ಗವಾಗಿ ಈ ಸಮುದಾಯವು ರೂಪುಗೊಂಡಿರುವುದನ್ನು ಕಾಣಬಹುದು. ಕೊಡವರು ಪ್ರಬಲವರ್ಗವಾಗಿ ಪ್ರವರ್ಧಮಾನಕ್ಕೆ ಬರಲು ಕೆಲವು ಮುಖ್ಯ ಕಾರಣಗಳಿವೆ. ಕೊಡವರಲ್ಲಿ ಸಣ್ಣ, ಮಲ್ಲ ಮತ್ತು ಬೊಡ್ಡು ಕೊಡವ ಎಂದು ಮೂರು ಬಗೆಯ ಭೇದಗಳಿದ್ದು, ಒಂದು ಕಾಲಕ್ಕೆ ಪ್ರತ್ಯೇಕವಾಗಿದ್ದು ಒಂದಕ್ಕೊಂದು ವೈವಾಹಿಕ ಸಂಬಂಧಗಳಿಲ್ಲದ ಬುಡಕಟ್ಟುಗಳಾಗಿದ್ದವು(ತಂಬಂಡ, ೨೦೦೪ ಪಳಮೆ:೪೬). ಇವುಗಳು ೧೯ನೇ ಶತಮಾನದಲ್ಲಿ ಬದಲಾದ ರಾಜಕೀಯ ಹಾಗೂ ಆರ್ಥಿಕ ವಿದ್ಯಾಮಾನಗಳಿಂದ ಒಂದಾಗಿ 'ಕೊಡವ' ಎಂದು ಗುರುತಿಸಲ್ಪಡುತ್ತದೆ(ತಂಬಂಡ, ೨೦೦೪:೪೬). ಮೊದಲನೆಯದಾಗಿ ೧೯ನೇ ಶತಮಾನದ ಕೊನೆ ಹಾಗೂ ೨೦ನೇ ಶತಮಾನದ ಆದಿಯಲ್ಲಿ ಸಣ್ಣಕೊಡಗರು, ಮಲ್ಲಕೊಡಗರು ಮತ್ತು ಬೊಡ್ಡುಕೊಡಗರು ಒಟ್ಟಾಗಿ ತಾವೆಲ್ಲ ಒಂದೇ ಎಂಬ ಅಭಿಪ್ರಾಯಕ್ಕೆ ಬಂದ ಪ್ರಕ್ರಿಯೆ ಮುಖ್ಯವಾಗುತ್ತದೆ. ಇಂತಹ ವಿಚಾರಕ್ಕೆ ನಕಾರಾತ್ಮಕವಾಗಿ ನಡಿಕೇರಿಯಿಂಡ ಚಿಣ್ಣಪ್ಪನವರು "ಕೊಡಗರಲ್ಲಿ ಅಮ್ಮ, ಸಣ್ಣ, ಮಲ್ಲ ಮತ್ತು ಬೊಡ್ಡು ಕೊಡಗರೆಂಬ ನಾಲ್ಕು ಭೇದಗಳಿವೆಯೆಂದು ಕೆಲವರು ತಿಳಿದುಕೊಂಡಿದ್ದಾರೆ. ಸಣ್ಣಕೊಡಗರು, ಮಲ್ಲಕೊಡಗರು ಮತ್ತು ಬೊಡ್ಡುಕೊಡಗರೆಂಬ ಮಾತುಗಳು ಅಪಹಾಸ್ಯದ ಮಾತುಗಳಲ್ಲದೆ ಅಂಥ ಭೇದಗಳಿರುವುದಿಲ್ಲ"

(ಚಿಣ್ಣಪ್ಪ:೧೯೨೪:೨೦) ಎಂಬುದಾಗಿ ೨೦ನೆಯ ಶತಮಾನದ ಆರಂಭದಲ್ಲಿಯೇ ಅಭಿಪ್ರಾಯಪಟ್ಟಿರುವುದನ್ನು ಗಮನಿಸಬಹುದಾಗಿದೆ. ಆದರೆ ಅಮ್ಮ ಕೊಡವರನ್ನು ಕೊಡವರ ಜೊತೆಗೆ ಸೇರಿಸಿಕೊಳ್ಳುವುದು ಸರಿಯಾದ ಅಭಿಪ್ರಾಯವಲ್ಲ. ಏಕೆಂದರೆ ಅಮ್ಮ ಕೊಡವರು ಮೂಲತಃ ಸಸ್ಯಹಾರಿಗಳು ಹಾಗೂ ಅವರ ಅನೇಕ ಆಚಾರಗಳಲ್ಲಿ ಭಿನ್ನತೆಯಿದೆ. ಹಾಗೆಯೇ ಸಣ್ಣ, ಮಲ್ಲ ಮತ್ತು ಬೊಡ್ಡು ಕೊಡವರಲ್ಲಿಯೂ ಭಿನ್ನತೆಗಳಿದ್ದರೂ, ಚಾರಿತ್ರಿಕ ಅನಿವಾರ್ಯತೆಗಳಿಂದ ಒಗ್ಗಟ್ಟಾಗಿದ್ದು, ಕೊಡವರು ಸಂಖ್ಯಾ ದೃಷ್ಟಿಯಿಂದ ಪ್ರಬಲವರ್ಗವಾಗಿ ಹೊರಹೊಮ್ಮಲು ಸಾಧ್ಯವಾಯಿತು. ಹಾಗೆಯೇ ವಸಾಹತುಪೂರ್ವ ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಿ ಕೊಡವರು ರಾಜಕೀಯವಾಗಿ ಪ್ರಭಾವವುಳ್ಳವರಾಗಿದ್ದರು. ಕೊಡಗಿನ ಅರಸರ ಆಡಳಿತ ಹಾಗೂ ಬ್ರಿಟಿಷ್ ಆಡಳಿತಕ್ಕೆ ತುಂಬ ಹತ್ತಿರವಿದ್ದ ಕೊಡವ ಸಮುದಾಯದ ಮುಖಂಡರು ಕೊಡವರನ್ನು ಪ್ರಬಲರನ್ನಾಗಿಸುವಲ್ಲಿ ಪ್ರಧಾನ ಪಾತ್ರ ವಹಿಸಿದರು. ಈ ಎಲ್ಲ ವಿದ್ಯಮಾನಗಳ ಫಲಿತಾಂಶದಿಂದ ೧೯೪೨ರಲ್ಲಿ ಕೊಡವರ ಸಂಸ್ಕೃತಿಯ ಉಳಿವಿಗಾಗಿ ದೇಶತಕ್ಕರಾದ ಪರದಂಡ ಪೂವಯ್ಯನವರ ಅಧ್ಯಕ್ಷತೆಯಲ್ಲಿ ಅಖಿಲಕೊಡವ ಸಮಾಜವು ಅಸ್ತಿತ್ವಕ್ಕೆ ಬಂದಿತು(ಅಖಿಲ ಕೊಡವ ಸಮಾಜ ಸ್ಥಾಪನಾ ನಡಾವಳಿಗಳು ದಿನಾಂಕ ೩೧.೧೦.೧೯೪೨). ಬೇರೆ ಬೇರೆ ನೆಲೆಗಳಲ್ಲಿ ಉಳಿದ ಸಮುದಾಯಗಳೊಡನೆ ಸಂಬಂಧ ಹೊಂದಿರುವ ಕೊಡವ ಸಮುದಾಯವು ಸ್ವಾತಂತ್ರ್ಯಪೂರ್ವದಲ್ಲಿ ಆರೋಗ್ಯಕರ ಸಂಬಂಧ ಹೊಂದಿತ್ತು. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಗ್ರಾಮಜೀವನದಿಂದ ವಿಮುಖರಾಗಿ ಪಟ್ಟಣಗಳಲ್ಲಿ ನೆಲೆಸಲಾರಂಭಿಸಿದ ಪರಿಣಾಮದಿಂದ ಉಳಿದ ಸಮುದಾಯಗಳನ್ನು ಇವರು ನಿರ್ಲಕ್ಷಿಸಲಾರಂಭಿಸಿದರು. ಹಾಗಾಗಿ 'ಕೊಡವರು ಮತ್ತು ಕೊಡವೇತರರು' ಎಂಬ ನೂತನ ಧ್ರುವೀಕರಣಕ್ಕೆ ಕೊಡಗಿನ ಸಮಾಜವು ಒಳಗಾಗುವುದನ್ನು ಕಾಣಬಹುದು. ಇದೇ ಬಗೆಯ ಪ್ರಕ್ರಿಯೆಯನ್ನು ಕೊಡಗಿನ ಹೊರಗೆ ಲಿಂಗಾಯತ, ಒಕ್ಕಲಿಗ ಸಮುದಾಯಗಳಲ್ಲಿಯೂ ಇದೇ ಕಾಲಾವಧಿಯಲ್ಲಿ ಕಾಣಬಹುದಾಗಿದೆ.

ಕೊಡಗಿನಲ್ಲಿ ಸಾಮಾಜಿಕ ಅಂತರ್ಜಾಲ ತಾಣಗಳಲ್ಲಿ ಸಿಗುವ ಅಂಕಿಅಂಶಗಳ ಪ್ರಕಾರ **ಕೊಡವ** ಒಕ್ಕಗಳ ಗಣನೆ ಈ ರೀತಿ ಇದೆ.

**ಕೊಡವರ ಒಕ್ಕಪೆದಗಳ ಪಟ್ಟಿ**

| | | | | | |
|---|---|---|---|---|---|
| ೧. | ಆಚೆಡ | ೨. | ಅಯ್ಯಪ್ಪಮಣಿಯಂಡ | ೩. | ಅಪ್ಪಂಡೆರಂಡ |
| ೪. | ಆಚೆಯಡ | ೫. | ಅಯ್ಯಕುಟ್ಟಿರ | ೬. | ಅಪ್ಪನೆರವಂಡ |
| ೭. | ಅಚ್ಚಕಾಳಿರ | ೮. | ಅಯ್ಯಲಪಂಡ | ೯. | ಅಪ್ಪಂಜೆಟ್ಟಿರ |
| ೧೦. | ಅಚ್ಚಮಾಡ | ೧೧. | ಅಯ್ಯಮಾಡ | ೧೨. | ಅಪ್ಪಾರಂಡ |
| ೧೩. | ಅಚ್ಚಂಗಡ | ೧೪. | ಅಯ್ಯನೆರವಂಡ | ೧೫. | ಅಪ್ಪಾಟಿರ |

| | | | | | |
|---|---|---|---|---|---|
| ೧೬. | ಅಚ್ಚಾಂಡಿರ | ೧೭. | ಅಯ್ಯೇಟಿರ | ೧೮. | ಅಪ್ಪೇಂಗಡ |
| ೧೯. | ಅಚ್ಚಪಟ್ಟಿರ | ೨೦. | ಅಯಿರಿಮಣಿಯಂಡ | ೨೧. | ಅಪ್ಪುಂಗಡ |
| ೨೨. | ಅಚ್ಚಪ್ಪಂಡ | ೨೩. | ಅಜ್ಜಮಾಡ | ೨೪. | ಅಪ್ಪುಮಣಿಯಂಡ |
| ೨೫. | ಅಚ್ಚರಮಾಡ | ೨೬. | ಅಜ್ಜಮಕ್ಕಡ | ೨೭. | ಅಪ್ಪುರ |
| ೨೮. | ಆಚಿರ | ೨೯. | ಅಜ್ಜಂಡ | ೩೦. | ಆರಮಾಡ |
| ೩೧. | ಅಚ್ಚೇಂಗಡ | ೩೨. | ಅಜ್ಜಂಗಡ | ೩೩. | ಅರಮಣಮಾಡ |
| ೩೪. | ಅಚ್ಚಕಾಳಿರ | ೩೫. | ಅಜ್ಜಪ್ಪಂಡ | ೩೬. | ಆರಂಡ |
| ೩೭. | ಅಚ್ಚಿಮುಡಿಯಂಡ | ೩೮. | ಅಜ್ಜೇಟಿರ | ೩೯. | ಅರಂಗಿಪನೆರ |
| ೪೦. | ಅಚ್ಚಿಪಂಡ | ೪೧. | ಅಜ್ಜಿಕುಟ್ಟಿರ | ೪೨. | ಅರೆಯಡ |
| ೪೩. | ಅಚ್ಚಿಯಂಡ | ೪೪. | ಅಜ್ಜಿನಂಡ | ೪೫. | ಅರೆಯಂಡ |
| ೪೬. | ಅಡ್ಡಮಾಡ | ೪೭. | ಅಜ್ಜಿನಿರ | ೪೮. | ಆರುಡ |
| ೪೯. | ಅಡ್ಡಂಡ | ೫೦. | ಅಜ್ಜಿರಂಡ | ೫೧. | ಆಟಿಯಡ |
| ೫೨. | ಅಡ್ಡೆಂಡ | ೫೩. | ಅಜ್ಜಿನಿಕಂಡ | ೫೪. | ಆಟ್ರಂಗಡ |
| ೫೫. | ಅಡ್ಡೇಂಗಡ | ೫೬. | ಅಕ್ಕಪಂಡ | ೫೭. | ಅಟ್ಟಂಗಡ |
| ೫೮. | ಆದೇಂಗಡ | ೫೯. | ಅಳಮಚಂಡ | ೬೦. | ಅವರೆಮಾದಂಡ |
| ೬೧. | ಅಡಿಕೆರ | ೬೨. | ಆಲೆಮಾಡ | ೬೩. | ಅಯ್ಯಕುಟ್ಟಿರ |
| ೬೪. | ಐಲಪ್ಪಂಡ | ೬೫. | ಅಳ್ಳಂಡ | ೬೬. | ಅಯ್ಯಮಾಡ |
| ೬೭. | ಐಮುಡಿಯಂಡ | ೬೮. | ಆಪಟ್ಟಿರ | ೬೯. | ಅಯ್ಯಮ್ಮಂಡ |
| ೭೦. | ಐಪುಮಣಿಯಂಡ | ೭೧. | ಅಪ್ಪಚ್ಚಂಡ | ೭೨. | ಅಯ್ಯೇಟಿರ |
| ೭೩. | ಐಪುಮಾಡ | ೭೪. | ಅಪ್ಪಚ್ಚಂಗಡ | ೭೫. | ಅಯ್ಯುಡ |
| ೭೬. | ಐಪುರ | ೭೭ | ಅಪ್ಪಚಟ್ಟೋಳಂಡ | ೭೮. | ಅಮ್ಮಾಟಂಡ |
| ೭೯. | ಅಪ್ಪಚ್ಚಿರ | ೮೦. | ಬಾಚಳ್ಳಿರ | ೮೧. | ಬಲ್ಯಂಡಮಾಡ |
| ೮೨. | ಬೊಳ್ಳಜಿರ | ೮೩. | ಬಾಚಮಾಡ | ೮೪. | ಬಲ್ಯಾಟಂಡ |
| ೮೫. | ಬೊಳ್ಳಂಡ | ೮೬. | ಬಾಚಮಂಡ | ೮೭. | ಬಲ್ಯತೀತಿರ |

ಈ ಎಲ್ಲ ಸಮುದಾಯಗಳ ವೃತ್ತಿಗಳು ವಸಾಹತುಪೂರ್ವದ ಸಮಾಜ ಮತ್ತು ಸ್ವಾತಂತ್ರ ಪೂರ್ವ ಕಾಲಘಟ್ಟದಲ್ಲಿ ಪ್ರಚಲಿತದಲ್ಲಿತ್ತು. ಇಂಗ್ಲೀಷ್ ವಿದ್ಯಾಭ್ಯಾಸದ ಫಲವಾಗಿ ಬೇರೆ ಬೇರೆ ಕ್ಷೇತ್ರಗಳಲ್ಲಿ ನೌಕರಿ ಪಡೆದ ಸಲುವಾಗಿ ಹಾಗೂ ತಮ್ಮ ಜಮೀನುಗಳನ್ನೂ ಅಭಿವೃದ್ಧಿಪಡಿಸಿ ಉತ್ತಮ ಕೃಷಿಕರಾಗಿರುವುದರಿಂದಲೂ ತಮ್ಮ ಮೂಲ ವೃತ್ತಿಗಳನ್ನು ತ್ಯಜಿಸಿದರು ಮಾತ್ರವಲ್ಲ ಕೆಲವು ಸಂದರ್ಭದಲ್ಲಿ ತಮ್ಮ ಮೂಲ ವೃತ್ತಿಗಳ ಬಗ್ಗೆ ಕೀಳರಿಮೆ ಬೆಳೆಸಿಕೊಳ್ಳುತ್ತಾ ತಮ್ಮ ವೃತ್ತಿಯಲ್ಲಿ ಕೌಶಲ್ಯತೆಯನ್ನು ಹೆಚ್ಚಿಸಿಕೊಳ್ಳಲಿಲ್ಲ.

ಕೊಡಗಿನ ಇನ್ನೊಂದು ವರ್ಗವೆಂದರೆ **ಮನರಂಜನೆ ಹಾಗೂ ಧಾರ್ಮಿಕ ಸಾಂಸ್ಕೃತಿಕ** ನೆಲೆಗಳಲ್ಲಿ ಗುರುತಿಸಿಕೊಂಡವರು. ಇವರಲ್ಲಿ **ಬಣ್ಣರು, ಪಣಿಕರು, ಮಲೆಯರು ಮತ್ತು ಕಣಿಯರು.** ಮುಖ್ಯವಾಗಿ ಕಾಣಿಸಿಕೊಳ್ಳುತ್ತಾರೆ. ಕಣಿಯರು ಮೂಲತಃ ಜ್ಯೋತಿಷ್ಯ ಹೇಳುವವರು ಹಾಗೂ ನಾಟಿ ವೈದ್ಯರು. ಉಳಿದ ಮೂರು ಸಮುದಾಯದವರು ಭೂತದ ಕೋಲ ಕಟ್ಟುವುದು ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದವರು. ಈ ಸಮುದಾಯಗಳು ತಂತ್ರ ಮಂತ್ರಗಳಲ್ಲಿಯೂ ಪರಿಣತಿ ಹೊಂದಿದ್ದರು. ಕೊಡಗಿನ ಸ್ವಾಂತ್ರ್ಯೋತ್ತರ. ಕಾಲಘಟ್ಟದಲ್ಲಿ ಜನರ ಎಲ್ಲ **ಲೌಕಿಕ ಹಾಗೂ ಅಲೌಕಿಕ** ಸಮಸ್ಯೆಗಳಿಗೆ ಈ ಸಮುದಾಯಗಳು ಸ್ಪಂದಿಸುತ್ತಿದ್ದರು. ಹಾಗೂ ಸಮಾಜದಲ್ಲಿ ಎಲ್ಲರೂ ಇವರ ಮೇಲೆ ನಂಬಿಕೆ ಇರಿಸಿದ್ದರು. ಇತ್ತೀಚೆಗೆ ಕೊಡಗಿನ ಸಮಾಜದಲ್ಲಿ ವೈಜ್ಞಾನಿಕ ದೃಷ್ಟಿಕೋನ ಪ್ರಾಬಲ್ಯತೆಗೆ ಏರಿರುವುದರಿಂದ ಇವರ ವೃತ್ತಿಗಳೂ ಕೂಡ ವೈಶಿಷ್ಟ್ಯತೆಯನ್ನು ಕಳೆದುಕೊಂಡಿದೆ.

**ಪಣಿಕರ ಒಕ್ಕಪೆದಗಳ ಪಟ್ಟಿ**

| | | | | | |
|---|---|---|---|---|---|
| ೧. | ಪೊನ್ನಂಗಡ | ೨. | ಚೀಯಮ್ಮಂಡ | ೩. | ಪಡುವಂಡ |
| ೪. | ಪೊನ್ನಜಿರ | ೫. | ಪಣಿಕಡ | ೬. | ಪಣಿಕಡ |
| ೭. | ಪಡುವಂಡ | ೮. | ಪಣಿಕಡ | ೯. | ದೇವಮಕ್ಕಡ |
| ೧೦. | ಪೊನ್ನೆಂಗಡ | ೧೧. | ಮಡಿಯಂಡ | ೧೨. | ಮಡಿಯಂಡ |

**ಬಣ್ಣರು ಒಕ್ಕಪೆದಗಳ ಪಟ್ಟಿ**

| | | | | | |
|---|---|---|---|---|---|
| ೧. | ಬಣ್ಣರ | ೨. | ಬೊಪ್ಪಚಂಡ | ೩. | ತೆಕ್ಕಡಮ್ಮಂಡ |
| ೪. | ಭೀಮಚಂಡ | ೫. | ಬಾಚುರ | | |

ಕಣಿಯರ ಮೂಲ ವೃತ್ತಿ ಜ್ಯೋತಿಷ್ಯ ಹೇಳುವುದು ಮತ್ತು ಔಷಧಿಗಳನ್ನು ನೀಡಿ ರೋಗಿಗಳನ್ನು ಗುಣಪಡಿಸುವುದು. ಇವರು ಮೂಲತಃ ಮಲಬಾರ್ ಪ್ರಾಂತ್ಯದಿಂದ ಬಂದವರು (ಕೊಡವ ಭಾಷಿಕ ಮೂಲನಿವಾಸಿಯ, ೨೦೧೦: ೫೯). ದೇವತಾಕಾರ್ಯ, ಹಬ್ಬ ಹರಿದಿನಗಳು,

ಮದುವೆ ಮುಂಜಿ್ಗಳಿಗೆ ಮುಹೂರ್ತ ನಿಗದಿ ಮಾಡುವುದು ಮೊದಲಾದ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಕಷ್ಟಕಾರ್ಪಣ್ಯಗಳಿಗೆ ಅಲೌಕಿಕವಾಗಿ ಸಮಸ್ಯೆಗಳನ್ನು ಬಗೆಹರಿಸುತ್ತಾರೆಂಬ ನಂಬಿಕೆ ಕೊಡಗಿನವರಲ್ಲಿ ಮನೆ ಮಾಡಿತ್ತು. ಇತ್ತೀಚೆಗೆ ವೈಜ್ಞಾನಿಕತೆಯ ಕಾರಣದಿಂದ ಇವರ ಮೂಲವೃತ್ತಿಯ ಫಲಿತಾಂಶಗಳ ಬಗ್ಗೆ ಜನರಿಗೆ ನಂಬಿಕೆ ಇರುವುದಿಲ್ಲ. ಇವರ ಒಟ್ಟಾರೆ ಜನಸಂಖ್ಯೆ ಸುಮಾರು ೮೦೦ ಇರಬಹುದೆಂದು ಅಭಿಪ್ರಾಯವಿದೆ. ಕಣಿಯರು ಕೊಡಗಿನ ಅಮ್ಮಂಗೇರಿ, ಕಡಂಗ, ಚೆಂಬೆಬೆಳ್ಳೂರು, ಚೆಪ್ಪುನಾಡ್, ವಿರಾಜಪೇಟೆ, ಬಿಟ್ಟಂಗಾಲ, ಈಚೂರು, ಗೋಣಿಕೊಪ್ಪ ಮತ್ತು ಹರಿಹರ ಪ್ರದೇಶಗಳಲ್ಲಿ ಕಂಡು ಬರುತ್ತಾರೆ. ಕೆಲವೇ ಕೆಲವು ಕಣಿಯರಿಗೆ ಒಕ್ಕನಾಮಗಳಿದ್ದು ಕೆಲವರಿಗೆ ತೀರ ಇತ್ತೀಚೆಗೆ ಕೋಡಿರ ರಾವ್ ಬಹದ್ದೂರ್ ಉತ್ತಪ್ಪ ಅವರು ಮನೆತನದ ಹೆಸರನ್ನು ಕೊಟ್ಟರೆಂಬ ಮಾಹಿತಿ ಇದೆ(ಕೊಡವ ಭಾಷಿಕ ಮೂಲನಿವಾಸಿಯ ೨೦೧೦:೬೩). ಒಂದು ಕಾಲಕ್ಕೆ ಸಾಮಾಜಿಕವಾಗಿ ತನ್ನದೇ ಆದ ಸ್ಥಾನಮಾನ ಹೊಂದಿದ್ದ ಈ ಸಮುದಾಯ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದಿರುವುದು ಮಾತ್ರವಲ್ಲ, ವಿನಾಶದ ಅಂಚಿಗೂ ಬಂದು ನಿಂತಿದೆ ಎನ್ನುವುದನ್ನು ಗಮನಿಸಬೇಕಾಗಿದೆ.

**ಕಣಿಯರ ಒಕ್ಕಪದಗಳ ಪಟ್ಟಿ**

| | | | | | |
|---|---|---|---|---|---|
| ೧. | ಚೋಂಡೆಪಂಡ | ೨. | ಚೇಂದುವಂಡ | ೩. | ಬೊಳ್ಳುಮಂಡ |

**ಕುಡಿಯರ** ಸಂಸ್ಕೃತಿ ಕುಡಿಯೊಡೆದುದೇ ಕೊಡಗಿನ ಬೆಟ್ಟತಪ್ಪಲುಗಳಲ್ಲಿ. ಕುಡಿಯರ ಸಂಸ್ಕೃತಿಯ ಮೂಲಬೇರುಗಳನ್ನು ಅರಸಿ ಹೊರಟಾಗ ಇವರು ಕೇರಳ ಮತ್ತು ಕೊಡಗಿನ ಮಧ್ಯದಲ್ಲಿ ಕಂಡುಬರುವ ಪರ್ವತ ಶ್ರೇಣಿಗಳಲ್ಲಿ ವಾಸಿಸುತ್ತಿದ್ದ ಕುರುಹುಗಳು ದೊರೆಯುತ್ತವೆ. ಈಗಲೂ ಇವರು ಈ ಬೆಟ್ಟತಪ್ಪಲುಗಳಲ್ಲೇ ವಾಸಿಸುತ್ತಿದ್ದಾರೆ.

ಭೌಗೋಳಿಕವಾಗಿ ಬೇರೆಬೇರೆಯಾಗಿ ಬದುಕುತ್ತಿರುವ ಕುಡಿಯರು ಪರಸ್ಪರ ಸಂಪರ್ಕವನ್ನು ಉಳಿಸಿಕೊಂಡಿಲ್ಲ. ಕುಡಿಯರ ಸಮುದಾಯವನ್ನು ಒಗ್ಗೂಡಿಸುವ ಕೇಂದ್ರ ಸಂಸ್ಥೆಯಾಗಲಿ, ಸಾಮಾಜಿಕ ವ್ಯವಸ್ಥೆಯಾಗಲಿ, ತಾತ್ವಿಕ ನೆಲೆಯಾಗಲಿ ಇಲ್ಲದಿರುವ ಕಾರಣ ಪ್ರತಿಯೊಂದು ಕುಲದವರು ತಮ್ಮತಮ್ಮ ಜೀವನಕ್ರಮವನ್ನು ಆಯಾ ಭೌಗೋಳಿಕ ಸನ್ನಿವೇಶಕ್ಕೆ ಅನುಗುಣವಾಗಿ ಹಾಗೂ ಮೇಲುವರ್ಗದವರ ಸಂಪರ್ಕದಿಂದ ಅವರನ್ನು ಅನುಸರಿಸುವ ಪ್ರಯತ್ನದಲ್ಲಿ ಕುಡಿಯರ ಭಾಷೆ ಮತ್ತು ಸಂಸ್ಕೃತಿಯಲ್ಲಿ ಬದಲಾವಣೆ ಕಂಡುಬರುತ್ತಿರುತ್ತದೆ.

ಕುಡಿಯರನ್ನು ಮುಖ್ಯವಾಗಿ ೨ ಗುಂಪುಗಳಾಗಿ ವಿಂಗಡಿಸಬಹುದು. ನಾಲ್ಕುಮಲೆ ಕುಡಿಯರು, ಮೂರುಮಲೆಕುಡಿಯರು.

ಕೊಡಗಿನ ಬ್ರಹ್ಮಗಿರಿಯ ಪರ್ವತದ ಸಾಲಿನಲ್ಲಿಯೇ ಬರುವ ೩ ಪ್ರದೇಶಗಳಲ್ಲಿ ವಾಸಿಸುವ ಕುಡಿಯರನ್ನು ಪೂಮಲೆ, ತೇಮಲೆ, ಊಮಲೆ ಕುಡಿಯರು ಎಂದೂ ಗುರುತಿಸುತ್ತಾರೆ(ಕನ್ನಡ ವಿಷಯ ವಿಶ್ವಕೋಶ, ೨೦೦೬: ೩೦೯).

ವಿರಾಜಪೇಟೆ ತಾಲೂಕಿನ ತೋರಬೆಟ್ಟ, ಚೋಮಬೆಟ್ಟ, ಉಡುಂಬೆ ಬೆಟ್ಟ ಹಾಗೂ ಮಡಿಕೇರಿ ತಾಲೂಕಿನ ತಡಿಯಂಡಮೋಳ್, ಇಗ್ಗುತಪ್ಪ ಬೆಟ್ಟ ಸಾಲುಗಳು, ಬೆಟ್ಟತ್ತೂರು, ಕೋಪಟ್ಟಿ, ಸಂಪಾಜೆ ಹಾಗೂ ಗಾಳಿಬೀಡುವರೆಗೂ ಕುಡಿಯ ಜನಾಂಗ ನೆಲೆಸಿರುವುದನ್ನು ಕಾಣಬಹುದು.

ತೇಮಲೆ ಕುಡಿಯರು ಕರಿಕೆ ಪರಿಸರದ ಕಡೆಯ ಕೇರಳದ ಸಂಸ್ಕೃತಿಯವರಾಗಿರುತ್ತಾರೆ. ಇವರಿಗೂ ಪೂಮಲೆ ಕುಡಿಯರಿಗೂ ಸಂಸ್ಕೃತಿಯಲ್ಲಿ ಸಾಮ್ಯತೆಗಳಿಲ್ಲ. ಕುಡಿಯರಲ್ಲಿ ಒಳಪ್ರಭೇದಗಳೇನೂ ಇಲ್ಲ. ಒಂದೆಡೆಯ ಮಲೆ ಕುಡಿಯರು ಮತ್ತೊಂದೆಡೆಯ ಮಲೆಕುಡಿಯರೊಡನೆ ಸಾಮಾಜಿಕ ಸಂಪರ್ಕವನ್ನು ಉಳಿಸಿಕೊಂಡಿಲ್ಲ. ಹೀಗಾಗಿ ಪ್ರತಿಯೊಂದು ಮಲೆಕುಡಿಯರಲ್ಲಿ ಕಂಡುಬರುವ ಆಚಾರಗಳು ಅವರಿಗೇ ವಿಶಿಷ್ಟವಾಗಿವೆ.

ಕೊಡಗಿನ ಪರಿಸರದ ಕುಡಿಯರಿಗೂ ಕೃಷಿ ಕೇಂದ್ರಿತ ಸಮುದಾಯಗಳವರಿಗೂ ಹುಟ್ಟು, ಮದುವೆ, ಸಾವು ಈ ಯಾವ ಸಂದರ್ಭದ ಸಂಪ್ರದಾಯಗಳಲ್ಲಿ ಸ್ವಲ್ಪವೂ ವ್ಯತ್ಯಾಸವಿಲ್ಲ. ಮಲೆಯ ತುದಿಗಳಲ್ಲಿ ಬದುಕಿದ್ದು ನಾಡುಗಳಿಂದ ದೂರ ಉಳಿದಿದ್ದ ಈ ಸಮುದಾಯದ ಕೆಲವು ಕುಟುಂಬಗಳು ಕಾಲಾಂತರದಲ್ಲಿ ಮಲೆ ಪರ್ವತಗಳಿಂದ ತೊರೆದು ನಾಗರಿಕ ಪ್ರಪಂಚದ ಸಂಪರ್ಕ ಹೊಂದಿ ವ್ಯವಸಾಯಗಾರರಾಗಿ ರೂಪುಗೊಂಡಿದ್ದಾರೆ.

ಇನ್ನು ಕೊಡಗಿನಲ್ಲಿ ಕಂಡು ಬರುವ ಪ್ರಮುಖ ಸಮುದಾಯಗಳೆಂದರೆ ಕಾರ್ಮಿಕ ವರ್ಗವಾಗಿತ್ತು. ಇವುಗಳಲ್ಲಿ ಪ್ರಮುಖರು **ಕೆಂಬಟ್ಟಿ ಸಮುದಾಯ**. ಇವರಿಗೆ ಮೇಲ್ವರ್ಗದ ಕೃಷಿ ಕೇಂದ್ರಿತ ಸಮುದಾಯಗಳೊಂದಿಗೆ ಭಾವನಾತ್ಮಕ ಸಂಬಂಧವಿತ್ತು. ಇವರನ್ನು ಭೂಮಿ ಜಮ್ಮದಾಳುಗಳು ಎಂದು ಗುರುತಿಸುತ್ತಾರೆ. ಇವರು ಕೃಷಿ ಕಾರ್ಯಗಳಲ್ಲಿ ನೈಪುಣ್ಯತೆ ಹೊಂದಿದವರು ಆಗಿದ್ದರು. ಇವರು ಸಂಗೀತದ ಅಭಿರುಚಿ ಉಳ್ಳವರೂ ಆಗಿದ್ದರು. ಇವರ ವಾದ್ಯಗೋಷ್ಠಿಯಿಲ್ಲದೆ ಮೇಲ್ವರ್ಗದವರ ಮದುವೆ ಮುಂತಾದ ಸಮಾರಂಭಗಳು ನಡೆಯುತ್ತಿರಲಿಲ್ಲ. ಕೊಡಗಿನ ಸಾಮಾಜಿಕ ಸ್ತರ ವಿನ್ಯಾಸದಲ್ಲಿ ದಲಿತ ವರ್ಗಗಳ ಪಾತ್ರ ಬಹಳ ಮುಖ್ಯವಾದುದಾಗಿರುತ್ತದೆ. ದೇಶದ ಉಳಿದೆಡೆ ಕಂಡು ಬರುವಂತಹ ದೌರ್ಜನ್ಯಗಳು ಮತ್ತು ಅಸ್ಪೃಶ್ಯತೆಗಳ ಕಲ್ಪನೆ ಅಷ್ಟಾಗಿ ಕೊಡಗಿನಲ್ಲಿ ಕಂಡು ಬರದಿದ್ದರೂ ತಳವರ್ಗದವರನ್ನು ಮೇಲ್ವರ್ಗದವರು ವ್ಯವಸ್ಥಿತವಾಗಿ ದುಡಿಸಿಕೊಂಡದನ್ನು ಕಾಣಬಹುದು.

> ಕೊಡಗಿನ ಗುಲಾಮರನ್ನು ಭೂಮಿ ಜಮ್ಮದಾಳುಗಳು ಮತ್ತು ಒಕ್ಕಲು ಜಮ್ಮದಾಳುಗಳು ಎಂದು ವಿಂಗಡಿಸಲಾಗಿದೆ. ಭೂಮಿ ಜಮ್ಮದಾಳುಗಳು ಭೂಮಿಯೊಡನೆ ನೇರ ಸಂಬಂಧ ವನ್ನು ಹೊಂದಿದ್ದರು ಮತ್ತು ಅವರನ್ನ ಯಾವುದೇ ಕಾರಣದಿಂದ ಆ ಭೂಮಿಯಿಂದ ಬೇರ್ಪಡಿಸುವ ಹಾಗಿರಲಿಲ್ಲ. ಒಂದು ವೇಳೆ ಭೂಮಿಯನ್ನು ಮಾರುವುದಿದ್ದರೆ ಅವರೊಡನೆ ಅವರನ್ನು ಮಾರಲೇ ಬೇಕಿತ್ತು. ಒಕ್ಕಲು ಜಮ್ಮದಾಳುಗಳು ಯಜಮಾನನ ಖಾಸಗಿ ಸ್ವತ್ತಾಗಿದ್ದು ಅವರನ್ನು ಅವನು ಮಾರಲೂಬಹುದಿತ್ತು ಅಥವಾ ಅಡವಿಡಲೂಬಹುದಿತ್ತು. ಇವರು ಸದಾಕಾಲ ಯಜಮಾನನು ವಲಸೆ ಹೋದಲೆಲ್ಲಾ ಹಿಂಬಾಲಿಸಿಕೊಂಡೆ ಇರಬೇಕಿತ್ತು

ಎಂಬುದಾಗಿ ವಿಜಯ್ ಪೂಣಚ್ಚ ತಂಬಂಡ ಅವರು ಅಭಿಪ್ರಾಯ ಪಡುತ್ತಾರೆ (ತಂಬಂಡ ೨೦೦೦:೪೫) ರಾಜನ ಪನ್ಯಗಳಲ್ಲಿ ದುಡಿಯುತ್ತಿದ್ದ ಪನ್ಯದ ಆಳುಗಳನ್ನು ಕೆಲಸಕ್ಕೆ ಆಳುಗಳು ಬೇಕೆಂದು ಭಿನ್ನೈಸಿಕೊಂಡಾಗ ರಾಜನು ಕೋರಿಕೆಯನ್ನು ಮನ್ನಿಸುತ್ತಿದ್ದನು (ತಂಬಂಡ ೨೦೦೦:೪೪). ಜಮ್ಮದಾಳುಗಳಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವವರು ಕೆಂಬಟ್ಟಿ ಸಮುದಾಯ.

**ಕೆಂಬಟ್ಟಿ ಒಕ್ಕಪೆದಗಳ ಪಟ್ಟಿ**

| | | | | | |
|---|---|---|---|---|---|
| ೧. | ಅಜ್ಜಿನಕುಟ್ಟಡ | ೨. | ಅಣ್ಣಿಕುಟ್ಟಡ | ೩. | ಅವರಕುಟ್ಟಡ |
| ೬. | ಉಮ್ಮಣಕುಟ್ಟಡ | ೭. | ಓಣಿಕುಟ್ಟಡ | ೮. | ಕುಂಬಲೆ ಕುಟ್ಟಡ |
| ೧೧. | ಕಾಡಕುಟ್ಟಡ | ೧೨. | ಕೀರಕುಟ್ಟಡ | ೧೩. | ಕೊಕ್ಕೆಕುಟ್ಟಡ |
| ೧೬. | ಕೂವತಿಕುಟ್ಟಡ | ೧೭. | ಕೂಪರ ಕುಟ್ಟಡ | ೧೮. | ಕೊಟ್ಟಕುಟ್ಟಡ |
| ೨೧. | ಚವರೆಕುಟ್ಟಡ | ೨೨. | ಚೆಂಗಕುಟ್ಟಡ | ೨೩. | ಚಂಗಣಕುಟ್ಟಡ |
| ೨೬. | ತಾತಿ ಕುಟ್ಟಡ | ೨೭. | ತೆಂಬಕುಟ್ಟಡ | ೨೮. | ಭೊಡ್ಡಕುಟ್ಟಡ |
| ೩೧. | ಪೆರ್ಮಕುಟ್ಟಡ | ೩೨. | ಪೆರ್ಮಕುಟ್ಟಡ | ೩೩. | ಮೊಂದೆಕುಟ್ಟಡ |
| ೩೬. | ಮಟ್ಟಕುಟ್ಟಡ | ೩೭. | ಮೂಕುಟ್ಟಡ | ೩೮. | ಮಂಡೆಕುಟ್ಟಡ |

ಮಾರಂಗಿ ಸಮುದಾಯದವರು ಕೃಷಿ ಕಾರ್ಮಿಕರಾಗಿದ್ದು ಕೆಂಬಟ್ಟಿಗಳಷ್ಟು ಭಾವನಾತ್ಮಕತೆಯನ್ನು ಭೂಮಿಯ ಒಡೆಯನೊಡನೆ ಬೆಳೆಸಿಕೊಂಡಿರಲಿಲ್ಲ. ಈ ಸಮುದಾಯವು ಕಡಿಮೆ ಜನಸಂಖ್ಯೆಯನ್ನು ಹೊಂದಿದೆ.

**ಮಾರಂಗಿ ಒಕ್ಕಪೆದಗಳ ಪಟ್ಟಿ**

| | | | | | |
|---|---|---|---|---|---|
| ೧. | ಪೋಳೆ ಕುಟ್ಟಡ | ೨. | ಮಾಣಿಕುಟ್ಟಡ | ೩. | ಬೋಳ ಕುಟ್ಟಡ |
| ೪. | ಪೂಮಟ್ಟ್ | ೫. | ಪೊಂದೆ ಕುಟ್ಟಡ | ೬. | ದಬ್ಬಳೆ ಕುಟ್ಟಡ |
| ೭. | ಈರ ಕುಟ್ಟಡ | ೮. | ಅಂಬಲ ಕುಟ್ಟಡ | | |

ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಕೃಷಿಕಾರ್ಮಿಕರ ಅನನ್ಯತೆಯನ್ನು ಉಳಿಸಿಕೊಂಡು ಶೈಕ್ಷಣಿಕ ಹಾಗೂ ಆರ್ಥಿಕವಾಗಿ ಅವರನ್ನು ಪ್ರಬಲರಾಗಿಸುವಲ್ಲಿ ಸಂಬಂಧಪಟ್ಟ ಮೇಲ್ವರ್ಗದ ಒಕ್ಕದವರು ವಿಫಲರಾದರು. **ಮೇದ ಸಮುದಾಯ**ದವರು ಬುಟ್ಟಿಹೆಣೆಯುವುದರ ಜೊತೆಗೆ ಪರೆ ಅಥವಾ ಡೋಲು ಬಾರಿಸುತ್ತಿದ್ದರು. ಹುತ್ತರಿ ಹಬ್ಬಗಳಲ್ಲಿ ಇವರ ಡೋಲು ಬಡಿತಕ್ಕೆ ಎಲ್ಲಾ ಸಮುದಾಯವರೂ ಮಂದುಮಾನಿಗಳಲ್ಲಿ ನರ್ತಿಸುತ್ತಿದ್ದರು. ಮೇದ ಸಮುದಾಯವರ ಒಕ್ಕಪೆದಗಳ ಬಗ್ಗೆ ಮಾಹಿತಿ ಇರುವುದಿಲ್ಲ. ಇವರ ಕಲೆಗಳನ್ನು ಬೆಳೆಸುವಲ್ಲಿ ಮೇಲ್ವರ್ಗದ ಕೃಷಿಕ

ಸಮುದಾಯದವರು ಆಸಕ್ತಿ ತೋರಿಸಲಿಲ್ಲ. ಹಾಗಾಗಿ ಶತಮಾನಗಳಿಂದ ಭಾವನಾತ್ಮಕವಾಗಿ ಸಂಬಂಧ ಹೊಂದಿದ್ದ ಮೇಲ್ವರ್ಗದ ಮತ್ತು ತಳವರ್ಗದ ಈ ಸಮುದಾಯಗಳು ಇಂದು ಅಪರಿಚಿತರಾಗಿದ್ದಾರೆ.

ಇದಲ್ಲದೆ ಪ್ರಮುಖವಾಗಿ ದಕ್ಷಿಣ ಕೊಡಗಿನಲ್ಲಿ ಕಂಡುಬರುವ **ಎರವರು** ಮತ್ತು **ಕುರುಬರು, ಮಾರಂಗಿಯವರು** ಶತಮಾನಗಳಿಂದ ಕಾರ್ಮಿಕರಾಗಿ ದುಡಿದ ವರ್ಗ. ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಯಾವುದೇ ಏಳ್ಗೆಯನ್ನು ಹೊಂದದ ಈ ವರ್ಗ ಇವತ್ತು ಕೂಡ ಕಾರ್ಮಿಕರಾಗಿಯೇ ಮುಂದುವರಿದಿದ್ದಾರೆ.

ಒಂದು ಕಾಲಕ್ಕೆ ಕೊಡಗಿನ ಸ್ತರ ವಿನ್ಯಾಸ ಪರಸ್ಪರತೆಯ ಕೊಂಡಿಯಿಂದ ಕೂಡಿತ್ತು. ಒಂದು ಗ್ರಾಮದ ಬದುಕಿಗೆ ಏನೆಲ್ಲ ಬೇಕಾಗಿತ್ತೋ ಅವುಗಳೆಲ್ಲವನ್ನು ಒದಗಿಸಿಕೊಳ್ಳುವ ಸಾಮರ್ಥ್ಯ ಅಲ್ಲೇ ನೆಲಸಿದ್ದ ಎಲ್ಲ ಸಮುದಾಯಗಳಿಗೆ ಇತ್ತು. ಮೂಲಭೂತ ಅವಶ್ಯಕತೆಗಳಿಗೆ ದೂರ ಹೋಗಬೇಕಾದ ಅನಿವಾರ್ಯತೆ ಇರಲಿಲ್ಲ. ಅಷ್ಟರಮಟ್ಟಿಗಿನ ಸ್ವಾವಲಂಬನೆಯನ್ನು ಕಟ್ಟಿಕೊಂಡ ಸಮಾಜ ಅದಾಗಿತ್ತು. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ವ್ಯಕ್ತಿ ಕೇಂದ್ರಿತ ಜೀವನ ವ್ಯವಸ್ಥೆ ಪ್ರಧಾನವಾದಾಗ ಸಾಮುದಾಯಿಕ ಬದುಕು ಅರ್ಥಕಳೆದು ಕೊಂಡಿದೆ. ಹಾಗಾಗಿ ಕೊಡಗಿನ ಪೂರ್ವದ ಸಾಮಾಜಿಕ ವ್ಯವಸ್ಥೆ, ಜಾಗತೀಕರಣ ಸಂದರ್ಭದಲ್ಲಿ ತನ್ನ ದೇಸೀ ಸ್ವರೂಪವನ್ನು ಉಳಿಸಿಕೊಳ್ಳುವಲ್ಲಿ ವಿಫಲವಾಗಿದೆ ಎನ್ನಬಹುದು.

ಕೊಡಗಿನ ದಕ್ಷಿಣ ಪ್ರಾಂತದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವ ಕುರುಬ ಸಮುದಾಯವನ್ನು ಜೇನುಕುರುಬರು ಅಥವಾ ಕಾಡುಕುರುಬರು ಎಂದು ಕರೆಯಲಾಗುತ್ತದೆ.

**ಕಾಡುಕುರುಬ ಒಕ್ಕಪೆದಗಳ ಪಟ್ಟಿ**

| | | | | | |
|---|---|---|---|---|---|
| ೧. | ಈ ಪನ್ಚ ಮಕ್ಕ | ೨. | ಕಿಂದರಿ ಮಕ್ಕ | ೩. | ಕೂರ್ಗರ್ ಮಕ್ಕ |
| ೪. | ತೋಪೆಟ ಮಕ್ಕ | ೫. | ನಾನ್ಸಿ | ೬. | ಬಲ್ತಮಕ್ಕ |
| ೭. | ಬಳಕೆಗೆ | | | | |

ಶೈಕ್ಷಣಿಕವಾಗಿ, ಆರ್ಥಿಕವಾಗಿ ಸಬಲರಲ್ಲದ ಇವರು ಕಾಫಿ ಪ್ಲಾಂಟೇಷನ್‌ಗಳಲ್ಲಿ ದುಡಿ ಯುತ್ತಿದ್ದಾರೆ. 'ವರ್ಷಪೂರ್ತಿ ಒಡೆಯನ ಜಮೀನುಗಳಲ್ಲಿ ದುಡಿಯುವ ಈ ವರ್ಗದ ಜನ 'ಕುಂಡೆಹಬ್ಬ'[೪] ಎನ್ನುವ ಮನೆದೇವರ(ಎಲ್ಲಮ್ಮ/ಮಾರಮ್ಮ ತರಹದ ಕ್ಷುದ್ರದೇವತೆ) ಹಬ್ಬವನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ಈ ಹಬ್ಬದಲ್ಲಿ ಕೊಡವರೂ, ಇತರ ಮೇಲ್ವರ್ಗದವರೂ ಭಾಗವಹಿಸುತ್ತಾರೆ. ಸಣುವಂಡ ಒಕ್ಕದವರು ದಕ್ಷಿಣ ಕೊಡಗಿನಲ್ಲಿ ಈ ಹಬ್ಬದ ನೇತೃತ್ವವನ್ನು ವಹಿಸುತ್ತಾರೆ.

ಕುಂಡೆಹಬ್ಬದ ಹಾಡಿನಲ್ಲಿ ಅಶ್ಲೀಲತೆಯ ಪ್ರಯೋಗವಿದೆ ಎನಿಸಿದರೂ ಜನ ಇದರಲ್ಲಿ ಭಕ್ತಿ, ಭಾವ ಬೆರೆಸಿರುವುದು ಗೋಚರವಾಗುತ್ತದೆ. ಈ ಹಾಡಿನ ಜೊತೆ ತಾಳ ಹಾಕುತ್ತಾ ಕುಣಿಯುವ ಕುರುಬರು ವರ್ಷದ ಒಂದು ದಿನ ಈ ಹಬ್ಬದಲ್ಲಿ ಹಾಡಿಕೊಂಡು ಕುಣಿಯುತ್ತಾರೆ. ಈ ಹಾಡಿನಲ್ಲಿ ಕೊಡಗಿನ ಮೇಲುವರ್ಗದವರನ್ನು ಅವಮಾನಿಸುವ ಮಾತುಗಳಿದ್ದರೂ, ಅಶ್ಲೀಲ ಪದಪ್ರಯೋಗಗಳಿದ್ದರೂ ಈ ಆಚರಣೆಯ ಪೌರಾಣಿಕ ಕಥೆ ಹೀಗಿದೆ:

ಅಯ್ಯಪ್ಪದೇವರು ದೇವರ ಪುರದಲ್ಲಿ ನೆಲೆಸಿದ್ದ ಭದ್ರಕೊಳದ ಸೌಂದರ್ಯವತಿಯಾದ ಭದ್ರಕಾಳಿಯನ್ನು ಪ್ರೇಮಿಸಿದನಂತೆ. ಆದರೆ ಭದ್ರಕಾಳಿಯು ಅಯ್ಯಪ್ಪ ದೇವರಿಗೆ ಒಲಿಯಲಿಲ್ಲ. ಅಯ್ಯಪ್ಪ ದೇವರ ಆಶಾಭಂಗವಾದ ಕಾರಣ ಬೇಸರಗೊಂಡ ಅಯ್ಯಪ್ಪ ದೇವರ ಭಕ್ತರು ಅಥವಾ ಗಣಗಳು ಅಯ್ಯಪ್ಪ ದೇವರಿಗೆ ಕುಂಡೆ ತೋರಿಸಿ ಹೋದ ಭದ್ರಕಾಳಿಯನ್ನು ಅಶ್ಲೀಲ ಭಾಷೆಯಲ್ಲಿ ಬಯ್ಯುತ್ತಾರೆ(ನಾಗರಾಜ, ೨೦೦೪:೨೮೮).

ಈ ಹಾಡಿನಲ್ಲಿ ಕೆಳವರ್ಗದವರು ಮೇಲುವರ್ಗದವರನ್ನು ಮನಸೋಇಚ್ಛೆಯಾಗಿ ಅಶ್ಲೀಲ ಪದ ಪ್ರಯೋಗದಿಂದ ಬೈಯ್ದು, ಹಾಡಿ ಕುಣಿದರೂ ಮೇಲುವರ್ಗದವರು ಇದನ್ನು ವಿರೋಧಿಸುವುದಿಲ್ಲ. ಕೆಳವರ್ಗದವರ ಆಂತರ್ಯದ ಸಂಕಟಗಳು ಈ ಹಾಡಿನಲ್ಲಿ ಬಿತ್ತರಗೊಳ್ಳುತ್ತವೆಯಾಗಿ ಯಾಜಮಾನ್ಯ ವ್ಯವಸ್ಥೆಯ ಮೇಲಿನ ಕೋಪವನ್ನು ತೀರಿಸಿಕೊಳ್ಳಲು ಇಂತಹ ಸನ್ನಿವೇಶಗಳು ಕೆಳವರ್ಗದವರಿಗೆ ನೆರವಾಗುತ್ತವೆ. 'ಕುಂಡೆ ಒಂದು ದಿನ' ಎನ್ನುವ ಈ ಹಾಡು ಅಧಿಕಾರ ಅಶಾಶ್ವತ ಎನ್ನುವ ತಾತ್ವಿಕ ಸಂದೇಶವನ್ನು ನೀಡುವುದರ ಜೊತೆಗೆ ದಬ್ಬಾಳಿಕೆಯ ವಿರುದ್ಧ ದನಿ ಎತ್ತುವ ಅವಕಾಶವೂ ಇದೊಂದೇ ದಿನ ಎನ್ನುವ ಸೀಮಿತತೆಯನ್ನೂ ಸಾಬೀತುಪಡಿಸುತ್ತದೆ. ಈ ರೀತಿಯ ಹಬ್ಬಗಳ ಆಚರಣೆ ಸಮುದಾಯಗಳ ಒಳಗೆ ಇರುವ ಆಚರಣೆಗಳ ಭಿನ್ನ ನೆಲೆಗಳನ್ನು ಬಿಂಬಿಸುತ್ತದೆ.

**ಎರವ ಸಮುದಾಯ**ದಲ್ಲಿ **'ಪಣಿ'** ಮತ್ತು 'ಪಂಜಿರಿ' ಎರವ ಎಂಬ ಎರಡು ಭೇದಗಳಿವೆ. ಮೂಲತಃ ನಾಡು, ಕೊಡಗಿನ ದಕ್ಷಿಣ ಭಾಗ ಮತ್ತು ತಮಿಳುನಾಡಿನ ನೀಲಗಿರಿ ಪ್ರದೇಶಗಳಲ್ಲಿ ಇವರು ಕಂಡು ಬರುತ್ತಾರೆ. ಮೂಲತಃ ಕೃಷಿ ಕಾರ್ಮಿಕರಾಗಿದ್ದು ದಕ್ಷಿಣ ಕೊಡಗಿನಲ್ಲಿ ಇವರು ಹೆಚ್ಚಾಗಿ ವಾಸಿಸುತ್ತಾರೆ. ಶತಮಾನಗಳಿಂದ ವಿದ್ಯಾಭ್ಯಾಸ ಮತ್ತು ಅಭಿವೃದ್ಧಿಗಳನ್ನು ಕಾಣದೆ ಕೊಡಗಿನಲ್ಲಿನ ಭೂಮಾಲೀಕರೊಡನೆ ಕೃಷಿ ಕಾರ್ಯಗಳಲ್ಲಿ ನಿರತರಾಗಿರುವ ಸಮುದಾಯವಿದು. ಎರವ ಸಮುದಾಯದ 'ಪಂಚೇರಿ' ಎರವ ಎಂಬ ಭೇದ(ಪಂಗಡ)ಕ್ಕೆ ಸಂಬಂಧಪಟ್ಟ ಒಕ್ಕಪದಗಳನ್ನು ಈ ಕೆಳಗೆ ದಾಖಲಿಸಲಾಗಿದೆ.

**ಎರವ ಸಮುದಾಯದ ಒಕ್ಕಗಳ ಪಟ್ಟಿ**

| | | |
|---|---|---|
| ೧. | ಅಂಜುಲಾತ್‌ಲೆರಂಡ | (ಅಂಜುಲ, ಪನೆಲಿ, ಪಾವುಡ್‌ನಾನ್‌ಲೆರ) |
| ೨. | ಮಂಜುಲೆರಂಡ | (ಉಲಾಕುಚ್ಚು, ಮುದುಗುಚ್ಚು, ಕುಪ್ಪೆಲಿಯೆ ಬೈಲ್‌ನಾಡ್‌ಲಾತ್) |
| ೩. | ಇಡೆಮಲೆಲಾತ್‌ಲೆರ | (ಮಾಡಕೇರಿಇಡೆಮಲೆ) |
| ೪. | ಕಾಲಕೋಟು | (ಕಲ್ಲಿಲಾತ್‌ಲೆರ, ಮುದ್ದುರೆ ಮಮ್ಮತ್‌ಲಾತ್‌ಲೆರ) |
| ೫. | ಏವುಲಾತ್‌ಲೆರ | (ಬೆಳ್ಳೆಚಾವುಲಾತ್‌ಲಿಯೆ, ಚೈಂಡೆತಿರುಮುಂಡೆಲಾತ್‌ಲಿಯೆ) |
| ೬. | ಬಳೆಪಾತ್‌ಲೆರ | (ಕದೆಮಲೆ, ಕಚ್ಚೆಲ, ಪೊನ್ನರ್‌ಬಳೆಪ) |
| ೭. | ನಾಲಪಾಡಿ | (ಮಲೆಗಾವುಲಾತ್‌ಲೆರ) |
| ೮. | ಕಾರೆಲಾತ್‌ಲೆರ | (ಕಲ್ಲ್‌ಮನಿಲಾತ್‌ಲೆರ) |

ಈ ಮನೆತನಗಳ ವಿಂಗಡನೆಗಳು ಈಗಿನ ಕೇರಳದ ವಯನಾಡಿನ ತಿರುನೆಲ್ಲಿ ಪಾಕತ್‌ಕೋಟೆಯಲ್ಲಿ ಆಯಿತು ಎಂದು ಮಾಹಿತಿದಾರರಾದ ಸಂಜೀವ ಪಿ.ಸಿ. ಮಾಲ್ದಾರೆಯವರು ಅಭಿಪ್ರಾಯ ಪಡುತ್ತಾರೆ. ಈ ಮೇಲಿನ ಮನೆತನಗಳಲ್ಲಿ ಮಂಜುಕೆರಂಡ ಮನೆತನದವರಿಗೆ 'ಜಮ್ಮ' ಹಿಡುವಳಿ ಇದೆ ಎಂಬ ಮಾಹಿತಿ ಇದೆ.

**ಕೊಡವ ಮಡಿವಾಳ** ಒಕ್ಕಗಳು ಸಾಮಾಜಿಕ ಸಂರಚನೆಯಲ್ಲಿ ಮುಖ್ಯ ಪಾತ್ರವಹಿಸಿದ ಸಮುದಾಯವಾಗಿದೆ. ಅಳಿವಿನ ಅಂಚಿನಲ್ಲಿರುವ ಈ ಸಮುದಾಯಗಳ ಒಕ್ಕಗಳ ಹೆಸರುಗಳು ಈ ಕೆಳಗಿನಂತಿದೆ.

ಈ ಮೇಲಿನ ಎಲ್ಲ ಸಮುದಾಯಗಳ ಮನೆತನಗಳ ಹೆಸರು ನಾಡಿನ ಸಂದರ್ಭದಲ್ಲಿ ಹೇಗೆ ಮುಖ್ಯವಾಗುತ್ತದೋ ಹಾಗೆಯೇ ಜಾಗತೀಕರಣದ ಸಂದರ್ಭದಲ್ಲಿಯೂ ಅನನ್ಯತೆಯ ಸಂಕೇತಗಳಾಗುತ್ತವೆ.

**ಕೊಡವ ಮಡಿವಾಳ ಒಕ್ಕನಾಮಗಳ ಪಟ್ಟಿ**

| | | | | | |
|---|---|---|---|---|---|
| ೧. | ಆನೆಡ, | ೨. | ತುಂಬೆರ | ೩. | ಮಲ್ಲಿರ |
| ೪. | ಪಾತಂಡ | ೫. | ಮೇಕಂಡ | ೬. | ಮಾಚಮಂಡ |
| ೭. | ಮಳುವವಂಡ | ೮. | ಚೆನ್ನಪ್ಪಂಡ | | |

ಈ ಮೇಲಿನ ಎಲ್ಲ ಸಮುದಾಯಗಳ ಮನೆತನಗಳ ಹೆಸರು ನಾಡಿನ ಸಂದರ್ಭದಲ್ಲಿ ಹೇಗೆ ಮುಖ್ಯವಾಗುತ್ತದೆಯೋ ಹಾಗೆಯೇ ಜಾಗತೀಕರಣದ ಸಂದರ್ಭದಲ್ಲಿಯೂ ಅನನ್ಯತೆಯ ಸಂಕೇತಗಳಾಗುತ್ತವೆ.

* * *

ಕೊಡಗಿನಲ್ಲಿ ಕಂಡುಬರುವ ವಾದ್ಯ ವೈವಿಧ್ಯಗಳಿಗೂ ತಳವರ್ಗದ ಸಮುದಾಯಗಳಿಗೂ ಅವಿನಾಭಾವ ಸಂಬಂಧವಿದೆ. ಕೊಡಗಿನ ವಾದ್ಯಗಳಾದ ಕೊಂಬುಕೊಟ್ಟು ವಾಲಗವನ್ನು ಕೆಂಬಟ್ಟೆ ಸಮುದಾಯದವರು ನುಡಿಸುತ್ತಾರೆ. ಹಾಗೆಯೇ ಮೇದಪದೆಯನ್ನು ನುಡಿಸುತ್ತಾರೆ. ಮೇಲ್ವರ್ಗದವರು ವಾದ್ಯವನ್ನು ಆಲಿಸಿ ನರ್ತಿಸುತ್ತಾರೆಯೇ ವಿನಹ ಸ್ವತಃ ನುಡಿಸುವುದಿಲ್ಲ.

ವಾದ್ಯ ರಸಾಸ್ವಾದನೆಯ ಸಾಧನವಾದರೂ ಕೊಡಗಿನ ಒಕ್ಕಸಂಬಂಧಿ ಬದುಕಿನಲ್ಲಿ ವಾದ್ಯಗಳ ಪಾತ್ರ ಬಲು ದೊಡ್ಡದು. ಕೊಡಗಿನ ಸಮಾಜಜೀವನದಲ್ಲಿ ವಾದ್ಯಗಳು ಸಂತಸ ವತ್ತು ಸಂಕಟಗಳ ಸಂದರ್ಭದಲ್ಲಿ ಬಳಕೆಗೊಳ್ಳುತ್ತವೆ. ಕೊಡಗಿನಲ್ಲಿ ಸಮುದಾಯಗಳ ಜಾನಪದ ಕುಣಿತಗಳಲ್ಲಿ ಬಳಕೆಗೊಳ್ಳುವ ವಾದ್ಯಗಳು ವೈವಿಧ್ಯತೆಯಿಂದ ಕೂಡಿರುತ್ತದೆ. ಅಂತಹವುಗಳಲ್ಲಿ ಕೆಲವನ್ನು ಈ ಕೆಳಗಿನಂತೆ ನೋಡಬಹುದು.

೧. ಕೊಂಬ್-ಕೊಟ್ಟ್-ವಾಲಗ

೨. ಮೇದಪರೆ

೩. ಚೀನಿಕೊಟ್ಟ್

೪. ಚಂಡೆಕೊಟ್ಟ್

೫. ದುಡಿಕೊಟ್ಟ್

**ಕೊಂಬ್-ಕೊಟ್ಟ್-ವಾಲಗ:** ಮದುವೆ ಸಮಾರಂಭಗಳಲ್ಲಿ ವಿಶೇಷವಾಗಿ ಬಳಸಲ್ಪಡುವ ಈ ವಾದ್ಯವನ್ನು ಕೆಂಬಟ್ಟಿಗಳು ನುಡಿಸುತ್ತಾರೆ. ತಾಳಭರಿತವಾಗಿರುವ ಈ ವಾದ್ಯವು ನಿಯತವಾದ ಲಯದೊಂದಿಗೆ ಹೊರಹೊಮ್ಮುವುದರಿಂದ ಮೈಮರೆತು ಕುಣಿಯಲು ತುಂಬ ಅನುಕೂಲಕರವಾಗಿದೆ. ಈ ವಾಲಗ ಕೊಟ್ಟ್ ವಾದ್ಯವೃಂದದಲ್ಲಿ ಕೊಂಬ್-ಎಡೆಯಲ್ಲಿ ಊದುವ ಮತ್ತು ಸಾದವಾಗಿ ಊದುವ ತುತ್ತೂರಿ, ಗಾನ ತುತ್ತೂರಿ, ದೋಳ್‌ಗಳು ಎರಡು ಅಥವಾ ಮೂರು ತಾಳದ ಮಣಿತಟ್ಟೆಗಳು ಸೇರಿ ವಾದ್ಯವೃಂದಗಳು ಏರ್ಪಡುವವು. ಈ ವಾಲಗತ್ ವಾದ್ಯವೃಂದವನ್ನು ಮದುವೆ-ಸಾವುಗಳ ಸಂದರ್ಭದಲ್ಲಿಯೂ ಮತ್ತು ಹಬ್ಬ ಹರಿದಿನಗಳಲ್ಲಿ ದೇಗುಲದ ಸುತ್ತಲೂ ಮೊಳಗಿಸುತ್ತಾರೆ.

**ಮೇದಪರೆ:** ಮೇದಪರೆಯನ್ನು ಮೇದ ಜನಾಂಗದವರು ನುಡಿಸುತ್ತಾರೆ. ಇದು ಒಂದು ಮದ್ದಳೆ ಆಕಾರದಲ್ಲಿದ್ದು ಒಂದು ಕಡೆ ಸಣ್ಣ ಬಿಲ್ಲಿನಾಕಾರದ ಕಡ್ಡಿಯಿಂದ ಸವರಿಕೊಂಡು ಶಬ್ದ ಬರಿಸುತ್ತಾ, ಇನ್ನೊಂದು ಕಡೆ ಚಿತ್ರದ ಬಾಗಿದ ಕೋಲಿನಿಂದ ತಾಳಬದ್ಧವಾಗಿ ಹೊಡೆದು ಶಬ್ದ ಹೊರಡಿಸುವ ವಾದ್ಯ. ಮದುವೆಯಲ್ಲಿ ಕೆಂಬಟ್ಟಿಗಳ ಜೊತೆ ವಾಲಗ ಕೊಟ್ಟ್ ಜೊತೆ ಈ ವಾದ್ಯವನ್ನು ಬಳಸುತ್ತಾರೆ. ಅರೆಬಾಚೆಕಾರ ಅಥವಾ ಮದುವೆಯಾಗದವನು ಸತ್ತರೆ ಒತ್ತೆಪರೆ ಅಂದರೆ ಬೇರೆ ಯಾವುದೇ ವಾದ್ಯಗಳಿಲ್ಲದೆ ಮೇದಪರೆಯನ್ನು ಮಾತ್ರ ಬಳಸುತ್ತಾರೆ. ಹುತ್ತರಿ

ಹಬ್ಬದ ಕೋಲಾಟ ಸಂದರ್ಭದಲ್ಲಿ ಮಂದ್ ಮಾನಿಗಳಲ್ಲಿ ಕುಣಿಯಲು ಮೇದಪರೆಯನ್ನು ಮಾತ್ರ ಬಳಸುತ್ತಾರೆ.

**ಚೀನಿಕೊಟ್ಟ್:** ಇದು ಎರವ ಸಮುದಾಯದಲ್ಲಿ ಬಳಸುವ ಸಣ್ಣ ಗಾತ್ರದ ಮದ್ದಳೆ. ಸಂತಸದಾಯಕ ಸಂದರ್ಭಗಳಲ್ಲಿ ಚೀನಿಕೊಟ್ಟನ್ನು ಬಾರಿಸುತ್ತಾ ಸಮಸ್ತ ಸಮುದಾಯವೇ ಕುಣಿಯುತ್ತದೆ. ಇದಲ್ಲದೆ ಮದುವೆ ಮತ್ತು ಸಾವುಗಳ ಸಂದರ್ಭದಲ್ಲಿಯೂ ಈ ವಾದ್ಯಗಳನ್ನು ನುಡಿಸುತ್ತಾರೆ.

**ಚಂಡೆಕೊಟ್ಟ್:** ಈ ವಾದ್ಯವು ಮೂಲತಃ ಕೇರಳ ಪ್ರಾಂತ್ಯದಿಂದ ಕೊಡಗಿಗೆ ಬಂದಿದ್ದರೂ ದೇವತಾಕಾರ್ಯಗಳಲ್ಲಿ, ದೇವರ ಉತ್ಸವಗಳಲ್ಲಿ ದೇವರ ಕೋಲಂದೆರೆಗಳನ್ನು ಕಟ್ಟಿ ಕುಣಿಯುವ ಸಂದರ್ಭಗಳಲ್ಲಿ ಚಂಡೆಯನ್ನು ಹೊಡೆಯುತ್ತಾರೆ. ಈ ವಾದ್ಯಕ್ಕೆ ಪಾವಿತ್ರ್ಯತೆಯ ನಂಟು ಇರುವುದರಿಂದ ದೇವಾಲಯಗಳ ಒಳಗೆ ಚಂಡೆಗಳನ್ನು ಬಳಸುತ್ತಾರೆ. ಕೋಲ್‌ಚಂಡೆ ಮತ್ತು ಎಡೆಚಂಡೆ ಎಂಬ ಎರಡು ವಿಧದ ಚಂಡೆಗಳಿದ್ದು ಇದರ ನುಡಿಸುವಿಕೆಯಲ್ಲಿ ಶಾಸ್ತ್ರೀಯ ನೆಲೆಗಳನ್ನು ಕಾಣಬಹುದು. ಬಣ್ಣರು, ಮಲೆಯರು ಮತ್ತು ಮಾರಾಯರು ಮೊದಲಾದ ಸಮುದಾಯಗಳ ಜನರು ಈ ವಾದ್ಯಗಳನ್ನು ಮೊಳಗಿಸುವರು. ಕಾರಣವ ಕೋಲಂದೆರೆ[೨]ಗಳನ್ನು ಐನ್‌ಮನೆಯಲ್ಲಿ ಕಟ್ಟುವ ಸಂದರ್ಭದಲ್ಲಿಯೂ ಚಂಡೆಕೊಟ್ಟನ್ನು ಬಳಸುತ್ತಾರೆ.

**ದುಡಿಕೊಟ್ಟ್ ಪಾಟು**[೬]: 'ದುಡಿಯು' ಚರ್ಮದಿಂದ ಮಾಡಿದ ಒಂದು ತಾಳವಾದ್ಯ. ಬಾಳೋಪಾಟ್ ಎಂಬ ಜಾನಪದ ಲಾವಣಿ ಹಾಡುಗಳನ್ನು ನಾಲ್ಕು ಜನರು ಆಡುತ್ತಾ ದುಡಿಯನ್ನು ನುಡಿಸುತ್ತಾರೆ. ತಮ್ಮ ಸಮುದಾಯಗಳ ಮಂಗಳಕಾರ್ಯಗಳಲ್ಲಿ ಹಬ್ಬ ಹರಿದಿನಗಳಲ್ಲಿ ತಮ್ಮ ಸಮುದಾಯದ ಜನರೇ ನುಡಿಸುತ್ತಾರೆ.

## ೩.೨. ಕೊಡಗಿನ ಒಕ್ಕಗಳ ದೈವಿಕ ನೆಲೆಯ ಆಚರಣೆಗಳು

ಬದುಕಿನ ಇಂಗಿತವನ್ನು ತಿಳಿಸಿಕೊಡುವ ಮೂಲಕ ಧರ್ಮವು ಕುಟುಂಬ ಸದಸ್ಯನಿಗೆ ಜೀವನೋದ್ದೇಶವನ್ನು ಒದಗಿಸುತ್ತದೆ. ಸಾಮಾಜಿಕ ಅಳಿವು, ಉಳಿವು, ಭದ್ರತೆಗಳಿಗಾಗಿ ನಡೆಯುವ ಹೋರಾಟದಲ್ಲಿ ಧರ್ಮವು ನೆರವನ್ನೀಯುತ್ತದೆ. ಧಾರ್ಮಿಕ ಸಮಾರಂಭಗಳು, ಸಂತೋಷದಾಯಕ ಆಚರಣೆಗಳ ಸಹಭಾಗಿತ್ವ, ಸಾಮೂಹಿಕ ಕ್ರಿಯೆಗಳು ಐಕಮತ್ಯದ ಭಾವನೆಗಳನ್ನು ಜನರಿಗೆ ಒದಗಿಸಲು ನೆರವಾಗುತ್ತವೆ.

ಕುಟುಂಬ ಜೀವನವು ಧರ್ಮದೊಂದಿಗೆ ನಿಕಟವಾಗಿ ಸಂಬಂಧ ಹೊಂದಿದೆ. ಧರ್ಮವು ಸಾಮಾಜಿಕ ನಿಯಂತ್ರಣದ ಒಂದು ಮುಖ್ಯಾಂಶವಾಗಿ ಕಾರ್ಯ ನಿರ್ವಹಿಸುತ್ತದೆ. ಸಾಮಾಜಿಕ ವ್ಯವಸ್ಥೆಗೆ ಆಧಾರವನ್ನೊದಗಿಸುವುದರಲ್ಲಿ, ಸಾಂಪ್ರದಾಯಿಕ ಧರ್ಮವು ಸಮುದಾಯ ಭಾವನೆಯನ್ನು ಹೊಸದಾಗಿ ದೃಢೀಕರಿಸಿ ಬಲಪಡಿಸುತ್ತದೆ. ಕೆಲವೊಂದು ಪ್ರಕಾರದ ಸಾಮಾಜಿಕ ವರ್ತನೆಗಳಿಗೆ

ಧರ್ಮವು ಪಾವನ ಗುಣವನ್ನು ಕೊಟ್ಟು ಅಂತಹ ವರ್ತನೆಯು ಅಪೇಕ್ಷಣೀಯವಾದುದೆನ್ನುವ ಭಾವನೆಯನ್ನು ಬಲಪಡಿಸುತ್ತದೆ. ಈ ಮಾತನ್ನು ಕೊಡಗಿನ ಎವ್ವಮಕ್ಕ ದೇಬುವ ಎನ್ನುವ ಜಾನಪದೀಯ ಕಥನವು ಸ್ಪಷ್ಟವಾಗಿ ಅರ್ಥೈಸುತ್ತದೆ(ಚಂಗಪ್ಪ, ೨೦೧೦:೪೦-೪೪).

ಪನ್ನಂಗಾಲತಮ್ಮೆ ಹಾಗೂ ಇಗ್ಗುತಪ್ಪ ಸಹೋದರರ ಕಥೆ ಹೀಗಿದೆ: ನಾಲ್ಕು ನಾಡಿನ ನಾಲಡಿ ಗ್ರಾಮದ ಪರದಂಡ ಮನೆಯ ಸಮೀಪದಲ್ಲಿ ೨ ನದಿಗಳು ಸೇರುವ ಅಂಬಲಪೊಳೆ. ದಡದಲ್ಲಿ ಕಾಣಿಸಿಕೊಂಡ ಎವ್ವಮಕ್ಕ ದೇಬುವರು ಊಟ ತಯಾರಿಸುವ ಸಂದರ್ಭದಲ್ಲಿ ಪನ್ನಂಗಾಲತಮ್ಮೆಯು ಅಣ್ಣಂದಿರಿಗೆ "ಉಪ್ಪಿಲ್ಲತೆ ಉಂಚೆಂಗಿ, ತಿತ್ತಿಲ್ಲದೆ ಕೂಬೆಪ್ಪಿ" ಎನ್ನುತ್ತಾಳೆ. ಉಪ್ಪಿಲ್ಲದ ಊಟ ಮಾಡಲು ತಯಾರಿದ್ದರೆ, ಬೆಂಕಿಯಿಲ್ಲದೆ ಅನ್ನ ಬೇಯಿಸುತ್ತೇನೆ ಎನ್ನುತ್ತಾಳೆ. ಇದಕ್ಕೆ ಅಣ್ಣಂದಿರು ಸಮ್ಮತಿಸಿದಾಗ ಅಲ್ಲಿ ಪವಾಡವೊಂದು ಜರುಗುತ್ತದೆ. ಅಲ್ಲಿ ಬೆಂಕಿಯಿಲ್ಲದೆ ಅನ್ನ ತಯಾರಾಗುತ್ತದೆ. ಎಲ್ಲರೂ ಊಟ ಮಾಡಿದ ಮೇಲೆ ತಾಂಬೂಲ ಹಾಕಿಕೊಳ್ಳುತ್ತಾರೆ. ತಾಂಬೂಲ ಜಗಿಯುವಾಗ ಯಾರ ತಾಂಬೂಲವು ಹೆಚ್ಚು ಕೆಂಪಾಗಿದೆ ಎಂದು ಚರ್ಚೆಯಾಗಿ ಪರೀಕ್ಷಿಸಲು ಎಲ್ಲರೂ ಬಾಯ್ದಂಬುಲವನ್ನು ಅಂಗೈಮೇಲೆ ಹಾಕಿಕೊಳ್ಳುತ್ತಾರೆ. ಕೈಮೇಲಿರುವ ಎಂಜಲ ತಾಂಬುಲವನ್ನು ಎಲ್ಲರೂ ಎಸೆಯುತ್ತಾರೆ. ಆದರೆ ತಂಗಿಯಾದ ಪನ್ನಂಗಾಲತಮ್ಮೆ ಎಂಜಲದಂಬುಲವನ್ನು ಮತ್ತೆ ಬಾಯಿಗೆ ಹಾಕಿಕೊಳ್ಳುತ್ತಾಳೆ. ಉನ್ನತ ಜಾತಿಯವರಾದ ಇವರು ಮೈಲಿಗೆಯ ನೆಪವೊಡ್ಡಿ ಒಬ್ಬಳೇ ತಂಗಿಯಾದ ಪನ್ನಂಗಾಲತಮ್ಮೆಯನ್ನು ಜಾತಿಭ್ರಷ್ಟಳನ್ನಾಗಿ ಮಾಡುತ್ತಾರೆ. ಅರಿಯದೇ ಮಾಡಿದ ತಪ್ಪಿನ ಕಾರಣದಿಂದಾಗಿ ಜಾತಿಭ್ರಷ್ಟಳಾದ ಪನ್ನಂಗಾಲತಮ್ಮೆಯು ಅಣ್ಣಂದಿರಿಂದ ಬೇರ್ಪಡುತ್ತಾಳೆ. ಮುಂದೆ ಇದೇ ಪನ್ನಂಗಾಲತಮ್ಮೆಯು ಕೊಡಗಿನ ಕೆಳವರ್ಗದವರೆನಿಸಿಕೊಂಡ ಕೆಂಬಟ್ಟಿ ಹೊಲೆಯರ ದೇವತೆಯಾಗಿ ನೆಲೆ ನಿಂತಳೆಂಬುದು ಪ್ರತೀತಿ.

**ಎವ್ವಮಕ್ಕ ದೇಬುವ:** ಎವ್ವಮಕ್ಕ ದೇಬುವ ಎನ್ನುವ ಏಳು ಜನ ಕಾರಣಿಕ ಪುರುಷರು (ಲೋಕೋದ್ಧಾರದ ಕಾರಣಕ್ಕಾಗಿ ಭಗವಂತನೇ ಇವರನ್ನು ಭೂಲೋಕಕ್ಕೆ ಕಳುಹಿಸಿರುತ್ತಾನೆ ಎಂಬುದು ನಂಬಿಕೆ) ಲೋಕ ಕಲ್ಯಾಣಾರ್ಥವಾಗಿ ಕೇರಳದಿಂದ ಬಂದವರು. ಎವ್ವಮಕ್ಕ ದೇಬುವರು ೭ ಜನ. ಇವರಲ್ಲಿ ೬ ಜನ ಅಣ್ಣಂದಿರು ಮತ್ತು ಒಬ್ಬಳು ತಂಗಿ.

೧. ಇಗ್ಗುತಪ್ಪ, ೨. ಪಾಲೂರಪ್ಪ, ೩. ತಿರುನೆಲ್ಲಿ ಪೆಮ್ಮಯ್ಯ, ೪. ಕಾಂಞರಾಟಪ್ಪ, ೫. ತಿರುಚಂಬರಪ್ಪ, ೬. ಬೇಂದ್ರು ಕೋಲಪ್ಪ, ೭. ಪನ್ನಂಗಾಲತಮ್ಮೆ.

ಇಗ್ಗುತಪ್ಪ ಕೊಡಗಿನ ನಾಲ್ಕುನಾಡಿನ ಪಾಡಿ, ನಾಲ್ಕುನಾಡಿನ ನೆಲಜಿ ಹಾಗೂ ಪೇರೂರಿನಲ್ಲಿ ನೆಲೆ ನಿಂತಿದೆ. ಪಾಲೂರಪ್ಪ ಕೊಡಗಿನ ಪಾಲೂರು ಗ್ರಾಮದಲ್ಲಿ ಪಾಲೂರಪ್ಪ ಮಹಾಲಿಂಗೇಶ್ವರನಾಗಿ ನೆಲೆನಿಂತಿದೆ. ಪೆಮ್ಮಯ್ಯ ಕೇರಳದ ವಯನಾಡಿನ ತಿರುನೆಲ್ಲಿಯಲ್ಲಿ ಶ್ರೀ ಜನಾರ್ದನ ಸ್ವಾಮಿಯಾಗಿ ನೆಲೆ ನಿಂತಿದೆ. ಕಾಂಞರಾಟಪ್ಪ ಕೇರಳದ ಕಣ್ಣೂರಿನಲ್ಲಿ ಶ್ರೀ ವೈದ್ಯನಾಥೇಶ್ವರನಾಗಿ ನೆಲೆ

ನಿಂತಿದೆ. ತಿರುಚಂಬರಪ್ಪ ಕೇರಳದ ಕಣ್ಣೂರಿನಲ್ಲಿ ಶ್ರೀ ಕೃಷ್ಣನಾಗಿ ನೆಲೆ ನಿಂತಿದೆ. ಬೇಂದ್ರು ಕೋಲಪ್ಪ ಕೇರಳದ ತಳಿಪರಂಬುವಿನಲ್ಲಿ ಶ್ರೀ ರಾಜರಾಜೇಶ್ವರನಾಗಿ ನೆಲೆ ನಿಂತಿದೆ. ಪನ್ನಂಗಾಲತಮ್ಮೆ ಕೊಡಗಿನ ಕಕ್ಕಬ್ಬೆ ಹತ್ತಿರದಲ್ಲಿಯೂ ನೆಲೆಗೊಂಡಿದೆ(ಪರದಂಡ ಚಂಗಪ್ಪ, ೨೦೧೦:೪೯).

ಕೊಡಗಿನಲ್ಲಿ ನೆಲೆಸಿರುವ ಪಾಲೂರಪ್ಪ ತಾನು ನೆಲೆಸಿರುವ ನಾಡಿನ ಜನರ ಆರಾಧ್ಯ ದೈವ. ಕಷ್ಟ ಕಾರ್ಪಣ್ಯಗಳು ಮತ್ತು ಮಳೆ ಬೆಳೆಗಳಿಗೆ ನಾಡಿನ ಜನರು ಪಾಲೂರಪ್ಪನನ್ನು ಬೇಡಿಕೊಳ್ಳಲು ನಡೆದು ಬಂದಿರುತ್ತದೆ. ಪಾಲೂರಪ್ಪನ ಹಿರಿಯಣ್ಣ ಇಗ್ಗುತ್ತಪ್ಪ ಕೊಡಗಿನ ವರಿಷ್ಠ ದೇವರಾಗಿ ಪ್ರತಿಷ್ಠಾಪಿತರಾಗುತ್ತಾರೆ. ನಾಲ್ಕು ನಾಡಿನಲ್ಲಿ ಇಗ್ಗುತ್ತಪ್ಪ ನೆಲೆನಿಂತರೂ ಇಡೀ ಕೊಡಗಿನ ಮುಖ್ಯವಾಗಿ ಆರಾಧ್ಯ ದೈವವಾಗಿ ಕಾಣಿಸಿಕೊಳ್ಳುತ್ತಾರೆ. ಇಗ್ಗುತ್ತಪ್ಪ ಹಾಗೂ ಪಾಲೂರಪ್ಪನ ಪೂಜಾ ಕಾರ್ಯಗಳನ್ನು ಬ್ರಾಹ್ಮಣರು ಮಾಡುತ್ತಾರೆ. ಸ್ಥಳಿಯ ಕೊಡಗು ಭಾಷಿಕ ಸಮುದಾಯಗಳು ತಮ್ಮ ಕೃಷಿ ಮುಂತಾದ ಆರಂಭಗಳಿಗೆ ಇಗ್ಗುತ್ತಪ್ಪನನ್ನು ನೆನೆದು ಪ್ರಾರಂಭಿಸುತ್ತಾರೆ.

ಹೀಗೆ ಕೊಡಗು ಹಾಗೂ ಕೇರಳ ಪ್ರಾಂತ್ಯದಲ್ಲಿ ಎವ್ವಮಕ್ಕ ದೇವರುಗಳು ಕಾಣಿಸಿಕೊಂಡಿದ್ದಾರೆ. ಇಗ್ಗುತಪ್ಪ, ಪಾಲೂರಪ್ಪ, ಪನ್ನಂಗಾಲತಮ್ಮೆಯರು ಕೊಡಗಿನಲ್ಲಿ ಉಳಿದರೆ, ಉಳಿದವರು ಕೇರಳದ ಮಲಬಾರು ಪ್ರಾಂತ್ಯದಲ್ಲಿ ನೆಲೆಯಾದರು.

ಎವ್ವಮಕ್ಕ ದೇಬವ್ವರ ಈ ಕಥನವು ಮೇಲುವರ್ಗದ ವ್ಯಕ್ತಿಯೊಬ್ಬ ಕೆಳವರ್ಗದ ಜನಜೀವನವನ್ನು ಒಪ್ಪಿ ಅಪ್ಪಿಕೊಂಡ ಬಗೆಯನ್ನು ವಿವರಿಸುತ್ತದೆ. ಜಾತಿ, ವರ್ಗಸಂಘರ್ಷಗಳು ಕೊಡಗನ್ನು ಆವರಿಸಿಕೊಳ್ಳುವ ಮೊದಲೇ ಪನ್ನಂಗಾಲತಮ್ಮೆಯ ಜೀವನಾದರ್ಶನವು ಕೊಡಗಿನ ಜನರಲ್ಲಿ ಕೂಡಿಬಾಳುವುದನ್ನು ತೋರಿದೆ ಎನ್ನಲಡ್ಡಿಯಿಲ್ಲವಾದರೂ ಮೇಲ್ಜಾತಿಯ ಜನರಿಂದ ತಿರಸ್ಕರಿಸಲ್ಪಟ್ಟ ವ್ಯಕ್ತಿಯನ್ನು ಕೆಳಜಾತಿಯ, ಕೆಳಸ್ತರದ ಜನ ಒಪ್ಪಿ ಸ್ವೀಕರಿಸಿದುದನ್ನು ಬಿಂಬಿಸುವ ಈ ಕಥನವು ಮಾನವೀಯ ಮೌಲ್ಯಗಳನ್ನು ಜೀವಂತವಾಗಿ ಉಳಿಸಿರುವುದು ಕೆಳಸ್ತರದ ಜನರಲ್ಲಿಯೇ ಎನ್ನುವುದನ್ನು ಸಾರುವುದೂ ಆಗಿದೆ. ದೇವಮಾನವರೆನಿಸಿ ಕೊಂಡವರಲ್ಲಿಯೂ ಅಮಾನವೀಯ ಆಲೋಚನೆಗಳು ಮೂಡಿಬಂದು ಕೇವಲ ಮಡಿವಂತಿಕೆಯೆಂಬ ಕ್ಷುಲ್ಲಕ ಕಾರಣದಿಂದಾಗಿ ಒಡಹುಟ್ಟಿದ ತಂಗಿಯನ್ನೇ ಜಾತಿಭ್ರಷ್ಟಳೆಂಬ ಪಟ್ಟ ಕಟ್ಟಿ ದೂರವಿಟ್ಟದ್ದು ಮೇಲುಜಾತಿಯ ಜನರ ಪ್ರತಿನಿಧಿಗಳೆಂಬಂತೆ ಈ ದೇವರುಗಳು ಇವೆ ಎಂಬುದನ್ನು ನಾವಿಲ್ಲಿ ಗಮನಿಸಬೇಕಾಗಿದೆ. ಈ ಪ್ರಸಂಗದಲ್ಲಿ ಲಿಂಗೀಯ ಪ್ರಶ್ನೆಯೂ ಉದ್ಭವಿಸುತ್ತದೆ. ಮೇಲ್ಜಾತಿಯವರು ಹೆಣ್ಣಿನ ಮೇಲೆ ಮಡಿವಂತಿಕೆಯನ್ನು ಹೇರುವ ಮತ್ತು ಬಹಿಷ್ಕರಿಸುವ ಕ್ರಮವು ಹೆಣ್ಣಿಗೆ ಅವರು ನೀಡಿದ ತುಚ್ಛಸ್ಥಾನವನ್ನು ಸೂಚಿಸುತ್ತದೆ. ಕೆಳವರ್ಗದ ಕೆಂಬಟ್ಟಿ ಸಮುದಾಯ ಅದೇ ಹೆಣ್ಣನ್ನು ಪೂಜಿಸುವ ಮೂಲಕ ಉಚ್ಚಸ್ಥಾನ ನೀಡುತ್ತದೆ. ಅಲ್ಲದೆ ಪನ್ನಂಗಾಲತಮ್ಮೆ "ಜಾತಿ ಭ್ರಷ್ಟ"ಳಾದಾಗ ಕೆಂಬಟ್ಟಿ ಸಮುದಾಯವು ಆಕೆಯನ್ನು ತಮ್ಮ ದೇವತೆಯಾಗಿ ಒಪ್ಪಿಕೊಂಡದ್ದು ಮೇಲುಜಾತಿಯ ಜನರಿಗೆ ಕೊಟ್ಟ ಗೌರವವೆನ್ನಬೇಕೋ ಅಥವಾ ಮೇಲುಜಾತಿಯ ಜನರಿಗೆ ಕಲಿಸಿದ ಪಾಠವೆನ್ನಬೇಕೋ ಎನ್ನುವುದು ಸಂಕೀರ್ಣ ವಿಷಯವಾಗಿದೆ.

ಮೇಲ್ಜಾತಿಯವರಲ್ಲಿ ಹುಟ್ಟು ಪಡೆದ ಪನ್ನಂಗಾಲತಮ್ಮೆ ಕೆಳಜಾತಿಯವರ ಆರಾಧ್ಯದೈವವಾದದ್ದು ಯೋಗ್ಯತೆಗಳು ನಿರ್ಧಾರವಾಗುವುದು ಹುಟ್ಟಿನಿಂದಾಗಲಿ ಜಾತಿಯಿಂದಾಗಲಿ ಅಲ್ಲ, ನಡವಳಿಕೆಗಳಿಂದಾಗಿ ಎಂಬುದನ್ನು ಸಾಬೀತುಪಡಿಸಲಿರಬಹುದೇ ಎನ್ನಿಸದಿರದು. ಆದರೆ ಇಲ್ಲಿ ಇನ್ನೊಂದು ಮುಖ್ಯವಾದ ಅಂಶವೆಂದರೆ ಮಾನವೀಯ ಮೌಲ್ಯಗಳು ನಿಜ ಅರ್ಥದಲ್ಲಿ ನೆಲೆಗೊಂಡಿರುವುದು ಕೆಳಸ್ತರದ ಜನರಲ್ಲಿಯೇ ಎನ್ನುವುದನ್ನು ತಿಳಿಸುವುದಾದಲ್ಲಿ ಕೆಳವರ್ಗದಿಂದಲೇ ಹುಟ್ಟು ಪಡೆದ ವ್ಯಕ್ತಿಯೊಬ್ಬ ದೈವಾಂಶ ಪಡೆದು ದೈವತ್ವಕ್ಕೆ ಏರಲಿಲ್ಲವೇಕೆ? ದೈವಾಂಶಸಂಭೂತರೆಲ್ಲ ಮೇಲುಜಾತಿಯಲ್ಲಿಯೇ ಹುಟ್ಟಿ ಬರಬೇಕೇಕೆ ಎಂಬ ಪ್ರಶ್ನೆಗಳು ಇಲ್ಲಿ ಮುಖ್ಯವಾಗುತ್ತದೆ. ಚರ್ಚಾರ್ಹ ವಿಷಯಗಳೇನೇ ಇದ್ದರೂ ಪನ್ನಂಗಾಲತಮ್ಮೆಯ ಕಥನವು ಒಂದು ರೀತಿಯ ಜಾತ್ಯತೀತ ಧೋರಣೆಗೆ ಹಿಡಿದ ಕನ್ನಡಿ ಎನ್ನುವುದರಲ್ಲಿ ಅಡ್ಡಿ ಇರದು. ಕೊಡಗಿನ ಪನ್ನಂಗಾಲತಮ್ಮೆ ಹಬ್ಬವು ಪ್ರತೀ ವರ್ಷ ಏಪ್ರಿಲ್ ತಿಂಗಳ ೧೨-೧೩ ರಂದು ನಡೆಯುತ್ತಿದ್ದು, ಕೆಂಬಟ್ಟಿ ಸಮುದಾಯವು ನಡೆಸುವ ಈ ಹಬ್ಬವು ಕೊಡಗಿನ ಒಟ್ಟಾರೆ ಸಂಸ್ಕೃತಿಯು ಆವಿರ್ಭವಿಸಿದ ರೀತಿಯಲ್ಲಿ ನಡೆಯುವುದು. ಕೊಡಗಿನಾದ್ಯಂತ ಕಂಡುಬರುವ ಮುಖ್ಯ ಹಬ್ಬಗಳು ಮಲೆಯಾಳ ಸಂಸ್ಕೃತಿಯ ಪ್ರತಿಫಲನದಂತಿದ್ದರೂ ಕೊಡಗಿನ ಸಂಸ್ಕೃತಿಯ ಮೂಲಪುರುಷರಾದ ಕೆಂಬಟ್ಟಿ ಸಮುದಾಯದವರು ಸಾದರಪಡಿಸುವ ಪನ್ನಂಗಾಲತಮ್ಮೆ ಹಬ್ಬವು ವಾದ್ಯದಿಂದ ಹಿಡಿದು ಇತರ ಆಚರಣೆಗಳವರೆಗೆ ತಮ್ಮ ಅನನ್ಯತೆಯನ್ನು ಅನಾವರಣಗೊಳಿಸುತ್ತದೆ.

ಇಗ್ಗುತಪ್ಪ ದೇವರ ಸನ್ನಿಧಿಯ ನಡವಳಿಕೆ ಪ್ರಕಾರ ಹುತ್ತರಿ ಹಬ್ಬದ ದಿನಾಂಕ ನಿಗದಿಯಾದ ಮೇಲೆ ಆರಂಭವಾಗುವ ಎಲ್ಲಾ ಹಬ್ಬ ಹರಿದಿನಗಳಿಗೂ ಇಗ್ಗುತಪ್ಪ ದೇವರ ಸಮ್ಮತಿ ಇರುತ್ತದೆ. ಇಗ್ಗುತಪ್ಪ ದೇವರಲ್ಲದೆ ಕೇರಳದಿಂದ ೪೦೦-೫೦೦ ವರ್ಷಗಳ ಹಿಂದೆಯೇ ಕೊಡಗಿಗೆ ಬಂದ ಈಶ್ವರ, ಭಗವತಿ, ಭದ್ರಕಾಳಿ, ಅಯ್ಯಪ್ಪ, ಚಾಮುಂಡಿ, ಕುಟ್ಟಿಚಾತ, ಪೂದ, ಕುಳಿಯ ಮೊದಲಾದ ದೇವರುಗಳು ಕೊಡಗಿನಾದ್ಯಂತ ಪ್ರತಿ ನಾಡು, ಊರು, ಕೇರಿ, ಮನೆಗಳಲ್ಲಿ ನೆಲೆಗೊಂಡಿರುವುದು ಕಾಣಬರುತ್ತದೆ. ಈಶ್ವರ ಭಗವತಿ ಮತ್ತು ಅಯ್ಯಪ್ಪ ದೇವರನ್ನು ಬಿಟ್ಟರೆ ಉಳಿದೆಲ್ಲ ದೇವರುಗಳಿಗೂ ಮಾಂಸಾಹಾರ ನೈವೇದ್ಯವಾಗುತ್ತದೆ. ಜನರ ಜೀವನದಿಂದ ಮೂಡಿನಿಂತ ಈ ದೇವರುಗಳು ರಕ್ಷಣೆಯ ಕಾರ್ಯ ಹೊತ್ತಿರುವುದಲ್ಲದೆ ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಒಕ್ಕದ, ಕೇರಿಯ, ಊರಿನ, ನಾಡಿನ, ದೇಶದ ಜನತೆಯನ್ನು ಒಗ್ಗೂಡಿಸುವ ಕೆಲಸವನ್ನು ನಿರಂತರವಾಗಿ ಮಾಡುತ್ತಿವೆ. ವಿಸ್ತರಿಸಲ್ಪಟ್ಟ ಒಕ್ಕಗಳು ಕೇಂದ್ರೀಕೃತವಾಗಲು ದೈವ ದೃಷ್ಟಿಯೇ ಕಾರಣವೆನ್ನುವುದು ಇಲ್ಲಿಯ ಜನರ ನಂಬಿಕೆ.

ದಕ್ಷಿಣ ಕೊಡಗಿನ ಪಾಲಂಗಾಲದಿಂದ ಉತ್ತರ ಕೊಡಗಿನ ಮಾದಾಪುರಕ್ಕೆ ವಲಸೆ ಹೋದ ಪಾಸುರ ಒಕ್ಕವು ಮತ್ತೆ ಪಾಲಂಗಾಲವನ್ನು ಅರಸಿ ಬರುವಂತೆ ಮಾಡಿರುವುದು ಪಾಲಂಗಾಲದ ಭದ್ರಕಾಳಿ ದೇವರು ಎಂಬುದು ಇತ್ತೀಚಿನ ಬೆಳವಣಿಗೆ. ಭವಿತವ್ಯದ ಬದುಕಿನಲ್ಲಿ ಎದುರಾಗಬಹುದಾದ

ಸಂಕಟಗಳು, ಸಂದಿಗ್ಧತೆಗಳು, ಕಾರಣವಾಗಿ(ದೈವದ ಉಪೇಕ್ಷೆಗೆ ತುತ್ತಾದರೆ ಎಂಬ ಭಯ ಹೊಂದಿಯಾದರೂ) ಒಕ್ಕ, ಊರು, ನಾಡಿನ ಎಲ್ಲ ಹಬ್ಬ ಹರಿದಿನಗಳನ್ನು ಮತ್ತು ಉತ್ಸವಗಳನ್ನು ಎಲ್ಲ ಸಮುದಾಯಗಳ ಸಹಕಾರದೊಂದಿಗೆ ನಡೆಸಿಕೊಂಡು ಬರಲಾಗುತ್ತಿದೆ.

ಕೊಡಗಿನಲ್ಲಿ ಆಚರಣೆಯಲ್ಲಿರುವುದು ಕೈಲ್ ಮುಹೂರ್ತ, ಕಾವೇರಿ ಸಂಕ್ರಮಣ ಮತ್ತು ಹುತ್ತರಿ ಎಂಬ ಮೂರೇ ಹಬ್ಬ ಎಂಬ ಅಭಿಪ್ರಾಯ ಪ್ರಚಲಿತದಲ್ಲಿದೆ. ಈ ಹಬ್ಬಗಳು ಕೃಷಿ ಪ್ರಧಾನವಾದ ಸಾರ್ವತ್ರಿಕ ಹಬ್ಬಗಳಾಗಿದ್ದು ಕೊಡಗಿನಾದ್ಯಂತ ಈ ಹಬ್ಬಗಳನ್ನು ಆಚರಿಸುತ್ತಾರೆ. ಆದರೆ ಕೊಡಗಿನ ಒಂದೊಂದು ಗ್ರಾಮದಲ್ಲಿಯೂ ಆಯಾಯ ಗ್ರಾಮಗಳನ್ನು ಆಧರಿಸಿ ಹಲವಾರು ಹಬ್ಬಗಳು ಆಚರಿಸಲ್ಪಡುತ್ತವೆ. ಇಲ್ಲಿ ಇಡೀ ಗ್ರಾಮದ ಎಲ್ಲ ಒಕ್ಕಗಳೂ ಒಂದೇ ದಿನ ಮಾಡುವ ಹಬ್ಬಗಳು ಹಲವಾದರೆ ಗ್ರಾಮದ ಯಾವುದೇ ಒಂದು ಅಥವಾ ಒಂದೆರಡು ಒಕ್ಕಗಳು ತಮ್ಮತಮ್ಮ ಒಕ್ಕಸಂಬಂಧಿ ನೆಲೆಯಲ್ಲಿ ಆಚರಿಸುವ ಹಬ್ಬಗಳು ಕೆಲವು. ಗ್ರಾಮದ ಎಲ್ಲ ಒಕ್ಕಗಳಲ್ಲೂ ಸಾಮೂಹಿಕವಾಗಿ ಆಚರಿಸಲ್ಪಡುವ ಹಬ್ಬಗಳು ಆಚರಣೆಯಲ್ಲಿ ಏಕರೂಪತೆ ಹೊಂದಿರುತ್ತದೆ. ಗ್ರಾಮದ ಒಂದೆರಡು ಒಕ್ಕಗಳು ಮಾತ್ರ ಹಬ್ಬಗಳನ್ನು ತಮ್ಮ ಒಕ್ಕದಲ್ಲಿ ಮಾತ್ರ ಮಾಡುತ್ತಿದ್ದು ಆಗ ಗ್ರಾಮದ ಉಳಿದೆಡೆ ಯಾವುದೇ ಒಕ್ಕಗಳೂ ಈ ಹಬ್ಬವನ್ನು ಆಚರಿಸುವುದಿಲ್ಲ. ಅಂದರೆ ಹಬ್ಬಗಳು ಸಮಸ್ತ ಗ್ರಾಮವನ್ನು ಒಳಗೊಳ್ಳುವುದು ಒಂದೆಡೆಯಾದರೆ ಒಕ್ಕವೊಂದನ್ನು ಒಳಗೊಂಡು ಹಬ್ಬ ಆಚರಿಸುವುದು ಇನ್ನೊಂದೆಡೆ ಕಂಡುಬರುತ್ತದೆ.

ಪಾರಂಪರಿಕವಾಗಿ ಒಕ್ಕ ಒಕ್ಕಗಳು ಆಚರಿಸುತ್ತಾ ಇದ್ದ ಹಬ್ಬಗಳು ಊರಹಬ್ಬಗಳಾದವು. ಇತ್ತೀಚೆಗೆ ಊರಹಬ್ಬಗಳಿಗಿಂತ ಒಕ್ಕ/ಜಾತಿಗಳಿಗೆ ಹಬ್ಬಗಳು ಮೀಸಲಾಗಿರುವುದನ್ನು ಕಾಣಬಹುದು.

* * *

ಒಕ್ಕವೊಂದು ಗಂಡುಮಕ್ಕಳಿಲ್ಲದೆ ವಂಶ ಬೆಳೆಯಲು ಸಾಧ್ಯವಾಗದಿದ್ದಾಗ ತಮ್ಮ ಒಕ್ಕದ ಹೆಣ್ಣುಮಕ್ಕಳಿಗೆ ಬೇರೆ ಕುಟುಂಬದ ಗಂಡನ್ನು ತಂದು ಮದುವೆ ಮಾಡಿ ತಮ್ಮ ಆಸ್ತಿಪಾಸ್ತಿಗಳನ್ನು ಅವನಿಗೆ ಕೊಟ್ಟು ತಮ್ಮ ಒಕ್ಕದ ಉದ್ಧಾರಕ್ಕಾಗಿ ಇಟ್ಟುಕೊಳ್ಳುತ್ತಿದ್ದರು. ಉದಾಹರಣೆಗೆ ಮುದ್ದುರಾಜನ ಕಾಲದಲ್ಲಿ ಬೆಪ್ಪುನಾಡಿನ ಅರಮೇರಿ ಗ್ರಾಮದ ದೊಡ್ಡವ್ವ ಎಂಬ ಗೃಹಿಣಿಯು ಒಕ್ಕ ಪರಿಜೆಗಾಗಿ ಮಾತಂಡ ಉತ್ತಚ್ಚ ಎಂಬ ವ್ಯಕ್ತಿಯನ್ನು ಮದುವೆಯಾಗಿ ತನ್ನ ಮನೆಯಲ್ಲಿಟ್ಟುಕೊಂಡಳು. ಅವರಿಗೂ ೪ ಹೆಣ್ಣುಮಕ್ಕಳು ಹುಟ್ಟಿದುದರಿಂದ ತನ್ನ ೪ನೇ ಮಗಳಿಗೆ ಪಾಲೇಕಂಡ ಒಕ್ಕದ ಗಂಡನ್ನು ತಂದು ಮದುವೆ ಮಾಡಲಾಯಿತು. ಅವರಿಂದ ಬಂದ ಸಂತಾನವೇ ಈಗಿನ ಅಳಮಂಡ ಕುಟುಂಬ(ಕೃಷ್ಣಯ್ಯ, ೧೮೭೪:೧೯೯). ⁎ ಹೆಗ್ಗಡೆ ಜನಾಂಗದ ಚೊಟ್ರಂಡ ಮನೆತನ ವಿರಾಜಪೇಟೆ ತಾಲೂಕಿನ ಬಿಟ್ಟಂಗಾಲ ಪರಿಸರದಲ್ಲಿ ನೆಲೆಸಿದ್ದು ಕುಂಞಟ್ಟಿರ ಎನ್ನುವ ಇನ್ನೊಂದು ಮನೆತನವು ಗಂಡುಮಕ್ಕಳಿಲ್ಲದೆ ನಿರ್ವಂಶವಾಗುವ ಸಂದರ್ಭದಲ್ಲಿ ಈ ಚೊಟ್ರಂಡ ಗಂಡು ಒಬ್ಬ ಕುಂಞಟ್ಟಿರ ಹೆಣ್ಣನ್ನು ಮದುವೆಯಾದುದಲ್ಲದೆ ಆ ಮನೆತನದ ಮಣ್ಣಿಗೂ ವಾರಸುದಾರನಾದನು.[೬]

ಹೀಗೆ ಕುಂಞಟ್ಟಿರ ವಂಶವನ್ನು ಬೆಳೆಸಲು ಚೊಟ್ರಂಡ ವಂಶ ಕಾರಣವಾಗಿರುವುದನ್ನು ಕಾಣಬಹುದಾಗಿದೆ. ಇಂದಿಗೂ ಆ ವಂಶದಲ್ಲಿ ಕುಂಞಟ್ಟಿರ ಕಾರಣನು(ಮೂಲಪುರುಷ) ಚೊಟ್ರಂಡ ವಂಶದ ಸೋಮಯ್ಯ ಎಂಬ ವ್ಯಕ್ತಿಗೆ ಆವೇಶ ಬಂದು ಸುತ್ತಮುತ್ತಲಿನ ಜನಗಳ ಕಷ್ಟಕಾರ್ಪಣ್ಯಗಳಿಗೆ ಸ್ಪಂದಿಸುವ ಪದ್ಧತಿ ಇದೆ. ಕುಂಞಟ್ಟಿರ ಕಾರಣನು ವರ್ಷಾಂತರಗಳಿಂದ ಬೈತೂರಿಗೆ ಹೋಗದೆ ಮೂಲದೇವರಾದ ಬೈತೂರಪ್ಪನನ್ನು ಆರಾಧಿಸದೆ ಇರಲು ಬೈತೂರು ದೇವಾಲಯದಲ್ಲಿ ಆದ ಕಲಹ ಹಾಗೂ ಭಿನ್ನಾಭಿಪ್ರಾಯಗಳೇ ಕಾರಣ ಎನ್ನುವ ಮಾತಿದೆ. ಕೊಡಗಿನಲ್ಲಿ ಎಲ್ಲ ದೇವರು ಹಾಗೂ ಗುರುಕಾರಣವರು ಒಂದು ವರ್ಷಕ್ಕೊಮ್ಮೆ ಬೈತೂರಿಗೆ ಹೋಗಿ ಮೂಲದೇವರ ಅನುಗ್ರಹ ಪಡೆದು ಬರುವುದು ಇಂದಿಗೂ ವಾಡಿಕೆ.

ಆನೆ ಬೆಪ್ಪುನಾಡಿನ ಅಲ್ಲಪಿರ ಒಕ್ಕವು ಮೂಲತಃ ಯವಕಪಾಡಿ ಗ್ರಾಮದ ನಾಲ್ಕುನಾಡು ಅರಮನೆಯ ಸುತ್ತಮುತ್ತಲಿನ ಆಸ್ತಿಯನ್ನು ಹೊಂದಿದ್ದ ಪುಲಿಯಂಡ ಒಕ್ಕವಾಗಿತ್ತು. ಕೊಡಗಿನ ಅರಸರು ರಹಸ್ಯವಾಗಿ ತಮ್ಮನ್ನು ಶತ್ರುಗಳಿಂದ ಕಾಪಾಡಿಕೊಳ್ಳಲು ನಾಲ್ಕುನಾಡು ಅರಮನೆಯನ್ನು ಕಟ್ಟಿಸಿದಾಗ ಸುತ್ತಮುತ್ತಲಿನ ಕುಟುಂಬಗಳ ಆಸ್ತಿಗಳನ್ನು ತನ್ನ ವಶಕ್ಕೆ ತೆಗೆದುಕೊಂಡರು. ಹಾಗೆ ಆಸ್ತಿ ಕಳೆದುಕೊಂಡ ಕುಟುಂಬಗಳಲ್ಲಿ ಪುಲಿಯಂಡ ಕುಟುಂಬಕ್ಕೆ ರಾಜಪರಿವಾರವು ವೀರಾಜಪೇಟೆಯ ಮಗ್ಗುಲ ಗ್ರಾಮದಲ್ಲಿ ಆಸ್ತಿಯನ್ನು ಕೊಟ್ಟು ನೆಲೆಸಲು ವ್ಯವಸ್ಥೆ ಮಾಡಿತು.[೮] ಆ ಸಂದರ್ಭದಲ್ಲಿ ಪುಲಿಯಂಡ ಅಚ್ಚಯ್ಯ ಎಂಬ ವ್ಯಕ್ತಿ ಮಗ್ಗುಲ ಗ್ರಾಮಕ್ಕೆ ಹೋಗದೆ ಆನೆ ಬೆಪ್ಪುನಾಡಿನ ನಿಸ್ಸಂತತಿಯ ಅಂಚಿನಲ್ಲಿದ್ದ ಅಲ್ಲಪಿರ ಕುಟುಂಬದ ಕೊನೆಯ ಕುಡಿಯಾದ ಹೆಣ್ಣುಮಗಳನ್ನು ಮದುವೆಯಾಗಿ ಆಸ್ತಿಗೆ ನೆಲೆ ನಿಂತು ಇಂದಿನ ಅಲ್ಲಪ್ಪಿರ ಕುಟುಂಬದ ಮೂಲ ಪುರುಷನಾದನು. ಪುಲಿಯಂಡ ಹಾಗೂ ಅಲ್ಲಪ್ಪಿರ ಕುಟುಂಬಗಳು ಯಾವುದೇ ರೀತಿಯ ಸಂಬಂಧ ಸೂಕ್ಷ್ಮತೆಗಳನ್ನು ಕಾಯ್ದುಕೊಂಡಿರುವುದಿಲ್ಲ. ಹೀಗೆ ಕೊಡಗಿನಾದ್ಯಂತ ಅನೇಕ ಒಕ್ಕಗಳು ವಸಾಹತುಪೂರ್ವ ಹಾಗೂ ಬ್ರಿಟಿಷ ಆಳ್ವಿಕೆಯ ಸಂದರ್ಭದಲ್ಲಿ ಪುನರುತ್ಥಾನಗೊಂಡವು. ಪ್ರತೀ ಒಕ್ಕಗಳಲ್ಲಿ ಈ ರೀತಿಯ ಅನೇಕ ವೈರುಧ್ಯಗಳನ್ನು ಕಾಣಬಹುದು.

ಒಂದು ಕಾಲಕ್ಕೆ ಕಡಿಯತ್ತು ನಾಡಿನ ಪಾಲಂಗಾಲ ಗ್ರಾಮದ ನಿವಾಸಿಯಾಗಿದ್ದ ಪಾಚೂರ ಒಕ್ಕವು ಕೆಲವು ತಲೆಮಾರುಗಳ ಹಿಂದೆ ತಮ್ಮ ಜಾಗ, ಜಾರಿಕೆಗಳನ್ನು ಬಿಟ್ಟು ಉತ್ತರ ಕೊಡಗಿನ ಮಾದಾಪುರ ಪ್ರಾಂತ್ಯದಲ್ಲಿ ನೆಲೆಸಿದರು. ಇತ್ತೀಚೆಗೆ ಈ ಒಕ್ಕದ ಹಿರಿಯರಿಗೆ ಐನ್‌ಮನೆಯೊಂದನ್ನು ಕಟ್ಟುವ ವಿಚಾರ ಬಂತು. ಆಗ ಕೆಲವು ಸಮಸ್ಯೆಗಳು ಮತ್ತು ಅಡಚಣೆಗಳು ಅವರಿಗೆ ಎದುರಾದವು. ಇದಕ್ಕೆ ಮೂಲಕಾರಣ ಹಿಂದೆ ತಾವು ಬಿಟ್ಟು ಬಂದ ಊರಾದ ಪಾಲಂಗಾಲ ಗ್ರಾಮದ ಭದ್ರಕಾಳಿ ಅಮ್ಮನ ದರ್ಶನ ಮಾಡಿ ಆಶೀರ್ವಾದ ಪಡೆಯದೇ ಇರುವುದು ಎಂಬುದು ಪ್ರಶ್ನೆ ತಂತ್ರದ ಮೂಲಕ ತಿಳಿಯಿತು. ಆಧುನಿಕ ಯುಗದಲ್ಲಿಯೂ ಮನೆದೇವರನ್ನು ಪೂಜಿಸದೆ, ಗ್ರಾಮದೇವತೆಯನ್ನು ಆರಾಧಿಸದೆ, ದೇವಸಂಕಲ್ಪವಿಲ್ಲದೆ ಯಾವುದೇ ಕಾರ್ಯಗಳು ಸುಸೂತ್ರವಾಗಿ

ನಡೆಯಲಾರವು ಎಂಬ ಭಾವನೆ ಮರೆಯಾಗಿಲ್ಲವೆಂಬುದು ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಮುಖ್ಯವಾಗುತ್ತದೆ.[೯] ಕೊಡಗಿನ ಸಾಮಾಜಿಕ ಸ್ಥಿತ್ಯಂತರಗಳಿಗೆ ಧಾರ್ಮಿಕಾರಾಚರಣೆಗಳು ಹೇಗೆ ಕಾರಣವೋ ಧರ್ಮ ಸಂಘರ್ಷಗಳೂ ಕೂಡ ಅಷ್ಟೇ ಪ್ರಬಲ ಕಾರಣವಾಗುತ್ತವೆ ಎನ್ನುವುದನ್ನು ಇತ್ತೀಚಿನ ಕೆಲವು ಬೆಳವಣಿಗೆಗಳು ಮನದಟ್ಟು ಮಾಡುತ್ತವೆ.

ಕೊಡಗರ ಒಕ್ಕದೊಳಗಿನ ಸಾಮಾಜಿಕ ಸಂರಚನೆಯು ಮೇಲುನೋಟಕ್ಕೆ ಬಹಳ ಪೆಡಸಾಗಿರುವಂತೆ ಮತ್ತು ಪರಂಪರೆಯ ಪಾವಿತ್ರ್ಯತೆಯನ್ನು ಅಂತಃರ್ಮುಖಿಯಾಗಿ ಕಾಪಾಡಿಕೊಂಡು ಬರುತ್ತಿರುವಂತೆ ಕಂಡರೂ ಚರಿತ್ರೆಯ ಮಾರ್ಗದಲ್ಲಿ ಎಲ್ಲವನ್ನು ಸ್ವೀಕರಿಸುತ್ತ ಒಳಿತಿಗೆ ನೆರವಾದವರನ್ನು ಸ್ಮರಿಸುತ್ತಾ ಬಂದಿರುವುದನ್ನು ಕಾಣಬಹುದು. ಇದರಿಂದ ಕೊಡಗರ ಒಕ್ಕದ ಸಂಪ್ರದಾಯ, ರೀತಿ ರಿವಾಜುಗಳನ್ನು ಏಕಮುಖವಾಗಿ ನೋಡುವುದು ಅಥವಾ ಮುಚ್ಚಿದ ಸಮಂಜಸವೆಂದು ಪರಿಗಣಿಸುವುದು ಚರಿತ್ರೆಗೆ ಮಾಡಿದ ಅಪಮಾನವಾಗುತ್ತದೆ. ಕೊಡಗಿನ ಚರಿತ್ರೆಯಲ್ಲಿ ಸಂಘಟಿಸಿದ ಕೆಲವು ವಿಚಾರಗಳು ಹೀಗಿವೆ.

ವಾಟೇರಿರ ಒಕ್ಕವು ವಿರಾಜಪೇಟೆನಾಡು ಮಗ್ಗುಲ ಗ್ರಾಮದಲ್ಲಿದೆ. ಕೊಡಗಿನ ಅರಸರ ಕೋಪಕ್ಕೆ ತುತ್ತಾಗಿ ನಲುಗಿದ ಕುಟುಂಬಗಳಲ್ಲಿ ಇದು ಒಂದು ಒಕ್ಕ. ವಾಟೇರಿರ ಒಕ್ಕದ ವಕ್ತಾರ ವಿ.ಎ.ಕುಟ್ಟಪ್ಪನವರ ಪ್ರಕಾರ ಒಂದು ಕಾಲಕ್ಕೆ ಅಂದರೆ ಸುಮಾರು ೧೭ನೇ ಶತಮಾನದ ಅಂತ್ಯದಲ್ಲಿ ವಾಟೇರಿರ ಕುಟುಂಬದಲ್ಲಿ ಅಧಿಕ ಸಂಖ್ಯೆಯಲ್ಲಿ ಜನರಿದ್ದರು. ತಮ್ಮ ಕುಟುಂಬದಲ್ಲಿ ಅಧಿಕ ಜನರಿರುವುದನ್ನು ಹೆಗ್ಗಳಿಕೆಯಿಂದ ಹೇಳಿಕೊಳ್ಳಬಯಸಿದ ವಾಟೇರಿರ ಕುಟುಂಬಸ್ಥನೊಬ್ಬ 'ಕೋಟೆರ ಪಾದಿರಚ್ಚಕ್ ವಾಟೇರಿರ' ಅಂದರೆ ರಾಜನ ಕೋಟೆಯ ಅರ್ಧ ನೆರೆಯುವಷ್ಟು ಜನಸಂಖ್ಯೆ ನಮ್ಮ ಕುಟುಂಬದಲ್ಲಿದೆ ಎಂಬ ಅರ್ಥದಲ್ಲಿ ಹೇಳಿಕೊಳ್ಳುತ್ತಿದ್ದನು. ಇದನ್ನು ಕೇಳಿದ ರಾಜನ ಗೂಢಚಾರರು "ಕೋಟೆರ ಪಾದಿ ವಾಟೇರಿರ" ಅಂದರೆ ಕೋಟೆಯ ಅರ್ಧ ವಾಟೇರಿರವರದು ಎಂದು ಅರ್ಥ ಬರುವಂತೆ ರಾಜನಿಗೆ ತಪ್ಪಾಗಿ ವರದಿ ನೀಡುತ್ತಾರೆ. ರಾಜನು ಕೂಲಂಕಷವಾಗಿ ವಿಚಾರಿಸದೆ ವಾಟೇರಿರ ವಂಶದ ಈಚೆ–ಪೀಚೆಯನ್ನು(ಎಲ್ಲಾ ಸದಸ್ಯರನ್ನು) ಕಡಿದುಹಾಕಲು ಅಪ್ಪಣೆ ಕೊಡುತ್ತಾನೆ. ಅದರಂತೆ ವಾಟೇರಿರ ವಂಶವನ್ನು ನಿರ್ವಂಶ ಮಾಡಲಾಗಿ ಕೊನೆಗೆ ರಾಜನಿಗೆ ತನ್ನ ತಪ್ಪಿನ ಅರಿವಾದ ಸಂದರ್ಭದಲ್ಲಿ ಆ ವಂಶವನ್ನು ಮರುಸ್ಥಾಪನೆ ಮಾಡುವ ಉದ್ದೇಶದಿಂದ ಯಾರಾದರೂ ಆ ವಂಶದಲ್ಲಿ ಉಳಿದಿದ್ದಾರೆಯೇ ಎಂದು ವಿಚಾರಿಸಲು ಆಜ್ಞಾಪಿಸುತ್ತಾನೆ. ರಾಜಭಟರು ವಾಟೇರಿರ ವಂಶವನ್ನು ಸರ್ವನಾಶ ಮಾಡುತ್ತಿದ್ದ ಸಂದರ್ಭದಲ್ಲಿ ಮಗುವೊಂದನ್ನು ಆ ವಂಶದ ತಾಯಿಯೊಬ್ಬಳು ತಾನು ಸಾಯುವುದಕ್ಕೆ ಮುಂಚೆ ಅಕ್ಕಿ ಶೇಖರಿಸುವ ಪೆಟ್ಟಿಗೆಯಲ್ಲಿಟ್ಟು ಬಚ್ಚಿಟ್ಟಿರುತ್ತಾಳೆ. ಇದನ್ನು ರಾಜಭಟರು ಗಮನಿಸದೆ ಹೊರಟು ಹೋಗಿರುತ್ತಾರೆ. ಇಡೀ ವಂಶಕ್ಕೆ ಒಂದೇ ಕುಡಿಯಾಗಿ ಉಳಿದುಕೊಂಡ ಮಗುವಿನ ಅಳುವನ್ನು ಕೇಳಿದ, ಬೇಟೆಯಾಡಲು ಹೊರಟಿದ್ದ ದುದ್ಯಂಡ ಆಲಿ

ಎಂಬ ಕೊಡವ ಮುಸಲ್ಮಾನನು ಮಗುವನ್ನು ರಕ್ಷಿಸುತ್ತಾನೆ. ಆ ಮಗು ಉಳಿದುಕೊಂಡಿರುವ ವಿಚಾರ ತಿಳಿದ ರಾಜನು ಮಗುವಿನ ರಕ್ಷಣೆ ಪಾಲನೆಯ ಹೊಣೆಯನ್ನು ಹೊರುತ್ತಾನೆ. ಮಡಿಕೇರಿಯ ಕೋಟೆಯಲ್ಲಿಟ್ಟುಕೊಂಡು ವಿದ್ಯಾಭ್ಯಾಸ ಕೊಡಿಸಿ ಸಂಸಾರಸ್ಥನನ್ನಾಗಿ ಮಾಡುತ್ತಾನೆ. ತಮ್ಮ ಕಾರಣಪುರುಷನನ್ನು ರಕ್ಷಿಸಿದ ದುದ್ಯಂಡ ಆಲಿ ಎಂಬ ಮುಸಲ್ಮಾನ ಕಾರಣವನಿಗೆ ವಾಟೇರಿರ ವಂಶಸ್ಥರು ಎಡೆ ಇಡುತ್ತಾರೆ.[೧೦] ಕಡಂಗಾಲ ಗ್ರಾಮದಲ್ಲಿ ವಾಸವಾಗಿರುವ ಕೊಡವ ಮುಸಲ್ಮಾನರಾದ ಮಂದಮಾಡ ಒಕ್ಕದ ಮೂಲ ಪುರುಷರು ಚೌರಿರ ಮನೆತನದವರಾಗಿರುತ್ತಾರೆ ಎಂದು ಮಂದಮಾಡ ಒಕ್ಕದ ಪಟ್ಟೆದಾರರು ಹೇಳುತ್ತಾರೆ.[೧೧] ಮಂದಮಾಡ ಒಕ್ಕದ ಐನ್‌ಮನೆ, ಐಮರ–ಕನ್ನಿಕಂಬಗಳು, ಸುದರ್ಶನ ಕಿಟಕಿಗಳು ಮತ್ತು ತೂಗುದೀಪ ಮೊದಲಾದವುಗಳು ಆ ಒಕ್ಕದ ಪೂರ್ವಾಪರಗಳ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಇವು ಚಾರಿತ್ರಿಕ ಕಾಲಘಟ್ಟದಲ್ಲಿ ತಮ್ಮ ಒಕ್ಕಕ್ಕೆ ನೆರವಾದವರನ್ನು ಇಂದಿಗೂ ಸ್ಮರಿಸುತ್ತಿರುವುದರ ಪ್ರತೀಕಗಳಾಗಿವೆ.

ಪಾಲಂಗಾಲ ಗ್ರಾಮದ ನಡಿಕೇರಿಯಂಡ ಅಯ್ಯಪ್ಪ ಎಂಬ ಕಾರ್ಯಕಾರನು ಮಡಿಕೇರಿ ಅರಮನೆಯಲ್ಲಿ ಕಾರ್ಯನಿರತನಾಗಿದ್ದಾಗ ಮೈಸೂರಿನಿಂದ ಜಟ್ಟಿಯೊಬ್ಬನು ಬಂದು ತನ್ನನ್ನು ಗೆಲ್ಲುವ ಗಂಡಸು ಯಾರೂ ಇಲ್ಲವೇ ಎಂದು ರಾಜನನ್ನು ಕೆಣಕಿದಾಗ ರಾಜನು ಚಿಂತಾಕ್ರಾಂತನಾದನು. ಆಗ ರಾಜನನ್ನು ಉದ್ದೇಶಿಸಿ ಅಯ್ಯಪ್ಪನು "ರಾಜನ ಅಪ್ಪಣೆಯಾದರೆ ಇವನನ್ನು ನಾನು ಗೆಲ್ಲುವೆ" ಎಂದು ಹೇಳುತ್ತಾನೆ. ರಾಜನು "ಬೇಡ ಅಯ್ಯಪ್ಪ ಇವನನ್ನು ಗೆಲ್ಲುವುದು ಸುಲಭದ ಮಾತಲ್ಲ" ಅಂದ. ಅಯ್ಯಪ್ಪ "ನಾನು ಖಂಡಿತಾ ಗೆದ್ದು ಮಹಾಸ್ವಾಮಿಯ ಮರ್ಯಾದೆ ಉಳಿಸುತ್ತೇನೆ" ಎಂದು ಭರವಸೆ ಕೊಟ್ಟು ಜಟ್ಟಿಯೊಡನೆ ಮಲ್ಲಯುದ್ಧಕ್ಕೆ ತಯಾರಾಗುತ್ತಾನೆ. ಮೈಸೂರಿನ ಜಟ್ಟಿಯು ಪಲ್ಟಿ ಹಾಕಿಕೊಂಡು ಜಿಗಿಯುತ್ತಾ ಅಯ್ಯಪ್ಪನೆಡೆಗೆ ಬಂದಾಗ ಆಜಾನುಬಾಹುವಾಗಿದ್ದ ಅಯ್ಯಪ್ಪ ಸರಿಯಾದ ಆಯ ನೋಡಿ ಜಟ್ಟಿಯ ಎರಡು ಕಾಲುಗಳನ್ನು ಹಿಡಿದು ದೇಹವನ್ನು ನೆಲಕ್ಕೆ ಅಪ್ಪಳಿಸಿ ಜಟ್ಟಿಯ ಎದೆಯ ಮೇಲೆ ಕುಳಿತು ಪ್ರಹಾರ ಮಾಡಿಬಿಟ್ಟನು. ರಾಜನನ್ನು ನೋಡುತ್ತಾ ಅಯ್ಯಪ್ಪ "ಸ್ವಾಮಿ ಇವನನ್ನು ಕೊಂದುಬಿಡಲೇ" ಎಂದು ಕೇಳಿದಾಗ ರಾಜನು "ಬೇಡ ಅಯ್ಯಪ್ಪ ಬಿಟ್ಟು ಬಿಡು" ಎಂದು ಕೋರಿಕೊಂಡು ಅಯ್ಯಪ್ಪನಿಗೆ ಸಕಲ ಮರ್ಯಾದೆಗಳನ್ನು ಮಾಡಿ ಕಿರೀಟ, ತೊಡಂಗ್, ಕೈಕಡಗ ಹಾಗೂ ಮಡಿಕೇರಿಯಲ್ಲಿ ಜಮ್ಮವನ್ನು ಕೊಟ್ಟು ಗೌರವಿಸಿದನು.[೧೨] ಮಡಿಕೇರಿಯಿಂದ ೪೦ ಕಿ.ಮೀ. ದೂರದ ಪಾಲಂಗಾಲ ಗ್ರಾಮ ಅಯ್ಯಪ್ಪನಿಗೆ ರಾಜ ಮರ್ಯಾದೆಯೊಂದಿಗೆ ಮಡಿಕೇರಿಯಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟಿದ್ದು ಆ ಒಕ್ಕಕ್ಕೆ ಸಂದ ಗೌರವವಾಗಿತ್ತು.

ಕೊಡಗಿನ ಒಕ್ಕಗಳ ಸಂರಚನೆಯು ಬಹಳ ಸಂಕೀರ್ಣವಾಗಿದ್ದು ಅವುಗಳ ಆಂತರಿಕ ಸಂಬಂಧಗಳು ತುಂಬ ಜಟಿಲವಾಗಿದೆ. ಒಕ್ಕಗಳು ಕಾರಣಾಂತರಗಳಿಂದ ಇಬ್ಭಾಗವಾಗಿ ಬೇರೆ ಬೇರೆ ಹೆಸರಿನಿಂದ ಮುಂದುವರಿಯುತ್ತಿರುವುದಾದರೂ ತಮ್ಮದು ಸೋದರ ಒಕ್ಕಗಳೆಂದು

ಕೊಡುಕೊಳ್ಳುವ ವೈವಾಹಿಕ ಸಂಬಂಧಗಳು ನಿಷಿದ್ಧವಾಗಿರುವ ನಿದರ್ಶನಗಳೂ ಇವೆ. ಉದಾಹರಣೆಗೆ ಶ್ರೀಮಂಗಲ ನಾಡಿನ ಕುಮುಟೂರು ಗ್ರಾಮದ ಕೋಟ್ರಂಗಡ ಒಕ್ಕ ಮತ್ತು ಪೋಯ್‌ಲಂಗಡ ಒಕ್ಕಗಳ 'ಕಾರಣವ ಒಬ್ಬನೇ ಆಗಿದ್ದು, ಮುಂದೆ ಇವು ಕಾರಣಾಂತರಗಳಿಂದ ಇಬ್ಭಾಗಗೊಂಡು ಎರಡು ವಿಭಿನ್ನ ಒಕ್ಕಗಳಾಗಿ ಅಸ್ತಿತ್ವ ಪಡೆದುಕೊಂಡಿವೆ. ಆದರೆ ಇಂದಿಗೂ ಈ ಎರಡು ಒಕ್ಕಗಳಲ್ಲಿಯೂ ತಾವು ಒಂದೇ ಮೂಲದವರೆಂಬ ಅಭಿಪ್ರಾಯವಿರುವುದರಿಂದ ಕೊಡುಕೊಳ್ಳುವ ವೈವಾಹಿಕ ಸಂಬಂಧಗಳು ನಡೆಯುತ್ತಿಲ್ಲ. ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ ಇವೆರಡು ಪ್ರತ್ಯೇಕ ಒಕ್ಕಗಳಾಗಿದ್ದರೂ ಯಾವುದೇ ಒಕ್ಕದೊಳಗಿನ ಸೂತಕವು ಎರಡೂ ಒಕ್ಕಗಳಿಗೂ ಅನ್ವಯಿಸುತ್ತದೆ ಎಂದು ನಂಬಿಕೊಂಡಿದ್ದಾರೆ. ಈ ಎರಡೂ ಒಕ್ಕಗಳಿಗೆ ತೂಟುಂಗಳ(ಸ್ಮಶಾನ) ಒಂದೇ ಆಗಿರುತ್ತದೆ. ಸಾಮಾನ್ಯವಾಗಿ ಪ್ರತಿ ಒಕ್ಕಗಳಿಗೂ ಒಂದೊಂದು ತೂಟುಂಗಳ ಕೊಡಗಿನಾದ್ಯಂತ ಕಂಡುಬರುವುದನ್ನಿಲ್ಲಿ ಸ್ಮರಿಸಬಹುದು'.[೧೩]

ಪೊನ್ನಂಪೇಟೆಯ ಹಳ್ಳಿಘಟ್ಟ ಗ್ರಾಮದ ಮಚ್ಚಿಯಂಡ ಒಕ್ಕ ಮತ್ತು ಚಮ್ಮಟ್ಟಿರ ಒಕ್ಕಗಳು ಒಂದೇ ಮೂಲ ಒಕ್ಕಕ್ಕೇ ಸೇರಿದವರು. ಚಮ್ಮಟ್ಟಿರ ಒಕ್ಕವು ನಿಸ್ಸಂತತಿಯ ಅಂಚಿನಲ್ಲಿದ್ದಾಗ ಮಚ್ಚಿಯಂಡ ಒಕ್ಕದ ಪುರುಷನೊಬ್ಬನು ಚಮ್ಮಟ್ಟಿರ ಒಕ್ಕದಲ್ಲಿ ಕುತ್ತಿಗೆ ನಿಂತು(ಒಕ್ಕಪರಿಜೆ) ವಂಶೋದ್ಧಾರ ಮಾಡಲು ಕಾರಣನಾದನು. ಹಾಗಾಗಿ ಇಂದಿಗೂ ಚಮ್ಮಟಿರ ಮತ್ತು ಮಚ್ಚಿಯಂಡ ಒಕ್ಕಗಳ ನಡುವೆ ವೈವಾಹಿಕ ಸಂಬಂಧಗಳಿರುವುದಿಲ್ಲ. ಆದರೆ ಇಂದು ಈ ಎರಡೂ ಒಕ್ಕಗಳು ಅಳಿವಿನ ಅಂಚಿನಲ್ಲಿ ಇವೆ. ಈ ಎರಡೂ ಒಕ್ಕಗಳಿಗೂ ಸ್ಮಶಾನ ಒಂದೇ ಆಗಿರುವುದು ಮತ್ತೊಂದು ಅಪರೂಪದ ಸಂಗತಿ.[೧೪]

ಒಕ್ಕದ ಅಂತಸ್ತಿನ ನಿರ್ಧಾರವು ಒಕ್ಕದ ಆರ್ಥಿಕ ಸ್ಥಿತಿ ಸಾಮಾಜಿಕ ಸ್ಥಾನಮಾನ ಹಾಗೂ ಸೇನೆ, ಕ್ರೀಡೆ ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಒಕ್ಕದ ಸದಸ್ಯರು ಮಾಡಿದ ಸಾಧನೆಯನ್ನಾಧರಿಸಿರುತ್ತಿತ್ತು. ಲಿಂಗಾಯತ ಅರಸರ ಮತ್ತು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಸರ್ಕಾರಕ್ಕೆ ಹತ್ತಿರವಾಗಿದ್ದು ಮತ್ತು ಪ್ರಭಾವಿಯಾಗಿದ್ದ ಕೆಲವು ಒಕ್ಕಗಳು ಪ್ರತಿಷ್ಠಿತ ಒಕ್ಕಗಳೆನಿಸಿಕೊಂಡಿವೆ. ಅಲ್ಲದೆ ಸ್ವಾತಂತ್ರ್ಯಾನಂತರದಲ್ಲಿ ಸೈನಿಕ, ಕ್ರೀಡಾ ಮತ್ತು ರಾಜಕೀಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಾಧನೆಗೈದ ಮನೆತನಗಳು ಕೂಡ ತಮ್ಮ ಅಂತಸ್ತನ್ನು ಎತ್ತರಿಸಿಕೊಂಡಿವೆ.

ಒಕ್ಕದ ಗೌರವವನ್ನು ಕಾಪಾಡುವುದು ಪ್ರತಿಯೊಬ್ಬ ಸದಸ್ಯನ ಕರ್ತವ್ಯವಾಗಿರುತ್ತದೆ. ಏಕೆಂದರೆ ಒಕ್ಕದ ಹೆಸರಿನಲ್ಲಿ ವೈಯಕ್ತಿಕ ಗೌರವ ಕೂಡ ಅಡಗಿರುತ್ತದೆ. ಆದ್ದರಿಂದ ತಮ್ಮನ್ನು ತಾವು ಒಕ್ಕದ ಹೆಸರಿನಿಂದಲೇ ಗುರುತಿಸಿಕೊಳ್ಳಲು ಇಷ್ಟಪಡುತ್ತಾರೆ. ಉದಾಹರಣೆಗೆ ಕೊಡಂದೆರ ಕಾರ್ಯಪ್ಪ, ಕೊಡಂದೆರ ತಿಮ್ಮಯ್ಯ, ಅಪ್ಪಾರಂಡ ತಿಮ್ಮಯ್ಯ, ಚೆಪ್ಪುಡಿರ ಪೊನ್ನಪ್ಪ(ಇಲ್ಲಿ ಅಪ್ಪಾರಂಡ, ಚೆಪ್ಪುಡಿರ, ಕೊಡಂದೆರ ಒಕ್ಕಗಳು ವ್ಯಕ್ತಿಗಿಂತ ಪ್ರಧಾನವಾಗಿರುವುದು ಕಂಡುಬರುತ್ತದೆ. ಒಕ್ಕವೇ ವ್ಯಕ್ತಿಯ ವ್ಯಕ್ತಿತ್ವವನ್ನು, ಘನತೆಯನ್ನು ವೃದ್ಧಿಸುತ್ತದೆ ಇತ್ಯಾದಿ).

ಒಕ್ಕದ ಅಂತಸ್ತು ಮೇಲುವರ್ಗ ಕೆಳವರ್ಗವೆಂದಷ್ಟೇ ವರ್ಗೀಕರಿಸುವುದರಲ್ಲಿ ಮುಗಿಯುವುದಿಲ್ಲ. ಮೇಲುವರ್ಗವೆಂದು ಕರೆಸಿಕೊಳ್ಳುವ ಸಮುದಾಯಗಳಲ್ಲೂ ಸಾಕಷ್ಟು ಅಂತಸ್ತುಗಳಿವೆ. ಪೂರ್ವದಲ್ಲಿ ಮೇಂದಲೆ ನಾಡಿನವರು ಮತ್ತು ಕಿಗ್ಗಟ್ಟ್ ನಾಡಿನವರು ಸಂಬಂಧ ಬೆಳೆಸುತ್ತಿರಲಿಲ್ಲ. ವಾಣಿಜ್ಯ ಬೆಳೆಗಳು ಕೊಡಗಿನಲ್ಲಿ ಆರ್ಥಿಕ ಪ್ರಾಬಲ್ಯಕ್ಕೆ ಕಾರಣವಾದ ಮೇಲೆ ದೊಡ್ಡದೊಡ್ಡ ಬೆಳೆಗಾರರು ಪರಸ್ಪರ ಸಂಬಂಧ ಹೊಂದಲಾರಂಭಿಸಿದರು. ಬ್ರಿಟಿಷರು ಹೇಳಿದ ಮೂಲ ಕೊಡಗಿನ(ಪ್ರಾಪರ್ ಕೂರ್ಗ್) ಒಕ್ಕಗಳು ತಮ್ಮ ಪ್ರಾಬಲ್ಯ ಸಾಧಿಸಿಕೊಂಡಿದ್ದವು. ಪ್ರತಿಷ್ಠಿತ ಒಕ್ಕಗಳು ದುರ್ಬಲ ಒಕ್ಕಗಳ ಸಂಬಂಧ ಬಯಸುವುದಿಲ್ಲ. ಮದುವೆ ಸಂಬಂಧಗಳಂತೂ ಇಲ್ಲವೇ ಇಲ್ಲ. ಗೆಳೆತನ, ಲೇವಾದೇವಿ ಸಂಬಂಧಗಳಲ್ಲೂ ಒಕ್ಕದ ಹಿನ್ನೆಲೆ ಕೆಲಸ ಮಾಡುತ್ತದೆ. ಒಕ್ಕಗಳೊಳಗೇ ಬಲ್ಯಮನೆ, ಕೊಪ್ಪ, ಮೇಕ್ಯಕೊಪ್ಪ, ಸಣ್ಣಮನೆ, ದೊಡ್ಡಮನೆ ಎಂದು ತಮ್ಮನ್ನು ತಾವು ಗುರುತಿಸಿಕೊಳ್ಳುತ್ತಾರೆ. ಒಕ್ಕದೊಳಗಿನ ಭಿನ್ನಾಭಿಪ್ರಾಯಗಳು ಒಕ್ಕದ ಅಂತಸ್ತುಗಳನ್ನು ಆಧರಿಸಿ ಅಂತಸ್ತಿಗೆ ತಕ್ಕಂತೆ ಒಕ್ಕಗಳು ಒಂದಾಗುವ ಪರಿ ಕೊಡಗಿನಲ್ಲಿ ಕಾಣುತ್ತದೆ. ಪ್ರಬಲ ಒಕ್ಕಗಳು ದುರ್ಬಲ ಒಕ್ಕಗಳನ್ನು ತುಳಿಯುವ, ಶೋಷಿಸುವ, ಆಸ್ತಿಪಾಸ್ತಿ ಕಬಳಿಸುವ ಪರಿಪಾಟ ಅನೂಚಾನವಾಗಿ ನಡೆದುಬಂದಿದೆ. ಅಲ್ಲದೆ ಒಂದೇ ಒಕ್ಕದ ಎರಡು ಗುಂಪುಗಳು, ಅಣ್ಣ ತಮ್ಮಂದಿರ ಮಕ್ಕಳು ಇಬ್ಭಾಗವಾಗಿರುವುದನ್ನು ಕಾಣಬಹುದು. ಪ್ರಬಲಗುಂಪು ದುರ್ಬಲ ಗುಂಪನ್ನು 'ಚೆರಿಯ ಒಕ್ಕ' ಎಂದು ಕರೆದು ಅವಮಾನಿಸುವ ಉದಾಹರಣೆಗಳು ಹೇರಳವಾಗಿ ಸಿಗುತ್ತವೆ. ಸ್ವಾರ್ಥದ ಕಾರಣಕ್ಕೋಸ್ಕರ ಶೋಷಣೆ ಮಾಡುವ ಹಾಗೂ ಆಸ್ತಿ ಕಬಳಿಸುವ ಪ್ರಯತ್ನಗಳನ್ನು ಕೊಡಗಿನಾದ್ಯಂತ ಕಾಣಬಹುದು. ಆಧುನೀಕರಣ, ಜಾಗತೀಕರಣ, ಏನೇ ಇದ್ದರೂ ಸಮಾಜೀಕರಣದಲ್ಲಿ ಒಕ್ಕದ ಅಂತಸ್ತು ಮಾತ್ರ ಪ್ರಧಾನ ಪಾತ್ರ ವಹಿಸುವುದು ಕೊಡಗಿನಲ್ಲಿ ಇಂದಿಗೂ ಉಳಿದುಬಂದಿದೆ.

ದಕ್ಷಿಣ ಕೊಡಗಿನ ಪ್ರಾಂತದ ಗ್ರಾಮರಚನೆಯನ್ನು ಅವಲೋಕಿಸಿದರೆ ಪ್ರಬಲವರ್ಗದ ಕೊಡವರು ಪ್ರತಿ ಗ್ರಾಮದಲ್ಲಿಯೂ ಹತ್ತಕ್ಕಿಂತಲೂ ಹೆಚ್ಚು ಒಕ್ಕಗಳನ್ನು ಹೊಂದಿರುವುದು ಕಾಣಬರುತ್ತದೆ. ಆಯಾ ಒಕ್ಕಗಳ ಸಾಮರ್ಥ್ಯಕ್ಕೆ ತಕ್ಕಂತೆ ಆಸ್ತಿಪಾಸ್ತಿಗಳ ವಿಭಜನೆಯಾಗಿದ್ದು ಇಲ್ಲಿ ಸಾಮರ್ಥ್ಯವು ಬುದ್ಧಿಬಲ, ತೋಳ್ಬಲ, ಜನಸಂಖ್ಯಾಬಲವನ್ನು ಒಳಗೊಳ್ಳುತ್ತದೆ. ಹಿಂದೆ ಒಂದೊಂದು ಒಕ್ಕದಲ್ಲಿ ೩೦ರಿಂದ ೫೦ ತೋಟ್ಟ್(ತೊಟ್ಟಿಲ ಮಕ್ಕಳು) ಕುಂಞಗಳ ಸಂಖ್ಯೆ ಇರುತ್ತಿದ್ದುದು ಸಾಮಾನ್ಯವಾಗಿತ್ತು. ಆದರೆ ಇಂದು ಬಹುದೊಡ್ಡ ಒಕ್ಕದಲ್ಲಿ ವರ್ಷಕ್ಕೆ ಒಂದೆರಡು ಮಕ್ಕಳು ಹುಟ್ಟಿದರೆ ಅದೇ ದೊಡ್ಡ ಸುದ್ದಿಯಾಗುತ್ತದೆ. ಇದೆಲ್ಲವೂ ಕೊಡಗರ ಒಕ್ಕದೊಳಗಿನ ಸಾಮಾಜಿಕ ಸಂರಚನೆಯಲ್ಲಿ ಉಂಟಾದ ಬದಲಾವಣೆಗಳಾಗಿವೆ.

ಕೊಡಗಿನ ಜನಜೀವನವು ಇತರೆಡೆಗಳಿಗಿಂತ ಭಿನ್ನವಾಗಿರಲು ಪ್ರಾಕೃತಿಕ ಸನ್ನಿವೇಶ ಪ್ರಧಾನವಾಗಿ ಕಾರಣವಿರಬಹುದಾದರೂ ಕೊಡಗಿನ ಪರಿಸರದಲ್ಲಿಯ ಸಮಾಜ ಜೀವನದ ಇತಿಹಾಸ ಆಧುನಿಕತೆಯ ಚಿಂತನೆಗಳ ಒಳಹುಗಳನ್ನು ತೆರೆದಿಡುತ್ತದೆ. ಜಾತಿ ಮೀರಿದ ಜೀವನವೊಂದು ಕೊಡಗಿನಲ್ಲಿ

ಅಸ್ತಿತ್ವದಲ್ಲಿರಲು ಬದುಕಿನ ಅನಿವಾರ್ಯತೆಗಳು ಕಾರಣವಿರಬಹುದಾದರೂ ಅಂಥದೊಂದು ಜೀವನ ಇತ್ತು ಎನ್ನುವುದು ವಿಶೇಷ. ದೇಶದ ಎಲ್ಲೆಡೆ ಇರುವಂತೆ ಜಾತಿ ವ್ಯವಸ್ಥೆ ಕೊಡಗಿನಲ್ಲಿದ್ದರೂ ಜಾತಿ ಮೀರಿದ ಸಮನ್ವಯತೆಯ ಬದುಕೊಂದು ಅಲ್ಲಿತ್ತು. ಅಂತರ್ಜಾತಿ ವಿವಾಹಗಳು ಇಂದಿಗೂ ಬಹುದೊಡ್ಡ ಸುದ್ದಿಯಾಗುವ ಕಾಲದಲ್ಲಿ ನಿಂತ ನಮಗೆ ಅಂದಿನ ಕೊಡಗಿನ ಜನರ ಜೀವನವು ಸಮಾಜದ ವ್ಯವಸ್ಥೆಯೊಂದನ್ನು ಅರ್ಥೈಸಿಕೊಳ್ಳಲು, ಭಿನ್ನ ವಿಚಾರಗಳನ್ನು ಒದಗಿಸುತ್ತದೆ. ಲಿಂಗಾಯತ ಅರಸರ ಕಾಲದಲ್ಲಿ ಅಥವಾ ಅದಕ್ಕೂ ಮೊದಲು ಕೊಡಗರು ಲಿಂಗಾಯತರಾಗುತ್ತಿದ್ದುದು ಕಂಡುಬರುತ್ತದೆ. ಅಲ್ಲದೆ ರಾಜಮನೆತನದವರು ಜನಸಾಮಾನ್ಯರ ಜೊತೆ ವೈವಾಹಿಕ ಸಂಬಂಧ ಹೊಂದುವ ಪರಿ ಕಂಡುಬರುತ್ತದೆ. ಉದಾಹರಣೆಗೆ ಮಂಡೇಪಂಡ ತಿಮ್ಮಯ್ಯನೊಡನೆ ಹಾಲೇರಿ ರಾಜವಂಶದವರು ವಿವಾಹ ಸಂಬಂಧ ಹೊಂದಿದ್ದರು. ಕೊಡವ ಮನೆತನದವರಾದ ಮಂಡೆಪಂಡ ತಿಮ್ಮಯ್ಯನ ಸಮಾಧಿಯ ಮೇಲೆ ನಂದಿಯ ಮೂರ್ತಿಯಿರುವ ಆಲಯ ಕಟ್ಟಿರುವುದು ಚೆಂಬೆ ಬೆಳೆಯೂರಿನಲ್ಲಿ ಈಗಲೂ ಇದೆ. ಜಾತಿ ಜಾತಿಗಳ ನಡುವೆ ವಿವಾಹ ಸಂಬಂಧಗಳು ಏರ್ಪಡುವುದು ಅಂದು ವಿಶೇಷವೇನೂ ಆಗಿರಲಿಲ್ಲ. ಅಲ್ಲದೆ ಅದು ಬಹುದೊಡ್ಡ ಸುದ್ದಿಯೂ ಆಗುತ್ತಿರಲಿಲ್ಲ. ಹಿಂದೆ ತೀರಾ ಸಾಮಾನ್ಯ ಪ್ರಕ್ರಿಯೆಗಳೆಂಬಂತೆ ಜರುಗುತ್ತಿದ್ದ ಅಂತರ್ಜಾತಿ ವಿವಾಹಗಳು ಆಧುನಿಕ ಕೊಡಗಿನಲ್ಲಿ ಇಂದು ನಡೆದರೆ ಅದು ಬಹುದೊಡ್ಡ ಚರ್ಚೆಯಾಗಿ ಸಂಘರ್ಷಗಳಿಗೆ ಕಾರಣವಾಗುತ್ತದೆ. ಬಹುದೊಡ್ಡ ಚರಿತ್ರೆಯನ್ನು ಹೊಂದಿ ಬಂದ ಕೊಡಗಿನಲ್ಲಿ ಬೇರೆಬೇರೆ ಸಮುದಾಯಗಳ ಜೊತೆ ವಿವಾಹಗಳು ನಡೆಯುವುದಕ್ಕೆ ತಮ್ಮತಮ್ಮ ಸಮುದಾಯಗಳಲ್ಲಿ ಹೆಣ್ಣಿನ ಕೊರತೆಯೋ, ಯುದ್ಧ ಮೊದಲಾದುವುಗಳೋ ಕಾರಣವಿರಬಹುದಾದರೂ ಅಂತರ್ಜಾತಿ ವಿವಾಹಗಳು ನಡೆಯುತ್ತಿದ್ದವು. ಕೊಡಗಿನ ಜನ ತಮ್ಮ ಸಮುದಾಯಗಳಲ್ಲೋ ಇತರೆಡೆಗಳಲ್ಲೋ ಹೆಣ್ಣು ಸಿಗದಿದ್ದಾಗ ಮಲಬಾರು ಪ್ರದೇಶಗಳಿಗೆ ಹೋಗಿ ಬಲವಂತದಿಂದಾದರೂ ಹೆಣ್ಣು ತರುವುದಿತ್ತು.

ರಾಜರ ಆಳ್ವಿಕೆಯ ಕಾಲ ಹಾಗೂ ಅದಕ್ಕಿಂತ ಹಿಂದೆಯೂ ಕೊಡಗಿನ ಜನರಲ್ಲಿ ಯುದ್ಧಭೀತಿ ಇದ್ದೇ ಇರುತ್ತಿತ್ತು. ಪರಸ್ಪರ ಸಂಘರ್ಷದ ಬದುಕು ನಿತ್ಯವಾಗಿತ್ತು. ರಾಜರ ಆಳ್ವಿಕೆಯ ಕಾಲದಲ್ಲಿಯೂ ರಾಜ–ರಾಜರ ನಡುವೆ ಯುದ್ಧಗಳು ನಡೆಯುತ್ತಲೇ ಇದ್ದವು. ಯುದ್ಧ ಕಾರಣದಿಂದ ಅದೆಷ್ಟೋ ಸೈನಿಕರು ಸಾವನ್ನಪ್ಪುತ್ತಿದ್ದರು. ಇಂತಹ ಸೈನಿಕರ ಕುಟುಂಬಗಳು ಆಶ್ರಯವಿಲ್ಲದೆ ನರಳುತ್ತಿದ್ದವು. ಗಂಡನನ್ನು ಕಳೆದುಕೊಂಡವರು ಮರುವಿವಾಹವಾಗಲು ಅವಕಾಶವಿತ್ತು.

ಕಿಗ್ಗಟ್ಟು ನಾಡಿನಲ್ಲಿ ಯುದ್ಧಕ್ಕೆ ಹೋದ ಅದೆಷ್ಟೋ ಕುಟುಂಬಗಳ ಗಂಡಸರು ಯುದ್ಧದಲ್ಲಿ ಸಾವನ್ನಪ್ಪಿದಾಗ ಅವರ ಆಸ್ತಿಪಾಸ್ತಿ ಮತ್ತು ಆ ಹೆಂಗಸರನ್ನು ಕಾಪಾಡಲು ಮೂಡಲ ಸೀಮೆಯಿಂದ (ಹುಣಸೂರು/ಮೈಸೂರು) ಗೌಡ ಸಮುದಾಯದ ಗಂಡಸರು ಬಂದು ನೆಲೆ ನಿಂತದ್ದು ಕಂಡುಬರುತ್ತದೆ.[೧೫]

ಒಂದೆಡೆ ಬೇರೆಬೇರೆ ಜಾತಿಯವರ ನಡುವೆ ವೈವಾಹಿಕ ಸಂಬಂಧಗಳು ಏರ್ಪಡುತ್ತಿದ್ದರೆ ಇದೇ ಸಂದರ್ಭದಲ್ಲಿ ಜಾತಿಪ್ರಾಬಲ್ಯದ ವಿಚಾರವೂ ಮನೆ ಮಾಡಿತ್ತು. ಮುಂದೆ ಆರ್ಥಿಕವಾಗಿ ಪ್ರಾಬಲ್ಯ ಸಾಧಿಸುತ್ತಾ ಬಂದಂತೆ ಜಾತಿಗಿಂತ ಸಿರಿವಂತಿಕೆ ಕಾರಣವಾಗಿ ವಿವಾಹ ಸಂಬಂಧಗಳು ಬೆಳೆಯಲಾರಂಭಿಸಿದವು.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಕೊಡಗಿನ ಜನಜೀವನದಲ್ಲಿ ಜಾತಿಪ್ರಾಧಾನ್ಯತೆ ಇದ್ದಂತೆಯೇ ಅನಿವಾರ್ಯತೆಗೆ ತಕ್ಕಂತೆ ಹೊಂದಿ ಬಾಳುವ ಜಾತಿ ಮೀರಿದ ಅಂತರ ಸಂಬಂಧವೂ ಇದ್ದಿತೆಂಬುದು ತಿಳಿದುಬರುತ್ತದೆ. ಜಟಿಲವಲ್ಲದ ಕಟ್ಟುಪಾಡುಗಳು ಕೊಡಗಿನಲ್ಲಿ ಉಳಿದಿದ್ದವು. ಲಿಂಗಾಯತ ರಾಜರ ನೀಲಮ್ಮಾಜಿ ಎಂಬ ಹೆಣ್ಣೊಬ್ಬಳು ಮುಸಲ್ಮಾನರವಳಾದದ್ದನ್ನು ಚರಿತ್ರೆ ಹೇಳುತ್ತದೆ. ಕೊಡಗಿನ ಹಾಲೇರಿ ವಂಶದ ಪತನಕ್ಕೆ ಕಾರಣವಾದ ಚೆನ್ನಬಸಪ್ಪ ಮೂಲತಃ ಕೊಡವ. ರಾಜನ ಮಗಳನ್ನು ಮದುವೆಯಾಗಿ ಲಿಂಗಾಯತನಾದ(ವಕ್ತೃ: ಚೆಣ್ಣಪ್ಪ, ಪಟ್ಟೋಲೆ ಪಳಮೆ, ವಯಸ್ಸು ೬೭).

ಕೊಡಗಿನ ಒಕ್ಕವೆಂಬ ಸಾಂಸ್ಥಿಕತೆಯು ಸಾಮಾಜಿಕ ಜೀವನದ ಕಡೆಗೆ ತೆರೆದುಕೊಳ್ಳುವ ಬಗೆ ವಿಶೇಷವಾಗುವುದು ಹೇಗೆ ಎಂಬುದನ್ನು ಅರಿಯುವಾಗ ಉಳಿದೆಡೆಯಲ್ಲಿಯೂ ಇದು ಇರುವುದಾದರೂ ಕೊಡಗಿನ ಪರಿಸರದಲ್ಲಿ ಒಕ್ಕ ಸಂರಚನೆ ಸಮಾಜ ಸಂರಚನೆಯಲ್ಲಿ ಬೆರೆಯುವುದು, ಬೆರೆತು ಬೆಳೆಯುವುದು, ಬೆಳೆದು ಬಲಿಯುವುದನ್ನು ಅವಲೋಕಿಸುವುದು ಮಹತ್ವದ ಅಂಶವಾಗುತ್ತದೆ.

ಈ ರೀತಿಯ ಸಂಕೀರ್ಣತೆಯೂ ಒಕ್ಕಗಳ ನಡುವೆ ಇದೆ. ಕೊಡಗಿನಲ್ಲಿ ಬೆರೆತುಬಾಳುವ, ಬದುಕು ಕಟ್ಟುವ ಪರಿಯೇ ಭಿನ್ನವಾಗಿ ಕಾಣುತ್ತದೆ. ಕಾಡು–ನಾಡಿನ ಸಂಸ್ಕೃತಿಯನ್ನು ಬೆರೆಸಿದ ಬದುಕೊಂದು ಕೊಡಗಿನಲ್ಲಿ ಕಾಣಸಿಗುತ್ತದೆ. ಆಧುನಿಕತೆಯ ಅಳವಡಿಕೆಯಂತಿರುವ ಔಪಚಾರಿಕ ಶಿಕ್ಷಣವೂ ಅದರ ಮೂಲಕ ಉಂಟಾದ 'ಸುಧಾರಿತ' ಜೀವನದ ಅದೆಷ್ಟೋ ಬೆಳವಣಿಗೆಗಳು ಕಾಣುವಲ್ಲಿಯೇ ಸಂಸ್ಕೃತಿಯೊಂದು ಇದಾವುದರ ಹೊಡೆತಕ್ಕೂ, ಒತ್ತಡಕ್ಕೂ ಸಿಲುಕದೆ ಉಳಿದುಕೊಂಡಿರುವುದೂ ಇದೇ ನೆಲದಲ್ಲಿ ಎನ್ನುವುದು ಪ್ರಧಾನವಾಗುತ್ತದೆ.

## ೩.೩. ಕೊಡಗಿನ ಪೂರ್ವದ ಒಳಾಡಳಿತ ವ್ಯವಸ್ಥೆ

ಕೊಡಗಿನ ಗ್ರಾಮನಿರ್ಮಿತಿಯ ಪರಿಕಲ್ಪನೆಯು ತೀರಾ ಭಿನ್ನವಾದುದಾಗಿದ್ದು ಗುಂಪಿನ ಮನೆಗಳಿಂದ ದೂರಾದ ಚದುರಿದ ಮನೆಗಳ ಗ್ರಾಮರಚನೆ ಕಂಡುಬರುತ್ತದೆ. ಕುಟುಂಬಗಳು ಆಸ್ತಿಗಳನ್ನು ಆಶ್ರಯಿಸಿದ್ದು ತಮ್ಮತಮ್ಮ ಆಸ್ತಿಗಳಲ್ಲಿ ಮನೆಗಳನ್ನು ಕಟ್ಟಿಕೊಂಡ ಕಾರಣದಿಂದಾಗಿ ಮನೆಗಳ ಭೌಗೋಳಿಕ ಸಾಮೀಪ್ಯತೆ ಸಾಧ್ಯವಾಗಲಿಲ್ಲ. ಹೀಗಾಗಿ ಕೊಡಗಿನ ಗ್ರಾಮಗಳು ಗುಂಪುಮನೆಗಳಾಗಿರಲಿಲ್ಲ. ಹತ್ತಿರತ್ತಿರ ಒತ್ತುಗೊಂಡ ಮನೆಗಳ ಗ್ರಾಮಗಳು ಕೊಡಗಿನಲ್ಲಿ ಕಾಲಾಂತರದಲ್ಲಿ ಪಟ್ಟಣ ಪ್ರದೇಶಗಳಲ್ಲಿ ಹುಟ್ಟಿಕೊಂಡವು. ಕುಟುಂಬ, ಕುಟುಂಬಗಳ ನಡುವಿನ

ಸಂಬಂಧವು ಹೇಗೊ ಅಂತೆಯೇ ಕುಟುಂಬಗಳು ಹಾಗೂ ಗ್ರಾಮದ ನಡುವೆ ಒಂದು ಅವಿನಾಭಾವ ಸಂಬಂಧವಿರುತ್ತದೆ. ಪ್ರತಿ ಒಕ್ಕಗಳ ಮುಖ್ಯಸ್ಥರು ಊರಿನ ತಕ್ಕರೊಂದಿಗೆ ಸಂಪರ್ಕ ಹೊಂದಿರುತ್ತಿದ್ದರು. ತಕ್ಕ (ಊರಿನ ಮುಖ್ಯಸ್ಥರು)ರ ಪಾತ್ರವನ್ನು ಮುಂದಿನ ಭಾಗದಲ್ಲಿ ನೋಡುತ್ತೇವೆ.

**ತಕ್ಕ:**[೧೬] ಕೊಡಗಿನ ಒಕ್ಕಗಳಲ್ಲಿ 'ಕೊರವುಕಾರನು ಮುಂದಾಳತ್ವ ವಹಿಸಿ ಸದಸ್ಯರೆಲ್ಲರೂ ಸಹಕಾರದಿಂದ ಕುಟುಂಬದ ಏಳಿಗೆಗೆ ಒಟ್ಟಾಗಿ ಶ್ರಮಿಸಲು ಪ್ರೇರೇಪಿಸುವಂತೆ ಕೊಡಗಿನ ಗ್ರಾಮಗಳಲ್ಲಿ ಯೋಗ್ಯವಾದ ತಕ್ಕನೊಬ್ಬ ಗ್ರಾಮದ ಜನರನ್ನು ಪ್ರೇರೇಪಿಸುತ್ತಾನೆ. ಗ್ರಾಮದ ಮುಖ್ಯಸ್ಥನನ್ನು ತಕ್ಕ ಎನ್ನುವರು. ಈ ತಕ್ಕನು ಒಕ್ಕ ಸದಸ್ಯನೇ ಆಗಿದ್ದರೂ ಗ್ರಾಮದ ಏಳಿಗೆಯನ್ನು ಬಯಸುವವನಾಗಿರುತ್ತಾನೆ. 'ತಕ್ಕ'ತನವು ವಂಶಪಾರಂಪರ್ಯವಾಗಿ ಮುಂದುವರಿಯುತ್ತದೆ. ಆದರೂ ತಕ್ಕನೊಬ್ಬ ಅದಕ್ಷನೂ, ಅಸಮರ್ಥನೂ, ಅಯೋಗ್ಯನೂ ಆಗಿದ್ದಲ್ಲಿ ಅಂಥವನ ಬದಲಿಗೆ ಯೋಗ್ಯನೊಬ್ಬನನ್ನು ತಕ್ಕನನ್ನಾಗಿ ನೇಮಿಸುವ ಅಧಿಕಾರ ಗ್ರಾಮಸ್ಥರಿಗೆ ಸೇರುತ್ತದೆ. ಗೌರವಾನ್ವಿತ ವ್ಯಕ್ತಿ ಮಾತ್ರ ತಕ್ಕನಾಗಿ ಉಳಿಯಲು ಸಾಧ್ಯವಾಗುತ್ತಿತ್ತು. "ತಕ್ಕ ಪೋಲಿಯಾಚೇಂಗಿ ಊರ್ ಪೊಲೆಗೇರಿ" ಎನ್ನುವ ಗಾದೆಯೊಂದು ಕೊಡಗಿನಲ್ಲಿ ಪ್ರಚಲಿತದಲ್ಲಿದೆ. ತಕ್ಕ ಪೋಲಿಯಾದರೆ ಊರು ಹಾಳಾಗುತ್ತದೆ ಎಂಬುದು ಇದರರ್ಥ. ಗ್ರಾಮಕ್ಕೆ ಒಳಿತಾಗುವುದು ಯೋಗ್ಯ ತಕ್ಕನಿಂದ. ಊರತಕ್ಕನು ಗ್ರಾಮದ ಸಾರ್ವಜನಿಕ ಕೂಟಗಳಿಂದ ಮಂದು-ಮಾನಿಗಳನ್ನು(ಮೈದಾನ) ಸುಸ್ಥಿತಿಯಲ್ಲಿ ಇಡುವ, ಗ್ರಾಮದ ಅಂಬಲ, ದೇವಾಲಯಗಳ ಆವರಣದ ಶುಚಿತ್ವ ಕಾಪಾಡುವ, ಗ್ರಾಮದ ಕೆರೆ ಕಟ್ಟೆಗಳು, ಯಾತ್ರಾರ್ಥಿಗಳ ಯೋಗಕ್ಷೇಮ, ಆರೋಗ್ಯ ಕೇಂದ್ರಗಳು ಸೇವೆಗೈಯುವಂತೆ ನೋಡಿಕೊಳ್ಳುವುದು ಅವನ ಕರ್ತವ್ಯವಾಗಿತ್ತು.

ಗ್ರಾಮದ ಕುಟುಂಬವೊಂದಕ್ಕೆ ಅನಿರೀಕ್ಷಿತ ಅಪಾಯಗಳು ಬಂದೊದಗಿದರೆ ಅಂದರೆ ಅತಿವೃಷ್ಟಿ, ಅನಾವೃಷ್ಟಿಯಿಂದಾಗಿಯೋ, ರೋಗರುಜಿನಗಳಿಂದಾಗಿಯೋ, ಕುಟುಂಬ ಸಂಪತ್ತು ಬೆಂಕಿಗಾಹುತಿ ಯಾಗಿಯೋ ತುಂಬಲಾರದ ನಷ್ಟ ಉಂಟಾದರೆ ಊರತಕ್ಕನು ಗ್ರಾಮಸ್ಥರೊಡಗೂಡಿ ಆ ಕುಟುಂಬಕ್ಕೆ ನೆರವು ನೀಡುವುದು ಅವನ ಜವಾಬ್ದಾರಿಯಾಗಿತ್ತು. ಗ್ರಾಮದ ಎಲ್ಲ ಒಕ್ಕದ ಒಕ್ಕಲು ಪೂರ್ಣಗೊಳ್ಳದ ಹೊರತು ಗ್ರಾಮತಕ್ಕ 'ನೇಗಿಲುಪೂಜೆ' ಮಾಡುವಂತಿರಲಿಲ್ಲ. ಗ್ರಾಮಸಂಬಂಧಿ ಕೃಷಿ ಭೂಮಿ ಒಕ್ಕಲುಗೊಳ್ಳುವಂತೆ ನೋಡಿಕೊಳ್ಳುವ ಜವಾಬ್ದಾರಿ ತಕ್ಕನದಾಗಿತ್ತು.

ಒಕ್ಕದೊಳಗಿನ ಸದಸ್ಯರ ಆಂತರಿಕ ಕಲಹಗಳನ್ನು 'ಕೊರವುಕಾರ'ನು ತಿಳಿಗೊಳಿಸುವಂತೆ ಊರಿನಲ್ಲಿ ಕುಟುಂಬಗಳೊಡನೆ ನಡೆಯುವ ತಕರಾರು, ಜಗಳ ಮೊದಲಾದುವನ್ನು ತೀರ್ಮಾನಿಸಿ ಗ್ರಾಮದಲ್ಲಿ ಶಾಂತಿ ಮತ್ತು ಮೈತ್ರಿ ನೆಲೆಗೊಳ್ಳುವಂತೆ ಮಾಡುವುದು ತಕ್ಕನ ಹೊಣೆಯಾಗಿತ್ತು.

ಕೊಡವರು, ಹೆಗ್ಗಡೆಗಳು, ಅಮ್ಮಕೊಡವರು, ಎರವರು, ಕುರುಬರು, ಕೋಯವರು, ಬಣ್ಣರು, ಕಣಿಯರು, ಐರಿಯರು, ಮೇದರು ಮೊದಲಾದ ಯಾವುದೇ ಸಮುದಾಯಗಳ

ನಡುವೆ ಘರ್ಷಣೆಗಳುಂಟಾದರೆ ತಕ್ಕನು ಗ್ರಾಮದ ಹಿರಿಯರು ಬುದ್ಧಿವಂತರೆನಿಸಿದವರ ಸಹಾಯದಿಂದ ಸಮಿತಿಯೊಂದನ್ನು ರಚಿಸಿಕೊಂಡು ಗ್ರಾಮದ ಶಾಂತಿ ಕಾಪಾಡುತ್ತಿದ್ದನು. ಎಲ್ಲ ಸಮುದಾಯಗಳನ್ನು ಸಮಾನವಾಗಿ ನಡೆಸಿಕೊಳ್ಳುವ ಔದಾರ್ಯವನ್ನು ತಕ್ಕನು ತೋರಿಸಬೇಕಾಗಿತ್ತು. ಊರು ತಕ್ಕನು ತನ್ನ ಗ್ರಾಮದ ನ್ಯಾಯ ವ್ಯವಸ್ಥೆಯನ್ನು ಊರು ಮಧ್ಯದ ಅಂಬಲ, ಮಂದುಗಳಲ್ಲಿ ನಡೆಸಬೇಕಾಗಿತ್ತು. ಇದರ ವಿವರಗಳು ಹೀಗಿವೆ.

**ಅಂಬಲ:**[೧೭] ಕೊಡಗಿನ ಗ್ರಾಮಗಳಲ್ಲಿ ನ್ಯಾಯ ತೀರ್ಮಾನಗಳು 'ಅಂಬಲ'ದಲ್ಲಿ ನಡೆಯುತ್ತವೆ. ಅಂಬಲವೆಂದರೆ ಗ್ರಾಮದ ತಕರಾರುಗಳನ್ನು ತೀರ್ಮಾನಿಸಲು ಸಭೆ ಸೇರುವ ಸ್ಥಳ. ಇದೊಂದು ಚಿಕ್ಕ ಕಟ್ಟಡವಾಗಿದ್ದು, ಗ್ರಾಮದ ನಡುವಿನ ಮೈದಾನದ ಒತ್ತಾಗಿ ಕಟ್ಟಲಾಗಿರುತ್ತದೆ. ಅಂಬಲವು ಗ್ರಾಮನ್ಯಾಯಾಲಯದಂತಿತ್ತು. ಕೊಡಗಿನ ಪ್ರತಿಗ್ರಾಮವೂ ಅಂಬಲಗಳನ್ನು ಹೊಂದಿದ್ದವು. ಬ್ರಿಟಿಷರ ಆಳ್ವಿಕೆಯ ನಂತರ ತಕ್ಕನ ಜವಾಬ್ದಾರಿ ಕೊಡಗಿನ ಸಾಮಾಜಿಕ, ಸಾಂಪ್ರದಾಯಿಕ ಮತ್ತು ಸಾಂಸ್ಕೃತಿಕ ವಿಚಾರಗಳಿಗೆ ಮಾತ್ರ ಸೀಮಿತವಾಯಿತು. ಈ ಮೇಲ್ಕಂಡ ವ್ಯವಸ್ಥೆಯು ಹೆಚ್ಚಾಗಿ ಲಿಂಗಾಯತ ಅರಸರ ಮತ್ತು ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಕಂಡುಬರುತ್ತಿದ್ದು ಸ್ವಾತಂತ್ರ್ಯಾನಂತರದ ಕಾಲಘಟ್ಟದಲ್ಲಿ ಈ ವ್ಯವಸ್ಥೆಯು ಕ್ರಮೇಣ ಸಡಿಲವಾಗತೊಡಗಿತು. ಊರು ಮತ್ತು ನಾಡಿಗೆ ಸಂಬಂಧಪಟ್ಟ ದೊಡ್ಡದಾದ ಮೈದಾನವನ್ನು ಮಂದ್ ಎನ್ನುತ್ತಾರೆ. ಇದರ ವಿವರಗಳನ್ನು ಮುಂದಿನ ಭಾಗದಲ್ಲಿ ನೋಡುತ್ತೇವೆ.

**ಮಂದ್‌ಗಳು:**[೧೮] ಕೊಡಗಿನ ಗ್ರಾಮಗಳು ಪಂಚಾಯತ್ ಮಂದ್, ಊರ್ ಮಂದ್, ದೇವ ಮಂದ್ ಎಂಬ ಮೈದಾನಗಳನ್ನು ಹೊಂದಿದ್ದವು. ಇವು ಕ್ರಮವಾಗಿ ನ್ಯಾಯಾಧಿಕರಣದ ಕೇಂದ್ರವಾಗಿ, ಉತ್ಸವಗಳ ಕೇಂದ್ರವಾಗಿ ಹಾಗೂ ದೇವರ ಹಬ್ಬಾಚರಣೆಗಳ ಕೇಂದ್ರಗಳಾಗಿದ್ದವು. ಹಿಂದೆ ೧೫೦ಕ್ಕೂ ಹೆಚ್ಚು ಮಂದ್‌ಗಳು ಅಸ್ತಿತ್ವದಲ್ಲಿದ್ದವು ಎಂದು ಮಂಜು ಚಿಣ್ಣಪ್ಪ ಎನ್ನುವ ಮಂದಗಳನ್ನು ಪುನರ್‌ಸ್ಥಾಪಿಸಲು ಆಸಕ್ತಿ ಹೊಂದಿರುವ ಯುವಮುಖಂಡರು ಅಭಿಪ್ರಾಯ ಪಟ್ಟಿದ್ದಾರೆ('ಶಕ್ತಿ' ದಿನಪತ್ರಿಕೆ, ದಿನಾಂಕ: ೮-೪-೨೦೧೫).

ಪಂಚಾಯಿತಿಗಳು ಗ್ರಾಮದ ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ನಿಯಂತ್ರಿಸುತ್ತಲೇ ಗ್ರಾಮದ ಗೌರವವನ್ನು ಕುಂದಿಸುವ ಸಂಗತಿಗಳು ಗ್ರಾಮದ ಗಡಿದಾಟದಂತೆ ನೋಡಿಕೊಳ್ಳುತ್ತಿದ್ದವು. ಅನೈತಿಕ ಚಟುವಟಿಕೆಗಳಿಗೆ ಶಿಕ್ಷೆ ಕಠಿಣವಾದುದಾಗಿತ್ತು. ತಪ್ಪು ಮಾಡಿದವರಿಗೆ 'ಪೊಳೆವಾಡ್'[೧೯] (ಜುಲ್ಮಾನೆ) ವಿಧಿಸಲಾಗುತ್ತಿತ್ತು. ತಪ್ಪಿನ ಪರಿಣಾಮಗಳನ್ನಾಧರಿಸಿ ಪೊಳವಾಡ್ ವ್ಯತ್ಯಾಸ ಹೊಂದುತ್ತಿತ್ತು. ಗ್ರಾಮವನ್ನು ಕಾಯುವ ತಕ್ಕನೇ ತಪ್ಪು ಮಾಡಿದರೆ ಅವನಿಗೆ ವಿಧಿಸುವ ಶಿಕ್ಷೆ ಇತರರಿಗಿಂತ ಕಠಿಣವಾಗಿರುತ್ತಿತ್ತು.

ಗ್ರಾಮಹಬ್ಬಗಳು, ಗ್ರಾಮ ದೇವತಾಕಾರ್ಯಗಳು, ಗ್ರಾಮನೃತ್ಯ, ಗ್ರಾಮದ ಬೇಟೆ, ಗ್ರಾಮದ ಯಾವುದೇ ಕುಟುಂಬದ ಮದುವೆ ಮತ್ತಿತರ ಸಮಾರಂಭಗಳಿಗೆ ಬಾರದವರು, ಗ್ರಾಮದ

ಸಾಮಾಜಿಕ ಕೆಲಸಗಳಲ್ಲಿ ತಮ್ಮ ಜವಾಬ್ದಾರಿಯನ್ನು ಅರಿಯದವರು ಗ್ರಾಮ ವಿಧಿಸುವ ಶಿಕ್ಷೆಗೆ ಗುರಿಯಾಗುತ್ತಿದ್ದರು(ಮೇಲಿನ ಚಟುವಟಿಕೆಗಳು ಗ್ರಾಮದ ಎಲ್ಲ ಸದಸ್ಯರನ್ನು ಒಳಗೊಂಡು ಆಚರಿಸುವುದಾಗಿದ್ದವು.). ಇವುಗಳಲ್ಲಿ ಭಾಗವಹಿಸದವರು ಇಂತಿಷ್ಟು ಧಾನ್ಯ, ಇಲ್ಲವೇ ಇಂತಿಷ್ಟು ಹಣವನ್ನು ತಪ್ಪು ಕಟ್ಟಬೇಕಾಗುತ್ತಿತ್ತು. ಇಂತಹ ಜುಲ್ಮಾನೆಯು ಗ್ರಾಮ ದೇವರ ಭಂಡಾರದ ಸೊತ್ತಾಗುತ್ತಿತ್ತು.

ಮೇಲುಜಾತಿ, ಕೀಳುಜಾತಿ ಎಂಬ ಸಂಘರ್ಷವಿದ್ದು ಮೇಲು ಜಾತಿಯವನು ಕೀಳು ಜಾತಿಯವರೊಡನೆ ಅನೈತಿಕ ಸಂಬಂಧ ಹೊಂದಿದ್ದರೆ ಗ್ರಾಮದ ಕಟ್ಟುಕಟ್ಟಳೆಗಳನ್ನು ಉಲ್ಲಂಘಿಸುವವರನ್ನು 'ಪೊರಂಬಡಿ'[೨೦] ಇಡಲಾಗುತ್ತಿತ್ತು. 'ಪೊರಂಬಡಿ' ಎಂದರೆ ಸಮಾಜದವರಿಂದ ಹೊರಗಿಡುವುದೆಂದರ್ಥ ಎಂದು ನಡಿಕೇರಿಯಂಡ ಚಿಣ್ಣಪ್ಪ ಅವರು ಅಭಿಪ್ರಾಯಪಟ್ಟಿದ್ದಾರೆ. ಅಂದರೆ ಸಾಮಾಜಿಕ ಬಹಿಷ್ಕಾರ ಹೀಗೆ ಪೊರಂಬಡಿಯಾದವನು ಗ್ರಾಮದ ಅಥವಾ ಸಮಾಜದ ಉತ್ಸವ, ಹಬ್ಬ ಹರಿದಿನಗಳಲ್ಲಿ ಭಾಗವಹಿಸಕೂಡದು. ಕ್ಷೌರಿಕನು ಕೂಡ ಅವನಿಗೆ ಕ್ಷೌರ ಮಾಡುವಂತಿಲ್ಲ. ಮಡಿವಾಳ ಬಟ್ಟೆ ತೊಳೆಯುವಂತಿರಲಿಲ್ಲ. ಗ್ರಾಮದ ಮೈದಾನದಲ್ಲಿ ಆತನ ದನಗಳು ಮೇಯುವಂತಿರಲಿಲ್ಲ. ಆತನ ಮನೆಗೆ ಯಾರೂ ಹೋಗಕೂಡದು. ಅಲ್ಲಿ ಊಟ ಮಾಡಕೂಡದು. ತಪ್ಪಿನ ಕಾರಣದಿಂದ ಗ್ರಾಮಸ್ಥರ ಕ್ಷಮೆ ಕೋರುವವರೆಗೆ ಶಿಕ್ಷೆ ಜಾರಿಯಲ್ಲಿರುತ್ತಿತ್ತು.

ಮೇಲುಜಾತಿ, ಕೆಳಜಾತಿಗಳೆಂಬ ಭೇದಭಾವ ತೀವ್ರವಾಗಿತ್ತು. ಮೇಲುಜಾತಿಯವರು ಕೆಳಜಾತಿಯವರೊಂದಿಗೆ ಸಂಬಂಧ ಹೊಂದಿದರೆ ಅವರನ್ನು ಸಮಾಜದಿಂದ ಹೊರಹಾಕಲಾಗುತ್ತಿತ್ತು. ಇದಕ್ಕೆ 'ಕೊಡಿಕೀರುವ' ಅಥವಾ 'ಕರೆಕೀರುವ'[೨೧] ಎನ್ನುತ್ತಾರೆ. ಒಂದು ಬಟ್ಟೆಯನ್ನು ಇಬ್ಬರು ಹಿಡಿದು ನಡುವೆ ಹರಿದು ಹಾಕಲಾಗುತ್ತಿತ್ತು. ಇದಕ್ಕೆ ಪೊರಂಬಡಿ(ಬಹಿಷ್ಕಾರ) ಎಂದು ಹೇಳುತ್ತಾರೆ. ಬಹಿಷ್ಕೃತಗೊಂಡ ವ್ಯಕ್ತಿ ಮೃತನಾದರೂ ಆ ವ್ಯಕ್ತಿಯ ಕುಟುಂಬದವರು ಅಂತ್ಯಕ್ರಿಯೆ ಸಂಸ್ಕಾರಾದಿಗಳನ್ನು ಮಾಡುವಾಗ ಗ್ರಾಮಸ್ಥರು ಭಾಗವಹಿಸುವಂತಿರಲಿಲ್ಲ.

ಹಾಗೆಯೇ ಒಂದೇ ಒಕ್ಕದೊಳಗೆ ಸಂಬಂಧ ಕಡಿದುಕೊಳ್ಳುವ ವಿಷಮ ಸಂದರ್ಭ ಬಂದಾಗ ಅದನ್ನು 'ಕೊಡಿಕೀರುವ' ಎನ್ನುತ್ತಾರೆ. ಇದು ಬಹಿಷ್ಕಾರಕ್ಕೆ ಸಂವಾದಿಯಲ್ಲ. ಬದಲಾಗಿ ಸಂಬಂಧ ಕಡಿದುಕೊಳ್ಳುವುದು ಎಂದರ್ಥ. ಕರೆ ಕೀರುವ ಸಂದರ್ಭದಲ್ಲಿ ಒಂದು ಬಟ್ಟೆಯನ್ನು ಇಬ್ಬರು ಹಿಡಿದು ನಡುವೆ ಹರಿದು ಹಾಕಲಾಗುತ್ತಿತ್ತು. ಹರಿದ ಬಟ್ಟೆಯ ತುಂಡುಗಳು ಹೇಗೆ ಒಂದಾಗಲಾರವೋ ಇವೆರಡು ಸಂಬಂಧಿಗಳು ಮತ್ತೆ ಒಂದಾಗಲಾರದು ಎಂಬ ಸಾಂಕೇತಿಕ ಅರ್ಥವನ್ನು ಇದು ಹೇಳುತ್ತದೆ. ಹೀಗೆ ಬೇರ್ಪಟ್ಟ ಸಂಬಂಧಿಗಳಿಗೆ 'ಪೊಲೆಂದಲೆ'[೨೨]ಗಳಿರುತ್ತಿರಲಿಲ್ಲ.

ಗ್ರಾಮತಕ್ಕರು ಪಂಚಾಯತರ ಅಭಿಪ್ರಾಯ ಪಡೆದು ಗ್ರಾಮದ ಏಕತೆ, ಅಭಿವೃದ್ಧಿ ನೀತಿ ನಿಯಮಗಳನ್ನು ವಿರೋಧಿಸುವವನಿಗೆ ಒಂದು ನಿರ್ದಿಷ್ಟ ದಂಡ ವಿಧಿಸಬಹುದಿತ್ತು. ದಂಡಾರ್ಹ ಅಪರಾಧ ಏನೇ ಇದ್ದರೂ ಅದು ೧೨೦ ಹಣಕ್ಕಿಂತ ಹೆಚ್ಚು ದಂಡ ವಿಧಿಸಬಾರದೆಂಬ ನಿಯಮವೂ ಚಾಲ್ತಿಯಲ್ಲಿತ್ತು.

ಕೊಡಗಿನಲ್ಲಿ ಜನಾಂಗಗಳು ಇದ್ದು ಪ್ರತಿಯೊಂದು ಗ್ರಾಮವೂ ಹತ್ತಾರು ವಿವಿಧ ಬುಡಕಟ್ಟಿಗೆ ಸೇರಿದ ಜನಾಂಗಗಳಿಂದ ಕೂಡಿದೆ. ವೈವಿಧ್ಯತೆಯಿಂದ ಕೂಡಿದ ಗ್ರಾಮವಾಗಿತ್ತು.

ಕೊಡಗಿನಲ್ಲಿ ಪ್ರತಿ ಗ್ರಾಮಜೀವನದಲ್ಲಿ ಬೇರೆಬೇರೆ ಕಡೆಯಿಂದ ಬಂದು ಗ್ರಾಮ ಜೀವನದಲ್ಲಿ ಬೆರೆತುಹೋಗಿರುವ ಬ್ರಾಹ್ಮಣರಿದ್ದಾರೆ. ಗ್ರಾಮಜೀವನದಲ್ಲಿ ಇವರಿಗೆ ದೊಡ್ಡ ಸ್ಥಾನ ನೀಡಿರುವುದಲ್ಲದೆ, ಅವರ ಜವಾಬ್ದಾರಿ ಇಂತಿದೆ. ಗ್ರಾಮದ ದೇವಾಲಯಗಳಲ್ಲಿ ಪೂಜೆ ನಡೆಸುವುದು, ಗ್ರಾಮದ ಕುಟುಂಬಗಳ ಪೌರೋಹಿತ್ಯ ವಹಿಸುವುದು, ಗ್ರಾಮದ ಹಿತಕ್ಕಾಗಿ ಪ್ರಾರ್ಥನೆ ಸಲ್ಲಿಸುವುದು ಅವರ ಜವಾಬ್ದಾರಿ. ಆಗಾಗ ಪ್ರತಿ ಕುಟುಂಬವನ್ನು ಸಂದರ್ಶಿಸಿ ಪೂಂಗುರಿ, ಪ್ರಸಾದ ಕೊಟ್ಟು ಬರುವುದು ಆತನ ಕೆಲಸ. ಆತನನ್ನು ವಿಚಾರಿಸಿಯೇ ಜನರು ತಮ್ಮ ವ್ಯವಸಾಯ, ಶುಭ ಕಾರ್ಯಗಳನ್ನು ಪ್ರಾರಂಭಿಸುತ್ತಿದ್ದರು. ಬ್ರಾಹ್ಮಣರಂತೆ ಕಣಿಯರು ಮಲಬಾರಿನಿಂದ ಬಂದ ಜ್ಯೋತಿಷಿಗರು. ಯಾವುದೇ ಪ್ರಮುಖ ಕೆಲಸ ಕೈಗೊಳ್ಳುವಾಗ ಕಣಿಯರನ್ನು ಕೇಳುವುದು ರೂಢಿ.

ಕೊಡವರು ಭೂತಾರಾಧನೆ ಮತ್ತು ಹಿರಿಯರ ಆರಾಧನೆಯನ್ನು ಮಾಡುತ್ತಿದ್ದರು. ಈ ಸಂಬಂಧ ಕಾರಣತೆರೆ, ಕೋಲ ಕಟ್ಟುವುದು, ಅಜ್ಜಪ್ಪತೆರೆ, ಚೊಡಾಲಚ್ಚಿತೆರೆ, ಕುಳಿಯತೆರೆ, ಚೌಂಡಿ, ಭದ್ರಕಾಳಿ, ನರಿಪೊದ, ಪೊವ್ವೊದಿತೆರೆ[೨೨] ಮೊದಲಾದ ಸಂಪ್ರದಾಯಗಳಲ್ಲಿ ಮುಂದಾಳತ್ವ ವಹಿಸಿ ಆವೇಶ ಬಂದು ಕುಣಿಯುವ ವರ್ಗವೇ ಪಣಿಕರು ಮತ್ತು ಬಣ್ಣರು. ಇವರು ಗ್ರಾಮದ ಹಬ್ಬಗಳಲ್ಲಿ ಕುಣಿಯುವ, ದೇವರಿಗೆ ಅರ್ಪಿಸಿದ ಪ್ರಾಣಿಗಳನ್ನು ಬಲಿ ಕೊಡುವ ಜವಾಬ್ದಾರಿ ಹೊತ್ತಿರುತ್ತಾರೆ.

ಈ ವರ್ಗದ ಜನತೆ ದೈನಂದಿನ ಅಗತ್ಯಗಳ ಪೂರೈಕೆಗೆ ಶ್ರಮಿಕ ವರ್ಗದ ಆಶ್ರಯವನ್ನು ಪಡೆದಿತ್ತು. ಹೀಗಾಗಿ ಪ್ರತಿಯೊಂದು ಗ್ರಾಮದಲ್ಲಿ ಮರಗೆಲಸ ಮಾಡುವ ಐರಿ ಒಕ್ಕ, ಬಟ್ಟೆ ಒಗೆಯುವ ಅಗಸ ಒಕ್ಕ, ಧಾರ್ಮಿಕಾಚರಣೆಗಳಿಗೆ ಬ್ರಾಹ್ಮಣವರ್ಗ, ಕುಡಿಕೆ–ಮಡಿಕೆ ಮೊದಲಾದ ಮಣ್ಣಿನ ಪಾತ್ರೆಗಳನ್ನು ತಯಾರು ಮಾಡುವ ಕೋಯವ ಒಕ್ಕಗಳು, ಒಕ್ಕಲುತನಕ್ಕೆ ಅಗತ್ಯವಾದ ಬುಟ್ಟಿ ಹೆಣೆಯುವ ಮೇದರ ಒಕ್ಕಗಳನ್ನು ತನ್ನೊಳಗೆ ತುಂಬಿಕೊಂಡಿತ್ತು. ಈ ಕುಟುಂಬಗಳು ಆರ್ಥಿಕವಾಗಿ ಸೊರಗಿದಾಗ ಜಮೀನುಗಳಲ್ಲಿ ತೊಡಗಿಸಿಕೊಳ್ಳಬಹುದಾದ ವ್ಯವಸ್ಥೆ ಇದ್ದು ಪ್ರಬುದ್ಧ ಸಾಮಾಜಿಕ ಸಂರಚನೆ ರೂಪುಗೊಂಡಿತ್ತು. ಅವಿನಾಭಾವ ಸಂಬಂಧಗಳು ಆರ್ಥಿಕ ಪ್ರಾಬಲ್ಯತೆಯ ಕಡೆ ಚಿಂತಿಸದಂತೆ ಪ್ರಭಾವ ಬೀರಿದ್ದವು. ಗ್ರಾಮದ ಎಲ್ಲ ಕುಟುಂಬಗಳೂ ಹೆಚ್ಚೇನೂ ತಾರತಮ್ಯಕ್ಕೆ ಒಳಗಾಗದೆ, ಆತ್ಮಗೌರವಕ್ಕೆ ಚ್ಯುತಿ ಬಾರದ ಗೌರವಾದರಗಳಿಗೆ ಪಕ್ಕಾಗಿ ಪ್ರತಿಭಟನಾತ್ಮಕ ಜೀವನಕ್ಕೆ ಎಡೆಕೊಡದೆ ಬಾಳುತ್ತಿದ್ದವು. ಇಂತಹ ಸೂಕ್ಷ್ಮವಾದ ಸಾಮಾಜಿಕ ವ್ಯವಸ್ಥೆಯಲ್ಲಿ ಭಿನ್ನಸ್ತರದ, ಭಿನ್ನವರ್ಗದ ಸಮುದಾಯಗಳು ಸಾಮರಸ್ಯದಿಂದ ಸಾಮಾಜಿಕ ಸಮತೋಲವನ್ನು ಕಾಯ್ದುಕೊಂಡಿದ್ದುದು ಕಂಡುಬರುತ್ತದೆ. ಪ್ರಬಲವರ್ಗದ ಸ್ವಾರ್ಥದ ಎಳೆಗಳು ಕಂಡುಬರುತ್ತಿದ್ದರೂ, ಸಮಾಜ ಗೌರವಕ್ಕೆ

ಪಾತ್ರರಾಗಿದ್ದ ತಳವರ್ಗದ ಜನ ಪ್ರೀತ್ಯಾದರಗಳಿಂದ ಜೀವನ ನಡೆಸುತ್ತಿದ್ದುದು ನ್ಯಾಯಸಮ್ಮತವಾಗಿತ್ತು. ಹೀಗೆ ಹತ್ತಾರು ಊರುಗಳು ಸೇರಿ ನಾಡಾಗಿ, ಊರಿನ ಒಕ್ಕಗಳು ಸೇರಿ ನಾಡಿನ ಉತ್ಸವಗಳಲ್ಲಿ, ಹುತ್ತರಿಯಲ್ಲಿ, ನಾಡುಮಂದುಗಳಲ್ಲಿ ಭಾಗವಹಿಸುವುದು ಹಕ್ಕು ಮತ್ತು ಕರ್ತವ್ಯಗಳೆರಡೂ ಆಗಿ ಪರಿಣಮಿಸಿತ್ತು. ಪ್ರತಿ ಒಕ್ಕ 'ದೇವಕರ'[೨೪] ಕೊಡುವುದು ಕಡ್ಡಾಯವಾಗಿತ್ತು. ಕರ ನಿರಾಕರಿಸಿದ ಒಕ್ಕ ಸಮಾಜ ವಿರೋಧಿಯಾಗುತ್ತಿತ್ತು. ನಾಡಿನ ಒಕ್ಕಗಳು ದೇವಕರವನ್ನು ನಿರಾಕರಿಸಿದ ಒಕ್ಕವನ್ನು ತಿರಸ್ಕಾರದಿಂದ ನೋಡುತ್ತಿದ್ದರು.

ಪಟ್ಟೋಲೆ ಪಳಮೆಯಲ್ಲಿ ನಡಿಕೇರಿಯಂಡ ಚಿಣ್ಣಪ್ಪನವರು ತಳವರ್ಗಕ್ಕೆ ಸಂಬಂಧಿಸಿದ ಸಾಮಾಜಿಕ ಕಟ್ಟು ಕಟ್ಟಳೆಗಳ ಬಗ್ಗೆ ಬರೆಯುತ್ತಾರೆ. ಕಟ್ಟು ಕಟ್ಟಳೆಗಳನ್ನು ಮೀರಿದ ವ್ಯಕ್ತಿ ಅಥವಾ ಒಕ್ಕಕ್ಕೆ ಪೊಳೆವಾಡ್(ದಂಡ)ಅನ್ನು ತಕ್ಕ ಮುಖ್ಯಸ್ಥರು ಹೇರುತ್ತಿದ್ದರು(ಚಿಣ್ಣಪ್ಪ, ೧೯೨೪:೫೦೧–೫೦೨). ಈ ಸಾಮಾಜಿಕ ಕಳಂಕವನ್ನು ತಿರಸ್ಕರಿಸಿ ವಿಜಯ್ ಪೂಣಚ್ಚ ತಂಬಂಡರವರು ತಮ್ಮ ಪಳಮೆ(೨೦೦೪) ಕೃತಿಯಲ್ಲಿ ವ್ಯತಿರಿಕ್ತವಾದ ಅಭಿಪ್ರಾಯವನ್ನು ಮಂಡಿಸುತ್ತಾರೆ. ಕೊಡಗಿನ ಸಮಸ್ತ ಸಮುದಾಯ ಸಾಂಸ್ಕೃತಿಕ ಕೊಡುಕೊಳ್ಳುವಿಕೆಯಲ್ಲಿ ತಾರತಮ್ಯಕ್ಕೆ ಒಳಗಾಗಲಿಲ್ಲ. ಶತಮಾನಗಳಷ್ಟು ಹಿಂದೆ ಕೊಡಗಿನ ಗ್ರಾಮಗಳ ಹಿರಿಯರಲ್ಲಿ ಪರಸ್ಪರ ಔದಾರ್ಯವಿತ್ತು. ನಡಿಕೇರಿಯಂಡ ಚಿಣ್ಣಪ್ಪನವರು ತಮ್ಮ ಪಟ್ಟೋಲೆ ಪಳಮೆಯಲ್ಲಿ ದಾಖಲಿಸಿದ ಜಾತಿಪದ್ಧತಿಯ ಬಗೆಗಿನ ಕಾಠಿಣ್ಯ ನಿಲುವಿನ ಪ್ರಸ್ತಾಪಗಳನ್ನು ಹಾಗೂ ಪಟ್ಟೋಲೆ ಪಳಮೆಯ ವಿಚಾರಗಳನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ನೋಡಿದ ವಿಮರ್ಶಕರು ಮತ್ತು ಚರಿತ್ರೆಕಾರರ ಚಿಂತನಶೀಲ ಆಲೋಚನೆಗಳು ಇಲ್ಲಿ ಮುಖ್ಯವಾಗುತ್ತದೆ. ಒಂದು ವಿಶಿಷ್ಟ ಸಾಮಾಜಿಕ ಸಂರಚನೆಯು ಕೊಡಗಿನಲ್ಲಿ ರೂಪುಗೊಂಡಿತ್ತು ಎಂಬುದನ್ನೂ ಹಾಗೆಯೇ ಮನಗಾಣಬೇಕಾಗಿದೆ.

ಹೀಗೆ ಮನುಷ್ಯರ ಸಮಗ್ರ ಜೀವನಕ್ಕೆ ಬೇಕಾಗುವ ಮೂಲಭೂತ ಸರಕುಗಳಿಗೆ ಪೂರಕವಾದ ಶ್ರಮವಿಭಜನೆಯ ನೆಲೆಯ ಆಧಾರದ ಮೇಲೆ ರೂಪುಗೊಂಡ ಕುಟುಂಬ ಹಾಗೂ ಅವುಗಳನ್ನೊಳಗೊಂಡ ಗ್ರಾಮ, ಭಾವನಾತ್ಮಕ ಸಂಬಂಧವನ್ನು ಪ್ರಧಾನವಾಗಿ ಹೊಂದಿ ಆರ್ಥಿಕ ಅಸಮಾನತೆಯನ್ನು ಪರಿಗಣಿಸದೆ ಆಧುನಿಕ ಸಮಾಜಕ್ಕೂ ಮಾದರಿಯಾಗಿದ್ದುದು ಕಂಡುಬರುತ್ತದೆ. ಇವರಲ್ಲದೆ ಗ್ರಾಮದ ಹೊಲೆಯ, ಎರವ ಮೊದಲಾದ ಕೊಡಗಿನ ಮೂಲನಿವಾಸಿಗಳು ಗ್ರಾಮ ಜೀವನದ ಅನಿವಾರ್ಯ ಅಂಗವಾಗಿದ್ದರು.

ಕೊಡವರು, ಕೊಡವೇತರ, ಕೊಡವ ಭಾಷಿಕ ಅಥವಾ ಇತರ ಭಾಷಿಕ ಒಕ್ಕಗಳನ್ನು ಕೊಡಗಿನ ಪರಿಸರದಲ್ಲಿ ಕಾಣಬಹುದಾಗಿದ್ದು ಇವುಗಳ ಅಸ್ತಿತ್ವವು ವಿಶಿಷ್ಟವಾದ ರೀತಿಯಲ್ಲಿ ರೂಪುಗೊಂಡಿರುವುದನ್ನು ಒಕ್ಕ ಅವಿಭಕ್ತ ಕುಟುಂಬ ಪದ್ಧತಿ ಸ್ವರೂಪ ಮತ್ತು ವಿವರಣೆಯಲ್ಲಿ ಚರ್ಚಿಸಿದ್ದೇವೆ. ಕೊಡವರು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಪ್ರಬಲ ಸಮುದಾಯವಾಗಿದ್ದರೂ ಊರೊಂದು ರೂಪುಗೊಳ್ಳುವಾಗ ಕೇವಲ

ಕೊಡವರಿಂದ ಅದು ಸಾಧ್ಯವಾಗುವುದಿಲ್ಲ. ಐತಿಹಾಸಿಕವಾಗಿ ಕೊಡಗಿನ ಗ್ರಾಮರಚನೆಯನ್ನು ನೋಡುವಾಗ ಕೊಡವ, ಹೆಗ್ಗಡೆ, ಗೌಡ, ಐರಿ, ಬಣ್ಣ, ಕೆಂಬಟ್ಟಿ, ಕೋಲೆ, ಕೋಯ, ಬಂಟ, ಬಿಲ್ಲವ, ಮೇದ, ಅಗಸ ಮೊದಲಾದ ಸಮುದಾಯಗಳು ಸೇರಿದ ಗ್ರಾಮನಿರ್ಮಿತಿಯು ಕಾಣುತ್ತದೆ. ಗ್ರಾಮದ ಪರ್ವದಿನಗಳಲ್ಲಿ ಎಲ್ಲ ಸಮುದಾಯದ ಕುಟುಂಬಗಳು ಯಾವುದೇ ರೀತಿಯ ಮೂಲಭೂತ ಭಿನ್ನಾಭಿಪ್ರಾಯಗಳಿಲ್ಲದೆ ಕೂಡಾಡುತ್ತಿದ್ದುದು ಕಂಡುಬರುತ್ತದೆ. ಸಮುದಾಯಗಳ ಸಮ್ಮಿಲನದಿಂದ ಮಾತ್ರವೇ ಗ್ರಾಮದ ಹಬ್ಬಗಳು ಸಂಭ್ರಮದಿಂದ ಸಾಗಲು ಸಾಧ್ಯವಾಗುತ್ತಿತ್ತು. ದುರ್ಬಲವರ್ಗ, ಪ್ರಬಲವರ್ಗವೆಂಬ ಸಂಘರ್ಷದಲ್ಲಿ ಕೊಡಗಿನ ಅದೆಷ್ಟೋ ಕೊಡಗಿನ ಗ್ರಾಮಗಳು ಹುತ್ತರಿ, ಕೋಲಾಟ, ಭೂತಕೋಲ ಮೊದಲಾದ ಹಬ್ಬಗಳ ಆಚರಣೆಯಲ್ಲಿ ಅರ್ಥವಂತಿಕೆಯನ್ನು, ಸಂಭ್ರಮಾತಿಶಯತೆಯನ್ನು ಕಳೆದುಕೊಂಡಿವೆ.

ಕೊಡಗಿನ ಜನಜೀವನವು ಅವಿಭಕ್ತ ಕುಟುಂಬ ಪದ್ಧತಿಯ ಮೇಲೆ ನೆಲೆ ನಿಂತಿದೆ. ಇಲ್ಲಿ ಕೊಡವ ಸಮುದಾಯ ಪ್ರಬಲವರ್ಗವೆಂಬಂತೆ ಪರಿಗಣಿತವಾಗಿದ್ದರೂ, ಕೊಡವರಲ್ಲಿ ದುರ್ಬಲ ವರ್ಗ ಇಲ್ಲವೆಂದಲ್ಲ. ಇಂದು ಕೊಡಗಿನ ಗ್ರಾಮಗಳು ಮೇಲುಕೀಳುಗಳೆಂಬ ಭಾವನೆಗಳನ್ನು ಎಷ್ಟೇ ಬಿತ್ತಿಕೊಂಡಿದ್ದರೂ ಕೊಡಗಿನ ಪ್ರಾಚೀನ ಗ್ರಾಮ ಪರಿಕಲ್ಪನೆಯಲ್ಲಿ ವರ್ಗಸಂಘರ್ಷ ಅಷ್ಟಾಗಿ ಕಂಡುಬರುವುದಿಲ್ಲವೆಂಬುದನ್ನು ಮನಗಾಣಬಹುದಾಗಿದೆ. ಭಾವನಾತ್ಮಕ ಸಂಬಂಧಗಳ ಆಧಾರದ ಮೇಲೆ ರೂಪುಗೊಂಡ ಕೊಡಗಿನ ಒಕ್ಕಸಂಬಂಧಿ ಸಾಮಾಜಿಕ ಸಂರಚನೆಯೂ ಅತ್ಯಂತ ಪ್ರೌಢವೂ ಪುರೋಭಿವೃದ್ಧಿ ನೆಲೆಯದ್ದೂ ಆಗಿತ್ತು. ಅಂದು ಯಾವುದೇ ಸಮುದಾಯವನ್ನು ತುಚ್ಛೀಕರಿಸಿ ನೋಡುವ ವ್ಯವಸ್ಥೆ ಇರಲಿಲ್ಲ. ವರ್ಗವ್ಯತ್ಯಯಗಳೆಷ್ಟೇ ಇದ್ದರು ಆರ್ಥಿಕ ಸದೃಢತೆ, ಆರ್ಥಿಕ ಹಿನ್ನಡೆ ಯಾರಲ್ಲಿಯೂ ಬದುಕಿನ ಚಿಂತನೆಯ ವಿಷಯವಾಗಿರಲಿಲ್ಲ. ತಮ್ಮ ತಮ್ಮ ಕಾಯಕಗಳನ್ನು ನಿಷ್ಠೆಯಿಂದ ಮಾಡಿಕೊಂಡು ಸಮಾಜಮುಖಿಯಾಗಿ ಬಾಳುವ ಒಂದು ಸಾಮಾಜಿಕ ಸಂರಚನೆ ಕೊಡಗಿನಲ್ಲಿ ಅಸ್ತಿತ್ವದಲ್ಲಿತ್ತು.

ಕೊಡಗಿನಲ್ಲಿ ತಳವರ್ಗದ ಚರಿತ್ರೆಯನ್ನು ನಿರ್ಲಕ್ಷಿಸಲಾಗಿದೆ. ಬಂದಿದ್ದೇವೆ. ಬಹುಶಃ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉನ್ನತಸ್ಥಾನದಲ್ಲಿ ಕೊಡವರು ಇರುವುದೇ ಈ ರೀತಿಯ ಏಕಮುಖ ಚರಿತ್ರೆಗೆ ಕಾರಣವಿರಬಹುದು. ಜೊತೆಗೆ ಕೊಡವರಲ್ಲಿ ಇತ್ತೀಚೆಗೆ ತೀವ್ರವಾಗಿರುವ ಶ್ರೇಷ್ಠತೆಯ ವ್ಯಸನ ಮತ್ತು ಬದಲಾದ ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶದಲ್ಲಿ ತಮ್ಮ ಪಾವಿತ್ರ್ಯತೆ ಅಥವಾ ಪರಿಶುದ್ಧತೆಯನ್ನು ಕಾಯ್ದುಕೊಂಡು ಹೋಗುತ್ತಿರುವುದನ್ನು ಇಂದು ಅನೇಕ ನೆಲೆಗಳಲ್ಲಿ ಕಾಣುತ್ತಿದ್ದೇವೆ.

ಇದೆಲ್ಲದರ ಜೊತೆಗೆ ಏಕಮುಖ ಚರಿತ್ರೆಯನ್ನು ತೊರೆದು ಬಹುಮುಖಿ ಚರಿತ್ರೆಯ ರಚನೆ ಇಂದಿನ ಆಶಯಗಳಾಗಿವೆ. ಕೊಡಗಿನಲ್ಲಿ ಪ್ರತ್ಯೇಕ ರಾಜ್ಯದ ಬೇಡಿಕೆ ವ್ಯಾಪಕವಾಗಿದ್ದ ಸಂದರ್ಭದಲ್ಲಿ ಕೊಡಗಿನ ಕೃಷಿ ಸಮುದಾಯಗಳ ಆಚಾರ, ವಿಚಾರ, ವೇಷಭೂಷಣ ಇತ್ಯಾದಿಗಳನ್ನು ತಮ್ಮ

ಬೇಡಿಕೆಯನ್ನು ಪೂರೈಸಲು ಅತಿಯಾಗಿ ವಿಜೃಂಭಿಸಿದ ಚಳುವಳಿಗಾರರ ಪ್ರವೃತ್ತಿಯ ಬಗ್ಗೆ ವಿಜಯಾ ಪೂಣಚ್ಚ ತಂಬಂಡ ಅವರು ತಮ್ಮ 'ಕೊಡಗು ಪ್ರತ್ಯೇಕ ರಾಜ್ಯ(ಮೂಲ ನಿವಾಸಿಗಳು ಮತ್ತು ವಲಸೆಗಾರರು)' ಎಂಬ ಕಿರುಹೊತ್ತಗೆಯಲ್ಲಿ ವಿಮರ್ಶೆ ಮಾಡಿರುವುದು ಕಂಡುಬರುತ್ತದೆ (ತಂಬಂಡ, ೧೯೯೮: ೫). ಕೊಡಗಿನ ಮೂಲನಿವಾಸಿಗಳು ಹಾಗೂ ಇಲ್ಲಿನ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಕುರಿತಂತೆ ವಿಜಯ್ ಪೂಣಚ್ಚ ತಂಬಂಡ ಹೀಗೆ ಹೇಳುತ್ತಾರೆ.

> ಕೊಡಗಿನ ಸಾಂಸ್ಕೃತಿಕ ವೈಶಿಷ್ಟ್ಯಗಳು ಇಂದು ದೇಶದ ಮೂಲೆಮೂಲೆಗೂ ತಲುಪಿದ್ದರೆ ಅದಕ್ಕೆ ಮುಖ್ಯ ಕಾರಣ ಕೊಡಗಿನ ಜನರಲ್ಲಿ ಅತ್ಯಂತ ಸ್ವಾಭಾವಿಕವಾಗಿ ಮನೆ ಮಾಡಿರುವ ಹೃದಯ ವೈಶಾಲ್ಯತೆ. ಈ ರೀತಿ ಹೃದಯ ವೈಶಾಲ್ಯತೆಗೆ ಹೆಸರಾದವರು ಖಂಡಿತವಾಗಿಯೂ–ಹಗಲಿರುಳು ತಮ್ಮತಮ್ಮ ತೋಟಗಳಲ್ಲಿ, ಗದ್ದೆಗಳಲ್ಲಿ ದುಡಿದು ನಿಜವಾದ ಅರ್ಥದಲ್ಲಿ ಮಣ್ಣಿನ ಮಕ್ಕಳಾದವರು. ಇಂಥವರು ಸಹಜವಾಗಿಯೇ ತಮ್ಮ ಸಂಸ್ಕೃತಿಯ ಬಗ್ಗೆ ಕೂಡ ಅಭಿಮಾನದಿಂದ ಇರುವವರು. ಯಾವುದೋ ರಾಜಕೀಯ ಲಾಭಕ್ಕಾಗಿ, ಅಧಿಕಾರಕ್ಕಾಗಿ ಸರಕಾರದಿಂದ ಬರುವ ಆರ್ಥಿಕ ಸವಲತ್ತುಗಳಿಗಾಗಿ ವ್ಯಾಪಾರಕ್ಕೆ ಹೊರಟವರಂತೆ ಕೊಡಗಿನ ಸಂಸ್ಕೃತಿಯ ಅಭಿವ್ಯಕ್ತಿಗಳಾದ "ಕುಪ್ಪಿಯ ಚ್ಯಾಲೆ, ಮಂಡೆತುಣಿ (ರುಮಾಲು), ಪೀಚೆಕತ್ತಿ, ಒಡಿಕತ್ತಿ" ಇತ್ಯಾದಿಗಳನ್ನು ಬೀದಿಯಲ್ಲಿ ಪ್ರದರ್ಶನಕ್ಕೆ ಇಡದ ಜನ ಇವರು. ಈ ವರ್ಗದ ಜನರೇ ಕೊಡಗಿನಲ್ಲಿ ಬಹುಸಂಖ್ಯಾತರೆಂದರೆ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ. ಕೊಡಗಿನ ಕೊಡವ, ಗೌಡ, ಅಮ್ಮಕೊಡವ, ಹೆಗ್ಗಡೆ, ಐರಿ, ಕೋಯವ, ಗೊಲ್ಲರಂತಹ ಭೂಹಿಡುವಳಿ ಹೊಂದಿರುವ ಸಮುದಾಯಗಳು, ಕೆಂಬಟ್ಟಿ ಸಮುದಾಯದಂತಹ ಭೂರಹಿತ ಸಮುದಾಯಗಳು ಈ ವರ್ಗದಲ್ಲಿ ಬರುತ್ತವೆ. ಇವರೆಲ್ಲರನ್ನೂ ವಿಶಾಲಾರ್ಥದಲ್ಲಿ **ಮೂಲನಿವಾಸಿಗಳು** ಎಂದು ಗುರುತಿಸಲಾಗುತ್ತದೆ(ತಂಬಂಡ, ೧೯೯೮: ೫–೬).

ಕೊಡಗಿನಲ್ಲಿ ವಸಾಹತುಪೂರ್ವ ಕಾಲಘಟ್ಟದಲ್ಲಿ ಕಂಡುಬಂದ ಸಾಮರಸ್ಯ ಸಮನ್ವಯತೆಗಳು ಜಾಗತೀಕರಣ ಸಂದರ್ಭದಲ್ಲಿ ಶಿಥಿಲಗೊಂಡದ್ದನ್ನು ಗಮನಿಸಿದ್ದೇವೆ. ಜಾಗತೀಕರಣ ಸಂದರ್ಭದಲ್ಲಿ ಜನಾಂಗೀಯ ಅನನ್ಯತೆಗಳ ವಿಚಾರ ತಲೆ ಎತ್ತಿದಾಗ ಸಮುದಾಯ ಸಮುದಾಯಗಳ ನಡುವೆ ಅಂತರವೇರ್ಪಟ್ಟಿದ್ದನ್ನು ಇಲ್ಲಿ ಗಮನಿಸಬಹುದು.

ಯಾವುದೇ ಸಮಾಜದಲ್ಲಿ ಸ್ತರವಿನ್ಯಾಸಗಳಿರುವಂತೆ ಕೊಡಗಿನಲ್ಲಿಯೂ ಇರುವುದು ಸಹಜ. ಜಮೀನ್ದಾರಿ ವ್ಯವಸ್ಥೆಯಿಂದ ಹೊರತಲ್ಲದ ಕೊಡಗಿನ ಸಮಾಜದಲ್ಲಿ ಜಮೀನ್ದಾರಿಕೆ ಮತ್ತು ಅದರ ಪರಿಣಾಮಗಳಿಗೆ ಒಳಗಾಗಿರುವ ವರ್ಗದವರನ್ನು ದೇಶದ ಇತರೆಡೆಗಳಲ್ಲಿ ಕಾಣಬಹುದಾದರೂ ಕೊಡಗಿನ ಜನಜೀವನದಲ್ಲಿ ಅದು ಭಿನ್ನವಾಗಿ ಕಾಣುತ್ತದೆ. ಹಿಂದೆಂದಿಗಿಂತಲೂ ಇಂದು ಶೋಷಣೆ, ಅಸಮಾನತೆ ಮೊದಲಾದ ವಿಚಾರಗಳು ಹೆಚ್ಚು ಚರ್ಚಿತವಾಗುತ್ತಿದ್ದರೂ ೨೧ನೇ ಶತಮಾನದಲ್ಲಿ ನಿಂತ ನಾವು ಇವುಗಳಿಂದ ಮುಕ್ತವಾಗಿಲ್ಲವೆಂಬುದನ್ನು ತಿಳಿಯಬೇಕಾಗಿದೆ.

**ಕೊನೆ ಟಿಪ್ಪಣಿಗಳು**

೧. ಅಂಗಕಳಿ – ಒಕ್ಕದ ರಿಯನು ಸತ್ತ ಸಂದರ್ಭದಲ್ಲಿ ಒಕ್ಕದ ಜಮ್ಮದಾಳುಗಳಾದ ಕೆಂಬಟ್ಟಿ ಸಮುದಾಯದ ಜನರು ಸಂತಾಪ ಸೂಚಿಸಿ ಮಾಡುವ ನೃತ್ಯ.

೨. ಕುಪ್ಯ, ಚೇಲೆ, ಪೀಚೆಕತ್ತಿ – 'ಕುಪ್ಯ' ಎಂದರೆ ಕೊಡಗಿನ ಸಾಂಪ್ರದಾಯಿಕ ಉಡುಪಾದ ಕುಪ್ಪಸ. 'ಚೇಲೆ' ಎಂದರೆ ಕುಪ್ಪಸದ ಸುತ್ತಲೂ ಸುಂಟಕ್ಕೆ ಸುತ್ತುವ ದಟ್ಟಿ. 'ಪೀಚೆಕತ್ತಿ' ಎಂದರೆ ಗಂಡಸರು ಸೊಂಟಕ್ಕೆ ತೊಡುವ ಚಿಕ್ಕ ಖಡ್ಗ ರೂಪದ ಚಿನ್ನ, ಬೆಳ್ಳಿಗಳಿಂದ ಮಾಡಿದ ಆಭರಣ.

೩. ಪತ್ತಾಕ್ – ಕೊಡಗಿನಲ್ಲಿ ಮದುವೆ ಆದ ಹೆಣ್ಣುಮಕ್ಕಳು ಹಾಕಿಕೊಳ್ಳುವ ತಾಳಿ.

೪. ಕುಂಡೆಹಬ್ಬ – ದಕ್ಷಿಣ ಕೊಡಗಿನ ಕುರುಬ ಸಮುದಾಯದವರು ಆಚರಿಸುವ ಭದ್ರಕೊಳ ಭದ್ರಕಾಳಿಯ ಹಬ್ಬ. ಈ ಹಬ್ಬದಲ್ಲಿ ವೇಷಧರಿಸಿ ಆಡುತ್ತಾ, ಕುಣಿಯುತ್ತಾ, ಮೇಲ್ವರ್ಗದ ಕೃಷಿಕೇಂದ್ರಿತ ಸಮುದಾಯದವರಿಗೆ ಅಶ್ಲೀಲ ಪದಗಳಿಂದ ಬೈಯ್ಯುವುದಿದೆ. ಈ ಹಬ್ಬವು ಬಹಳ ವರ್ಣರಂಜಿತವಾಗುತ್ತದೆ(ಮಾಹಿತಿದಾರರು – ಮಲ್ಲಂಗಡ ಕವನ್ ಕಾರ್ಯಪ್ಪ, ವಯಸ್ಸು ೩೦, ಬೆಂಗಳೂರು, ದಿನಾಂಕ ೨೫.೧.೨೦೧೬).

೫. ಕೋಲಂದೆರೆ – ಪಣಿಕ, ಬಣ್ಣ, ಮಲೆಯ ಮೊದಲಾದ ಸಮುದಾಯಗಳು ದೈವಗಳ ವೇಷ ಹಾಕಿ, ದೈವವನ್ನು ಮೈಗೆ ಆಹ್ವಾಹನೆ ಮಾಡಿಕೊಳ್ಳುವ ಪ್ರಕ್ರಿಯೆ. ಇದನ್ನು ದಕ್ಷಿಣ ಕನ್ನಡದಲ್ಲಿ ಭೂತಾರಾಧನೆ ಎಂದು ಕರೆಯುತ್ತಾರೆ.

೬. ದುಡಿಕೊಟ್ಟಪಾಟ್ – ಕೊಡಗಿನ ಜಾನಪದ ಹಾಡು. ಇದನ್ನು ಹಾಡುತ್ತಾ, ಅದಕ್ಕೆ ಸರಿಯಾದ ತಾಳ ವಾದ್ಯವನ್ನು ಹೊಡೆಯುವ ಪ್ರಕ್ರಿಯೆ.

೭. ಮಾಹಿತಿದಾರರು – ಪೊಟ್ಟಂಡ ನವೀನ್ ಉತ್ತಯ್ಯ, ವಯಸ್ಸು ೪೦, ಹಾಲುಗುಂದ, ಕೊಡಗು ಜಿಲ್ಲೆ, ದಿನಾಂಕ ೯.೫.೨೦೧೨.

೮. ಮಾಹಿತಿದಾರರು – ಅಲ್ಲಪ್ಪಿರ ಪೂವಪ್ಪ, ವಯಸ್ಸು ೫೦, ಆನೆಬೆಪ್ಪುನಾಡು, ಕೊಡಗು ಜಿಲ್ಲೆ, ದಿನಾಂಕ ೧೧.೫.೨೦೧೩.

೯. ಮಾಹಿತಿದಾರರು – ಪಾಸುರ ಪಾಲಿ, ಮಾದಾಪುರ ಪ್ರಾಂತ್ಯದಿಂದ ಪಾಲಂಗಾಲ ಗ್ರಾಮದ ಭದ್ರಕಾಳಿ ಅಮ್ಮನ ದರ್ಶನಕ್ಕೆ ಪಾಸುರ ಒಕ್ಕದ ಸದಸ್ಯರು, ದಿನಾಂಕ ೨೭.೩.೨೦೧೩ರಂದು ಆಗಮಿಸಿದರು.

೧೦. ಮಾಹಿತಿದಾರರು – ವಿ.ಎ. ಕುಟ್ಟಪ್ಪ, ವಾಟೇರಿರ ಒಕ್ಕದ ವಂಶಸ್ಥ, ವಯಸ್ಸು ೫೦, ಬೆಂಗಳೂರು, ದಿನಾಂಕ ೨.೨.೨೦೧೪.

೧೧. ಮಾಹಿತಿದಾರರು – ಮಮ್ಮದ್ಅಲಿ, ಮಂದಮಾಡ ಒಕ್ಕಸ್ಥ, ವಯಸ್ಸು ೬೦, ಕಂಡಂಗಾಲ ಗ್ರಾಮ, ಕೊಡಗು ಜಿಲ್ಲೆ, ದಿನಾಂಕ ೧೭.೮.೨೦೧೧.

೧೨. ಮಾಹಿತಿದಾರರು – ನಡಿಕೇರಿಯಂಡ ಮಾಚಯ್ಯ, ವಯಸ್ಸು ೮೨, ಪಾಲಂಗಾಲ ಗ್ರಾಮ, ಕೊಡಗು ಜಿಲ್ಲೆ, ದಿನಾಂಕ ೧೪.೩.೨೦೧೩.

೧೩. ಮಾಹಿತಿದಾರರು – ಕೋಟ್ರಂಗಡ ಮನು, ಶಾಲಾ ಶಿಕ್ಷಕರು, ವಯಸ್ಸು ೫೫, ಶ್ರೀಮಂಗಲನಾಡು, ಕೊಡಗು, ದಿನಾಂಕ ೩.೯.೨೦೧೫.

೧೪. ಮಾಹಿತಿದಾರರು – ಮಚ್ಚಿಯಂಡ ಕುಟ್ಟಪ್ಪ, ವಯಸ್ಸು ೩೨, ಪೊನ್ನಂಪೇಟೆ ಕೊಡಗು ಜಿಲ್ಲೆ, ದಿನಾಂಕ ೪.೯.೨೦೧೫.

೧೫. ಮಾಹಿತಿದಾರರು – ಕೊಕ್ಕೆಂಗಡ ದೀಲಿಪ್, ವಯಸ್ಸು ೬೦, ಸುಳುಗೋಡು ಗ್ರಾಮ, ಕೊಡಗು ಜಿಲ್ಲೆ, ದಿನಾಂಕ ೧೧.೧೦.೨೦೧೪.

೧೬. ತಕ್ಕ ಎಂದರೆ ಊರಿನ ಅಥವಾ ನಾಡಿನ ಮುಖ್ಯಸ್ಥ. ದೇವಸ್ಥಾನದ ಮುಖ್ಯಸ್ಥನು ತಕ್ಕನೆಂದೇ ಗುರುತಿಸಲ್ಪಸಡುತ್ತಾನೆ. ಈ ಸ್ಥಾನ ಅಧಿಕಾರಯುತವುಳ್ಳದ್ದಾಗಿದ್ದು, ಇವನ ಆಣತಿಯಂತೆ ಸಂಬಂಧಪಟ್ಟ ಜನಗಳು ನಡೆದುಕೊಳ್ಳಬೇಕಿತ್ತು. ನ್ಯಾಯ ತೀರ್ಮಾನಗಳು ಇವನ ಮುಂದಾಳತ್ವದಲ್ಲಿ ನಡೆಯುತ್ತಿತ್ತು.

೧೭. ಅಂಬಲವು ಚೌಕಾಕಾರದ ಚಿಕ್ಕ ಕಟ್ಟಡವಾಗಿದ್ದು, ನಾಲ್ಕು ಕಡೆಗಳಲ್ಲಿನ ಕಟ್ಟಡಗಳಲ್ಲಿ ಕುಳಿತುಕೊಳ್ಳಲು ಕಲ್ಲು ಅಥವಾ ಮರದ ಹಾಸು ಇರುತಿತ್ತು. ಅಂಬಲವು ಊರಿನ ಎಲ್ಲರೂ ಸೇರಿ ಚರ್ಚಿಸಲು ಸ್ಹಜ ಅನುಕೂಲಕರವಾದ ಸ್ಥಳದಲ್ಲಿರುತ್ತಿತ್ತು.

೧೮. ಮಂದ್ ಎಂದರೆ ವಿಶಾಲವಾದ ಮೈದಾನ. ಮಧ್ಯೆ ಆಲದ ಮರ ಹಬ್ಬದ ಸಂದರ್ಭದಲ್ಲಿ, ಹುತ್ತರಿ ಸಂದರ್ಭದಲ್ಲಿ ಈ ಮೈದಾನದಲ್ಲಿ ಕೋಲಾಟ ಮತ್ತು ಬೊಳಕಾಟ್‌ಗಳನ್ನು ಆಡುವ ಸಾಂಸ್ಕೃತಿಕ ಕೇಂದ್ರ.

೧೯. ಪೊಳೆವಾಡ್ – ಕೊಡಗಿನ ಸಮಾಜದಲ್ಲಿ ತಪ್ಪು ಮಾಡಿದವರಿಗೆ ಜುಲ್ಮಾನೆ ಅಥವಾ ತಪ್ಪು ಹಣ ಕಟ್ಟಿಸುವುದನ್ನು ಪೊಳೆವಾಡ್ ಎಂದು ಕರೆಯುತ್ತಿದ್ದರು.

೨೦. ಪೊರಂಬಡಿ – ಗ್ರಾಮದ ಕಾನೂನುಗಳನ್ನು ಉಲ್ಲಂಘಿಸುವವರನ್ನು ಬಹಿಷ್ಕಾರ ಮಾಡುವ ಕ್ರಮವಿತ್ತು. ಇದನ್ನು 'ಪೊರಂಬಡಿ' ಎಂದು ಕರೆಯುತ್ತಾರೆ.

೨೧. ಕೊಡಿಕೀರುವ ಅಥವಾ ಕರೆಕೀರುವ – ಎಂದರೆ ವೈಷಮ್ಯದ ಕಾರಣದಿಂದ ಸಂಬಂಧವನ್ನು ಕಡಿದುಕೊಳ್ಳುವ ಹಳೆಯ ಕ್ರಮ. ಇದು ಸಾಧಾರಣವಾಗಿ ಒಕ್ಕದ ಒಳಗೆ ನಡೆಯುತ್ತಿತ್ತು.

೨೨. ಪೊಲೆಂದಲೆ ಎಂದರೆ ಸೂತಕ.

೨೩. ಕೊಡಗಿನ ಭೂತಾರಾಧನೆಯ ಪ್ರಕಾರಗಳು.

೨೪. ಊರಹಬ್ಬ ಮೊದಲಾದುವುಗಳಲ್ಲಿ ದೇವರ ಹೆಸರಿನಲ್ಲಿ ಕೊಡಬೇಕಾಗಿದ್ದ ತೆರಿಗೆಯೇ ದೇವಕರ.



ಅಧ್ಯಾಯ : ನಾಲ್ಕು

# ನಾಡು ನುಡಿಯ ಅಭಿವ್ಯಯಾಗಿ ಒಕ್ಕಗಳು

**೪.೧. ಕೊಡಗು ಸಮಗ್ರ ನಾಡಾಗಿ ರೂಪುಗೊಂಡ ಪ್ರಕ್ರಿಯೆ**

೪.೧.೧. ರಾಜಕೀಯ ಹಿನ್ನೆಲೆ (ನಾಡು)

೪.೧.೨. ಕೊಡಗು ಭಾಷೆ (ನುಡಿ)

## ಅಧ್ಯಾಯ : ನಾಲ್ಕು

# ನಾಡು ನುಡಿಯ ಅಭಿವ್ಯಕ್ತಿಯಾಗಿ ಒಕ್ಕಗಳು

**ಕ**ನ್ನಡ ಕರ್ನಾಟಕ ಸಂದರ್ಭದಲ್ಲಿ ನಾಡು-ನುಡಿ ಎನ್ನುವುದನ್ನು ನಿರ್ವಚಿಸಿದ ಅಥವಾ ನಿರ್ವಚಿಸುವ ರೀತಿಗಿಂತ ಭಿನ್ನವಾಗಿ ಕೊಡಗಿನ ಸಂದರ್ಭದಲ್ಲಿ ನಾಡು-ನುಡಿಯನ್ನು ಅಭ್ಯಸಿಸಲು ಯತ್ನಿಸಲಾಗಿದೆ. ಚೋಳ ವಿಜಯನಗರ ಚರಿತ್ರೆ ಬರವಣಿಗೆ ಸಂದರ್ಭದಲ್ಲಿ ಕಂಡುಕೊಳ್ಳಲಾದ "ನಾಡು" ಚಿಂತನೆಗೆ ಕೊಡಗಿನ ಸಂದರ್ಭದಲ್ಲಿ ಚರ್ಚಿಸಲಾಗುವ ನಾಡು-ನುಡಿ ಪ್ರಶ್ನೆಗಳು ಹೆಚ್ಚು ಹತ್ತಿರವಾಗುತ್ತದೆ ಎನ್ನುವುದು ಉಚಿತವಾಗುತ್ತದೆ. ಅಂದರೆ, ಭಾಷಿಕ ಕೇಂದ್ರಿತ ಮೂಲಕ ಮಾತ್ರವಲ್ಲದೆ 'ನಾಡುವಿನ' ಮೂಲಕ ಒಂದು ಪ್ರದೇಶದಲ್ಲಿರುವ ಅವಿಭಕ್ತ ಕುಟುಂಬಗಳನ್ನು ಹೊಂದಿರುವ ಸಮುದಾಯಗಳನ್ನು ಅರ್ಥಾತ್ "ನಾಡು ಸಮುದಾಯಗಳನ್ನು" ಅರ್ಥಮಾಡಿಕೊಳ್ಳುವ ಪ್ರಯತ್ನ ಇದು. ಪ್ರಸ್ತುತ ಮಹಾಪ್ರಬಂಧದಲ್ಲಿ ನಾಡು ಎಂದರೆ ಚರಿತ್ರೆ ಬರವಣಿಗೆಗಳಲ್ಲಿ ರಾಜ್ಯವ್ಯವಸ್ಥೆಗೆ ಸಂಬಂಧಿಸಿದ ಪೂರಕವಾಗಿರುವ ನಾಡುಗಳಾಗಿವೆ. 'ನುಡಿ' ಎಂದರೆ ಜನರಾಡುವ ಮಾತೇ ಆಗಿದೆ. ಕೊಡಗಿನಲ್ಲಿ ಕನ್ನಡ ಭಾಷಿಕರ ಸಂಖ್ಯೆ ಗಣನೀಯವಾಗಿದ್ದರೂ ಮಧ್ಯಕಾಲೀನ ಮತ್ತು ಮಧ್ಯಕಾಲೀನೋತ್ತರ ಕೊಡಗಿನಲ್ಲಿ ಬಹಳ ಪ್ರಭಾವಿಯಾಗಿದ್ದದ್ದು ಕೊಡಗು ಭಾಷೆ. ಹಾಗೆಯೇ ಕೊಡಗಿನಲ್ಲಿ ಎರವ, ಕುಡಿಯ ಮುಂತಾದ ಬುಡಕಟ್ಟು ಭಾಷೆಗಳು ಚಾಲ್ತಿಯಲ್ಲಿವೆ. ಮುಖ್ಯವಾಗಿ ಕೃಷಿಕೇಂದ್ರಿತ ಸಮುದಾಯಗಳ ಜನರು, ಕುಶಲಕರ್ಮಿ ಸಮುದಾಯಗಳು ಮತ್ತು ಕೆಲವು ದಲಿತ ಸಮುದಾಯಗಳ ಜನರು ಕೊಡಗು ಭಾಷೆಯನ್ನು ಮಾತನಾಡುತ್ತಾರೆ. ಕನ್ನಡಕ್ಕೆ ಹೋಲಿಕೆಯಿರುವ ಅರೆಗನ್ನಡ ಭಾಷೆಯನ್ನು ಮಾತಾಡುವ ಸಮುದಾಯಗಳಿವೆ. ಹಾಗೆಯೇ ಕುಡಿಯ, ಎರವ ಭಾಷೆಗಳನ್ನಾಡುವ ಬುಡಕಟ್ಟು ಸಮುದಾಯಗಳಿವೆ. ಇದಲ್ಲದೆ ಕೊಡವ ಮತ್ತು ಮಲೆಯಾಳಂ, ಕನ್ನಡ ಮತ್ತಿತರ ದ್ವಿಭಾಷಿಕ ಜನರನ್ನು ಕೊಡಗಿನಲ್ಲಿ ಕಾಣಬಹುದು. ಅಂದರೆ ಬಹುಭಾಷಿಕರಿರುವ ಸಮುದಾಯಗಳಿಂದ ರೂಪಿತಗೊಂಡ ನಾಡುಗಳನ್ನು ಕೊಡಗಿನ ಗಡಿಯೊಳಗೆ ಕಾಣಬಹುದಾಗಿದೆ. ಇಂತಹ ಸಮುದಾಯಗಳಲ್ಲಿ ಕೃಷಿ, ವ್ಯಾಪಾರ, ಕುಶಲಕರ್ಮಿಗಳು, ಕೃಷಿ ಕೂಲಿಗಾರರು, ಮುಂತಾದ ವೃತ್ತಿಯವರೆಲ್ಲ ಬರುತ್ತಾರೆ. ಪರಸ್ಪರ ಸಂಬಂಧಗಳಿದ್ದ ಇಂತಹ ಸಮುದಾಯಗಳು ಒಂದು ರೀತಿಯ ಸ್ವಯಂ ವ್ಯವಸ್ಥೆಯಿದ್ದ ಗ್ರಾಮ/ನಾಡುಗಳನ್ನು ರೂಪಿಸಿಕೊಂಡಿದ್ದವು. ನಾಡಿನ ವಿವಿಧ ಸಮುದಾಯಗಳ ದೈನಂದಿನ ಕೆಲಸ ಕಾರ್ಯಗಳು

ಪರಸ್ಪರ ಪೂರಕವಾಗಿ ನಿರ್ವಹಿಸಲ್ಪಡುತ್ತಿತ್ತು. ಆದರೆ ಇಂತಹ ಸಮುದಾಯಗಳ ನಡುವೆ ಅಸಮಾನತೆಯ ಅಂಶಗಳು ಬಹಳಷ್ಟಿದ್ದರೂ, ಶೋಷಿತ ಪ್ರವೃತ್ತಿಯು ಬಹಳಷ್ಟಿದ್ದರೂ, ಸಮುದಾಯ ಸಮುದಾಯಗಳ ನಡುವಿನ ಘರ್ಷಣೆ, ನ್ಯಾಯದ ಪ್ರಶ್ನೆಗಳು ಬಂದಾಗ ಸ್ಥಳೀಯ ಮಟ್ಟದಲ್ಲಿ ತಕ್ಕ ಮುಖ್ಯಸ್ಥರು(ಊರಿನ ಮುಖ್ಯಸ್ಥರು) ನ್ಯಾಯ ತೀರ್ಮಾನವನ್ನು ನೀಡುತ್ತಿದ್ದರು. ಸಮುದಾಯಗಳ ಒಳಗಿನ ಪ್ರಶ್ನೆಗಳನ್ನು ಆಯಾ ಸಮುದಾಯಗಳೇ ನಿರ್ವಹಿಸುತ್ತಿದ್ದವು. ಅರಸರ ಅಧಿಕಾರವು ನಿಧಾನವಾಗಿ ಕೇಂದ್ರೀಕರಣಗೊಂಡಿದ್ದು ಸುಮಾರು ೧೭ ಮತ್ತು ೧೮ನೆಯ ಶತಮಾನಗಳಲ್ಲಿ ಎಂದು ಹೇಳಬಹುದು. ಇಂತಹ ವ್ಯವಸ್ಥೆಯು ಬ್ರಿಟಿಷರು ೧೮೩೪ರ ಹೊತ್ತಿಗೆ ಕೊಡಗನ್ನು ಆಕ್ರಮಿಸುವವರೆಗೂ ಇತ್ತು. ಅಲ್ಲಿಂದ ೧೯೪೭ರವರೆಗಿದ್ದ ಸ್ಥಿತ್ಯಂತರದಲ್ಲಿ ಸಮುದಾಯಗಳ ತೀರ್ಮಾನಗಳನ್ನು, ನ್ಯಾಯಪದ್ಧತಿಯನ್ನು ಬ್ರಿಟಿಷ್ ಕಾನೂನುಗಳು ಬದಲಾಯಿಸಿದವು. ಸಾಂಪ್ರದಾಯಿಕ ಮೌಲ್ಯಗಳು, ತೀರ್ಮಾನಗಳು ನಿಧಾನವಾಗಿ ಹಿಂದೆ ಸರಿದವು. ೧೯೪೭ರ ನಂತರ ಬ್ರಿಟಿಷರ ಕಾಲದ ಕಾನೂನುಗಳು ಮುಂದುವರಿದದ್ದು ಸರಿಯಷ್ಟೆ. ಜಾಗತೀಕರಣದ ಸಂದರ್ಭದಲ್ಲಿ ಕೊಡಗಿನ ಸ್ಥಳೀಯರಿಗೆ ಸ್ಥಳೀಯ ಸಾಂಪ್ರದಾಯಿಕ ಮೌಲ್ಯಗಳ ಬಗ್ಗೆ ಜನರಿಗೆ ಇರುವ ತೀವ್ರವಾದ ಒಲವನ್ನು ಗುರುತಿಸಬಹುದು. ಈ ಸ್ಥಿತ್ಯಂತರಗಳನ್ನು ಕೊಡಗಿನ ಅವಿಭಕ್ತ ಕುಟುಂಬ ಸಾಮಾಜಿಕ ಸಂರಚನೆ ಮತ್ತು ರಾಜ್ಯವ್ಯವಸ್ಥೆಯ ಮೇಲಿನ ಚರ್ಚೆಗಳ ಮೂಲಕ ಕೈಗೊಳ್ಳಲು ಪ್ರಸ್ತುತ ಅಧ್ಯಾಯವು ಉದ್ದೇಶಿಸಿದೆ.

ನಾಡೊಂದು ರೂಪುಗೊಳ್ಳಬೇಕಿದ್ದರೆ ಅದಕ್ಕೆ ಭೌಗೋಳಿಕ ಅಂಶಗಳು ಮಾತ್ರ ಸಾಕಾಗುವುದಿಲ್ಲ; ಜೊತೆಗೆ ಆ ಭೌಗೋಳಿಕ ಪ್ರದೇಶದಲ್ಲಿ ವಾಸವಾಗಿರುವ ಜನ, ಸಂಸ್ಕೃತಿ, ಭಾಷೆ, ಆಚಾರ–ವಿಚಾರಗಳು ಕೂಡ ಮುಖ್ಯವಾಗುತ್ತದೆ. ಒಂದು ನಾಡಿನಲ್ಲಿ ಒಂದೇ ತೆರನಾದ ಒಂದೇ ಸಂಸ್ಕೃತಿಯ ಜನಗಳು ಇರಲೇ ಬೇಕೆನ್ನುವ ಅಪೇಕ್ಷೆಯು ಚಾರಿತ್ರಿಕವಾಗಿ ಕಾಣಸಿಗುವುದಿಲ್ಲ. ಒಂದು ಸಮುದಾಯ/ವರ್ಗಕ್ಕೆ ಒಂದು ಪ್ರದೇಶವನ್ನು ಸೀಮಿತಗೊಳಿಸುವುದು ಉಚಿತವಾಗುವುದಿಲ್ಲ. ವಿಭಿನ್ನ ಸಂಸ್ಕೃತಿಯ, ಸಮುದಾಯಗಳ, ಬುಡಕಟ್ಟುಗಳ ಜನರು ಸೇರಿ ಒಂದು ಸಮೃದ್ಧ ನಾಡಿನ ರೂಪುಗೊಳ್ಳುವಿಕೆಗೆ ಕಾರಣರಾಗುತ್ತಾರೆ.

ಕೊಡಗಿನ ಸಂದರ್ಭದಲ್ಲಿಯೂ ಇದನ್ನು ಗಮನದಲ್ಲಿಟ್ಟುಕೊಂಡು 'ನಾಡು' ರೂಪುಗೊಂಡ ಹಿನ್ನೆಲೆಯನ್ನು ನೋಡಬೇಕಾಗುತ್ತದೆ. ವಸಾಹತುಪೂರ್ವ ಅಂದರೆ ಲಿಂಗಾಯತ ಅರಸರ ಕಾಲಘಟ್ಟ, ಬ್ರಿಟಿಷ್ ಆಳ್ವಿಕೆ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟ ಈ ಮೂರು ಹಂತಗಳಲ್ಲಿ ಕೊಡಗು ಒಂದು ದೇಶವಾಗಿ, ಒಂದು ರಾಜ್ಯವಾಗಿ ಮತ್ತು ಒಂದು ಜಿಲ್ಲೆಯಾಗಿ ಹೇಗೆ ನಿರಂತರ ಪ್ರಕ್ರಿಯೆಗೆ ಒಳಪಟ್ಟಿತ್ತು ಎಂಬುದರ ಅಧ್ಯಯನ ಮುಖ್ಯವಾಗುತ್ತದೆ. ಹಾಗೆಯೇ ಅನೇಕ ಒಕ್ಕಗಳು ಸೇರಿ ಒಂದು ನಾಡು ಹೇಗೆ ರೂಪುಗೊಂಡಿತು ಎಂಬುದರ ಬಗ್ಗೆ ತಿಳಿದುಕೊಳ್ಳುವುದು ಕೂಡ ಅಗತ್ಯವಾಗಿದೆ. ನಾಡು ರೂಪುಗೊಳ್ಳಬೇಕಾದರೆ ಅಲ್ಲಿ ಯಾವುದೋ

ಪ್ರಬಲ ಸಮುದಾಯವೊಂದೇ ಕಾರಣವಾಗುವುದಿಲ್ಲ. ಬದಲಾಗಿ ಭಿನ್ನ ಭಿನ್ನ ಸಂಸ್ಕೃತಿಯ ಸಮುದಾಯಗಳು, ಕೃಷಿಕರು, ಕೃಷಿಕಾರ್ಮಿಕರು, ದಲಿತರು, ವಿವಿಧ ಕಸಬುಗಳಲ್ಲಿ ತೊಡಗಿಸಿಕೊಂಡ ಸಮುದಾಯಗಳು ಎಲ್ಲರೂ ಸೇರಿ ನಾಡು ಕಟ್ಟಲು ಕಾರಣಕರ್ತರಾಗಿದ್ದನ್ನು ಅಲ್ಲಗಳೆಯುವಂತಿಲ್ಲ.[೧] ಕಾಡೊಂದು ರೂಪುಗೊಳ್ಳಬೇಕಾದರೆ ಅನೇಕ ರೀತಿಯ ಸಸ್ಯಗಳು, ಪ್ರಾಣಿಪಕ್ಷಿಗಳು ಹಾಗೂ ಇತರ ಜೀವರಾಶಿಗಳು ಹೇಗೆ ಮುಖ್ಯವಾಗುತ್ತದೋ, ಹಾಗೆಯೇ ಒಂದು ನಾಡು ರೂಪುಗೊಳ್ಳಬೇಕಾದರೆ ವಿಭಿನ್ನ ಸಂಸ್ಕೃತಿ, ಭಾಷೆ, ಸಮುದಾಯಗಳ ಜನರು ಅಷ್ಟೇ ಮುಖ್ಯವಾಗುತ್ತದೆ. ಇದಲ್ಲದೆ ನಾಡು ಕಟ್ಟುವಲ್ಲಿ ಭಾಷೆಯ ಪಾತ್ರ ಬಹಳ ಮುಖ್ಯವಾಗುತ್ತದೆ. ಅದನ್ನೇ ಇಲ್ಲಿ ನುಡಿ ಎಂದು ಬಳಸಲಾಗಿದೆ.

ಇದಲ್ಲದೆ ಕೊಡಗಿನಲ್ಲಿ ಅರೆಭಾಷೆ ಕನ್ನಡವನ್ನು ಗೌಡ ಸಮುದಾಯವರು ಮಾತಾಡುತ್ತಾರೆ. ಹಾಗೆಯೇ ಪೂರ್ವದ ಮಲಬಾರ್ ಪ್ರಾಂತ್ಯದ ಭಾಗವಾಗಿದ್ದ 'ಕೊಡಗು' ಪ್ರದೇಶದ ಜನರಿಗೆ 'ಮಲಯಾಳಂ' ಭಾಷೆ ಹೊಸತಲ್ಲ. ಭಾಷಾವಾರು ಪ್ರಾಂತ್ಯ ರಚನೆಯಾದ ನಂತರದಲ್ಲಿ ಕರ್ನಾಟಕಕ್ಕೆ ವಿಲೀನಗೊಂಡ 'ಕೊಡಗು' ಕೇರಳದ ಮಲಬಾರ್‌ನಂದ ಭೌಗೋಳಿಕವಾಗಿ ಪ್ರತ್ಯೇಕವಾದರೂ ಸಾಂಸ್ಕೃತಿಕವಾಗಿ ಇನ್ನೂ ಒಂದಾಗಿ ಉಳಿದುಕೊಂಡಿರುವುದು ವಿಶೇಷ. ದಕ್ಷಿಣ ಕೊಡಗಿನ ಬಹಳಷ್ಟು ಜನರು ಮಾತಾಡುವ ಭಾಷೆ ಮಲಯಾಳಂ ಆಗಿದೆ. ಹೀಗಾಗಿ ಕೊಡಗು ಭಾಷಿಕರಿಗೆ ಕನ್ನಡಕ್ಕಿಂತ ಮಲಯಾಳಂ ಭಾಷೆಯೇ ಭಾವನಾತ್ಮಕವಾಗಿ ಹೆಚ್ಚು ಹತ್ತಿರವಾಗುತ್ತದೆ. ಕೊಡಗನ್ನು ಆಳಿದ ಲಿಂಗಾಯಿತ ಅರಸರ ಕಾಲದಲ್ಲಿ ಕೊಡಗು ದೇಶ ಕಟ್ಟುವ ಪ್ರಕ್ರಿಯೆ ಆರಂಭವಾಯಿತು ಎನ್ನಬಹುದು. ಬಹುಮುಖ್ಯವಾಗಿ ದೊಡ್ಡವೀರಪ್ಪ ಅರಸನ ಕಾಲದಲ್ಲಿ(೧೬೫೭–೧೭೩೬) ೩೫ ನಾಡುಗಳನ್ನು ವಿಂಗಡಣೆ ಮಾಡಿ ಕೊಡಗಿಗೆ ಒಂದು ಸಮಗ್ರತೆ ತಂದು ಕೊಟ್ಟರು ಎಂಬುದನ್ನು ಕೊಡಗಿನ ಚರಿತ್ರೆಗೆ ಸಂಬಂಧಿಸಿದ ಬಹುತೇಕ ಆಕರಗಳು ತಿಳಿಸುತ್ತದೆ. ಹಾಗೆಯೇ ಮುಂದೆ ಬ್ರಿಟಿಷ್ ಆಡಳಿತಗಾರರು ಕೊಡಗನ್ನು ಆರು ತಾಲೂಕುಗಳಾಗಿ ವಿಭಾಗಿಸಿರುವುದನ್ನು ನೋಡುತ್ತೇವೆ. ಈ ಎರಡು ಪ್ರಕ್ರಿಯೆಗಳ ಬಗೆಗಿನ ವಿವರವಾದ ಚರ್ಚೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ. ಕೊಡಗನ್ನು ೧೯೪೭ರಿಂದ ೧೯೫೨ರವರಗೆ 'ಕಮಿಷನರೇಟ್ ಪ್ರಾವಿನ್ಸ್' ಎಂದು ಗುರುತಿಸಲಾಗಿತ್ತು. ೧೯೫೨ ರಿಂದ ೧೯೫೬ರವರೆಗೆ ಕೊಡಗನ್ನು 'ಸಿ' ರಾಜ್ಯವೆಂದು ಕರೆಯಲಾಗಿತ್ತು. ಸಿ.ಎಂ. ಪೂಣಚ್ಚನವರು ಮುಖ್ಯಮಂತ್ರಿಯಾಗಿದ್ದ ಈ ಅವಧಿಯಲ್ಲಿ ಕೊಡಗು ಪ್ರತ್ಯೇಕ ರಾಜ್ಯದ ಸ್ಥಾನವನ್ನು ಹೊಂದಿತ್ತು. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯದ ಉದಯದ ಹಿನ್ನೆಲೆಯಲ್ಲಿ ಕೊಡಗು ಕರ್ನಾಟಕದೊದಿಂಗೆ (ಅಂದಿನ ಮೈಸೂರು ರಾಜ್ಯ) ವಿಲೀನವಾಯಿತು.

## ೪.೧. ಕೊಡಗು ಸಮಗ್ರ ನಾಡಾಗಿ ರೂಪುಗೊಂಡ ಪ್ರಕ್ರಿಯೆ

ಲಿಂಗಾಯಿತ ಅರಸರು ಕೊಡಗನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವ ಮೊದಲು ಬಲಾಢ್ಯರಾಗಿದ್ದ ನಾಯಕರು ಕೊಡಗಿನ ಮೇಲೆ ತಮ್ಮ ರಾಜಕೀಯ ಪ್ರಭಾವವನ್ನು ಬೀರಿದ್ದರು. ನಂತರದಲ್ಲಿ

ಲಿಂಗಾಯಿತ ಅರಸರು ಅವರೆಲ್ಲರನ್ನು ದಮನಿಸಿ ಒಂದು ಕೇಂದ್ರಿಕೃತ ನಾಡನ್ನು ಅಥವಾ ಸಂಸ್ಥಾನವನ್ನು ಕಟ್ಟಿದರು. ಅನೇಕ ನಾಡುಗಳಿರುವ ಸಂಸ್ಥಾನ ಅದಾಗಿತ್ತು. ಈ ಪ್ರಕ್ರಿಯೆಯನ್ನು ಪ್ರಕಟಿತ ಮತ್ತು ಅಪ್ರಕಟಿತ ಆಕರಗಳ ಮೂಲಕ ಪ್ರಸ್ತುತ ಅಧ್ಯಾಯವು ಚರ್ಚಿಸಲು ಯತ್ನಿಸಿದೆ. ಈ ವ್ಯವಸ್ಥೆಯು ಕೊಡಗು ಬ್ರಿಟಿಷರ ವಶಕ್ಕೆ ಹೋಗುವವರೆಗೂ ಇತ್ತು. ನಂತರ ರಾಜ್ಯಾಧಿಕಾರವು ಬದಲಾವಣೆಯಾದರೂ ಮೂಲ ವ್ಯವಸ್ಥೆಯು ಹೆಚ್ಚು ಕಡಿಮೆ ಹಾಗೆಯೇ ಮುಂದುವರೆಯಿತು. ಈ ಹಿನ್ನಲೆಯಲ್ಲಿ ಕೊಡಗಿನ ಒಕ್ಕೂಟಕ್ಕೆ ಕಾರಣವಾದ ಎರಡು ಅಂಶಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

೧. ರಾಜಕೀಯ ಹಿನ್ನೆಲೆ

೨. ಕೊಡಗು ಭಾಷೆ ಮತ್ತು ನುಡಿ

ಮೇಲ್ಕಂಡ ಎರಡು ವಿಚಾರಗಳನ್ನು ಕೊಡಗಿನಲ್ಲಿ ನಾಡು–ನುಡಿಯ ಅಭಿವ್ಯಕ್ತತೆಗೆ ಪೂರಕವಾಗಿರುವ ಕೆಲವು ಅಂಶಗಳ ಸಹಾಯದೊಂದಿಗೆ ಚರ್ಚಿಸಲು ಯತ್ನಿಸಲಾಗಿದೆ. ಒಕ್ಕಗಳು, ಅಂಬಲ[೨], ಮಂದ್[೩], ತಕ್ಕ[೪], ಭೂಹಿಡುವಳಿ, ಭೌಗೋಳಿಕ ಪರಿಸರ, ಧಾರ್ಮಿಕ ಕ್ಷೇತ್ರಗಳು ಮತ್ತು ಆಚರಣೆಗಳು, ಏಕೀಕರಣಪೂರ್ವದ ಅನನ್ಯತೆ, ಚಳುವಳಿಗಳು, ಹಾಕಿ ಮತ್ತು ಕ್ರಿಕೆಟ್ ಹಬ್ಬಗಳು ಮೊದಲಾದವುಗಳು ಈ ಸಂದರ್ಭದಲ್ಲಿ ನಾಡು–ನುಡಿಯ ಸಂಬಂಧಗಳ ಸೇತುಗಳಂತ್ತಿದ್ದು, ಇವುಗಳನ್ನೂ ಕೂಡ ಅಧ್ಯಯನದ ಪರಿಮಿತಿಗೆ ಒಳಪಡಿಸಲಾಗದು.

### ೪.೧.೧. ರಾಜಕೀಯ ಹಿನ್ನೆಲೆ (ನಾಡು)

ವಸಾಹತು ಪೂರ್ವದಲ್ಲಿ ಕಾಲಘಟ್ಟದಲ್ಲಿ ಕೊಡಗು ಒಂದು ದೇಶವಾಗಿತ್ತು. ಅದಕ್ಕೂ ಪೂರ್ವದಲ್ಲಿ ಹತ್ತಾರು ನಾಯಕರ ಆಳ್ವಿಕೆಗೆ ಒಳಪಟ್ಟ ನಾಡುಗಳಾಗಿ ಕಾಣಿಸಿಕೊಂಡಿತ್ತು. ಲಿಂಗಾಯಿತ ಅರಸರ ಕಾಲಘಟ್ಟದಲ್ಲಿ ಮೊದಲೇ ಹೇಳಿದಂತೆ ನಾಯಕರ ಆಡಳಿತದಿಂದ ಮುಕ್ತಗೊಂಡ ದೇಶವಾಗಿತ್ತು. ಈ ದೇಶಕ್ಕೆ ೧೨ ಕೊಂಬು[೫]ಗಳು, ೩೫ ನಾಡುಗಳು, ೮ ದೇಶತಕ್ಕರು, ೪ ನ್ಯಾಯ ತೀರ್ಮಾನ ಮಾಡುವ ಪಟ್ಟಿಗಳು, ಹತ್ತಾರು ಮಂದ್‌ಗಳು, ನೂರಾರು ಅಂಬಲಗಳು ಮತ್ತು ಸಾವಿರಾರು ಒಕ್ಕಗಳನ್ನು ಒಳಗೊಂಡ ಸಂಸ್ಥಾನವಾಗಿತ್ತು. ರಾಜಕೀಯ ವಿದ್ಯಾಮಾನಗಳ ಫಲವಾಗಿ ೧೮೩೪ರಲ್ಲಿ ಕೊಡಗು ಬ್ರಿಟಿಷ್ ಆಡಳಿತಕ್ಕೆ ಒಳಪಟ್ಟಿತು. ಸುಮಾರು ಒಂದೂವರೆ ಶತಮಾನಗಳ ಕಾಲ ಕೊಡಗನ್ನು ಆಳಿದ ಬ್ರಿಟಿಷರು ೧೯೪೭ರಲ್ಲಿ ಕೊಡಗನ್ನು ಪ್ರಜಾಪ್ರಭುತ್ವದ ಪ್ರಕ್ರಿಯೆಗೆ ಒಳಗೊಳಿಸಲಾಯಿತು. ಸ್ವಾತಂತ್ರಕ್ಕೂ ಮೊದಲು ಕೆಲವು ವರ್ಷಗಳಲ್ಲಿ 'ಕೊಡಗು ಚೀಫ್ ಕಮಿಷನರ್ಸ್ ಪ್ರಾವಿನ್ಸ್' ಎಂದು ಗುರುತಿಸಲ್ಪಟ್ಟಿತ್ತು. ೧೯೫೨ರಲ್ಲಿ ಕೊಡಗು 'ಸಿ' ದರ್ಜೆಯ ರಾಜ್ಯವಾಗಿ ಅಸ್ತಿತ್ವ ಪಡೆದುಕೊಂಡು ೧೯೫೬ರವರೆಗೆ ತನ್ನದೇ ಆದ ವಿಧಾನಸಭೆ ಮತ್ತು ವಿಧಾನ ಪರಿಷತ್ತುಗಳನ್ನೊಳಗೊಂಡ ಸರಕಾರವನ್ನು ರೂಪಿಸಿಕೊಂಡಿತು. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಕೊಡಗು ಕರ್ನಾಟಕದ ಒಂದು ಜಿಲ್ಲೆಯಾಗಿ

ವಿಲೀನಗೊಂಡಿತು. ಈ ರೀತಿಯಲ್ಲಿ ಕೊಡಗು ಬೇರೆ ಬೇರೆ ಚಾರಿತ್ರಿಕ ಕಾಲಘಟ್ಟದಲ್ಲಿ ಬೇರೆ ಬೇರೆ ರಾಜಕೀಯ ವಿದ್ಯಮಾನಗಳಿಗೆ ಒಳಗಾಗಿರುವುದನ್ನು ವಿಸ್ತೃತವಾಗಿ ಈ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ.

**ಲಿಂಗಾಯತ ರಾಜರ ಆಳ್ವಿಕೆಗೆ ಮುನ್ನ ಕೊಡಗು ನಾಡನ್ನು ಆಳಿದ ನಾಯಕರು**

ಕೊಡಗಿನ ವಿವಿಧ ಭಾಗಗಳಲ್ಲಿ ಆಳುತ್ತಿದ್ದ ನಾಯಕರನ್ನು ಕುರಿತು ಕೊಡಗಿನ ಜನಪದ ಹಾಡುಗಳು, ಐತಿಹ್ಯಗಳು ಮಾಹಿತಿಯನ್ನು ಒದಗಿಸುವುದರ ಜೊತೆಗೆ ಡಿ.ಎನ್. ಕೃಷ್ಣಯ್ಯ ಅವರ "ಕೊಡಗಿನ ಇತಿಹಾಸ" ಪರದಂಡ ಚಂಗಪ್ಪನವರ "ಕೊಡಗಿನ ಮೂಲ ನಿವಾಸಿಯರ ಪುರಾಣ ಸಂಸ್ಕೃತಿಯ ಮತ್ತು ಊರೂರು ದೇವಾಲಯಗಳ ಪರಿಚಯ" ಮೊದಲಾದ ಪುಸ್ತಕಗಳೂ ಮಾಹಿತಿಗಳನ್ನು ಒದಗಿಸುತ್ತವೆ. ಇವುಗಳ ಆಧಾರದ ಮೇಲೆ ಕೊಡಗಿನ ವಿವಿಧ ಭಾಗಗಳಲ್ಲಿ ಆಳುತ್ತಿದ್ದ ನಾಯಕರ ಪಟ್ಟಿಯನ್ನು ಈ ಕೆಳಗಿನಂತೆ ಗುರುತಿಸಬಹುದು.

| ಕ್ರಸಂ. | ನಾಯಕನ ಹೆಸರು | ಊರು | ನಾಡು |
|---|---|---|---|
| ೧. | ಕೊಳ್ಳೆಕೊಂಗಿನಾಯಕ | ಕೈಕಾಡು/ಬಾವಲಿ | ಕಡಿಯತ್ತುನಾಡು |
| ೨. | ಹೊಂಬಾಳೆ ನಾಯಕ | ಕಾಂತೂರು | ಮೂರ್ನಾಡು |
| ೩. | ಮೇಲ್ಪುಂಡಿಕುಂಞನಾಯಕ (ಕರ್ಣಂಬಾಹು) | ಭಾಗಮಂಡಲ | ತಾವುನಾಡು |
| ೪. | ಕಚ್ಚುಟ್ಟಿಮನೆ ನಾಯಕ | ಕೆದಮುಳ್ಳೂರು | ಬೆಪ್ಪುನಾಡು |
| ೫. | ಪಾಲೇಯಂಗಡ ನಾಯಕ | ಹರಿಹರ | ಹರಿಹರನಾಡು |
| ೬. | ಕೋಟೆ ಕೃಷ್ಣಪ್ಪನಾಯಕ | ಕೊಟ್ಟೂರು | ಬೇಂಗುನಾಡು |
| ೭. | ಕಾಡ್ ಮರಿಮಲ್ಲಪ್ಪ ನಾಯಕ | ಬಾಳೆಲೆ | ಆರಿಕೇರಿನಾಡು |
| ೮. | ಕೆಂಜಡ ಮಕ್ಕ (ಧಾರ ಮಹೇಶ್ವರ್) | ಬಿರುನಾಣಿ/ಪರಕಟಗೇರಿ | ಪೊನಾಡ್ (ಪೊಕಳ)ನಾಡು |
| ೯. | ಪಾಲೇಯಂಡ ನಾಯಕ | ಪೆರಾಲು | ಐಯ್ಯತ್‌ನಾಡು |
| ೧೦. | ಗುಂಡಪ್ಪ ನಾಯಕ | ಮುಳ್ಳೂರು | ಮುಳ್ಳೂರುನಾಡು |
| ೧೧. | ನಂಜರಾಜನಾಯಕ | ನಂಜರಾಯಪಟ್ಟಣ | ಚೆಂಗನಾಡ್ |
| ೧೨. | ಕೆಂಗಳ ನಾಯಕ | ಕಕ್ಕಬ್ಬೆ | ಪಾಡಿನಾಲ್ಕುನಾಡು |
| ೧೩. | ಸೋಮಶೇಖರ ನಾಯಕ | ಪಾಲೇರಿ | ಹಾಲೇರಿನಾಡು |

| | | | |
|---|---|---|---|
| ೧೪. | ಚೆಂಬುವಾ ಚರ್ಮಣ ನಾಯಕ | | ಕೊಯ್ನಾಡು |
| ೧೫. | ಗೋಕುಲದೇವ ಅರಸ | ಉಲುಗುಲಿ ಗ್ರಾಮ | ಸುಂಟಿಕೊಪ್ಪ |
| ೧೬. | ಮುನಿರಾಧಿತ್ಯ | ಹೆರೂರು | ಮೂಡ್‌ಗೇರಿನಾಡು |
| ೧೭. | ಚೆಟ್ಟಿಯಪ್ಪ ನಾಯಕ ಕಟ್ಟೆಮನೆ | ಚಿಕ್ಕಮುಂಡೂರು | ಅಂಜಿಗೇರಿನಾಡು |
| ೧೮. | ಅಚ್ಚುನಾಯಕ (ಚೆಟ್ಟಿಯಪ್ಪ ನಾಯಕನ ಮಗ) | ಚಿಕ್ಕಮಂಡೂರು | ಅಂಜಿಗೇರಿನಾಡು |
| ೧೯. | ಮುಕ್ಕಾಟಿ ಶಂಭವಯ್ಯ ನಾಯಕ | ಮತ್ತೂರು | ಕಿರುನಾಲ್ಕುನಾಡು/ ಎಡೆನಾಲ್ಕುನಾಡು |
| ೨೦. | ಕೈಬಿಲಿ ಬಿದ್ದಯ್ಯ ನಾಯಕ | ತಾವಳಗೇರಿ | ತಾವಳಗೇರಿನಾಡು |
| ೨೧. | ಮಾಚಂಗಳ ದೇವಯ್ಯ ನಾಯಕ | ಕೊಟ್ಟಗೇರಿ | ಪತ್ತ್‌ಗಟ್ಟ್‌ನಾಡು |
| ೨೨. | ಚಿಂದ್ರಿಮಾಪನಾಯಕ | ಮಾಯಮುಡಿ | ಕೆಂಗಳತ್ತ್‌ನಾಡು |
| ೨೩. | ಮಾಪಂಗಡ ನಾಯಕ | ಕುಮಟೂರು | ತೊಡನಾಡು |
| ೨೪. | ಪಾಲೇಯಡ ಪಾಳೇಗಾರ | ಪರಕಟಗೇರಿ | ಪಾಟೇರಿನಾಡು |
| ೨೫. | ನಂಬಿಯಾರ್ ಅರಸು | ಮಂಚಳ್ಳಿ | ಕುರ್ಚಿವಯನಾಡು |
| ೨೬. | ಅಗ್ಗುಚ್ಚಿರ ಅಮ್ಮನಾಯಕ | ಕಾವಾಡಿ | ಅಮ್ಮತ್ತಿನಾಡು |
| ೨೭. | ಉತ್ತನಾಯಕನ | ಅರಮೇರಿ | ಆನೆಬೆಪ್ಪುನಾಡು |
| ೨೮ | ಅಯ್ಯಕೊಂಗಿನಾಯಕ | ಮಡಿಕೇರಿ | ಎಡೆನಾಲ್ಕುನಾಡು |
| ೨೯. | ಆಂಡಮಾಡ ನಾಯಕ | ತಾವಳಗೇರಿ | ಶ್ರೀಮಂಗಲನಾಡು |
| ೩೦. | ಪುಗ್ಗೆರೆ ನಾಯಕ | ದೇವಣಗೇರಿ | ದೇವಣಗೇರಿ |
| ೩೧. | ಮಾಚಂಗಡ ನಾಯಕ | | ಬೊಟ್ಯತ್‌ನಾಡು |
| ೩೨. | ಹೊಂಬಾಳೆನಾಯಕ | ನೋಜೆಕಲ್ | ಸಂಪಾಜೆ |
| ೩೩. | ಬೇಲೂರು ನಾಯಕರು | ಐಗೂರು | ಬಲಂಪ್ರಾಂತ್ಯ |
| ೩೪. | ಬೇಲೂರು ನಾಯಕರು | ಮಾಲಂಬಿ | ನಿಡತ, ಬಿಲಹ, ಕೊಡಲಿ ಹೋಬಳಿ |
| ೩೫. | ಗೋಂಕ್‌ರೆಡ್ಡಿ ನಾಯಕ | ಮುಳ್ಳೂರು | ಮುಳ್ಳುನಾಡು |
| ೩೬. | ಚೆನ್ನಯ್ಯ ನಾಯಕ | | ಸಿದ್ದಾಪುರನಾಡು |

(ಚಂಗಪ್ಪ, ೨೦೦೩:೨೪೫-೨೪೭) (ಮುತ್ತಣ್ಣ, ೧೯೫೩:೨೬), (ಕೃಷ್ಣಯ್ಯ, ೧೯೭೪:೬೮)

ಹೀಗೆ ೧೬ನೇ ಶತಮಾನಕ್ಕಿಂತ ಮೊದಲು ಹಲವಾರು ನಾಯಕರ ಅಧೀನದಲ್ಲಿ ಕೊಡಗು ಇತ್ತು. ಆ ಸಂದರ್ಭದಲ್ಲಿ ನಾಯಕರು ತಮ್ಮ ತಮ್ಮ ಸಾಮರ್ಥ್ಯಕ್ಕನುಗುಣವಾಗಿ ೩–೪ ಇಲ್ಲವೇ ಅದಕ್ಕಿಂತಲೂ ಹೆಚ್ಚು ಊರುಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಆಳುತ್ತಿದ್ದರು. ಕೊಡಗಿನಲ್ಲಿ ನಾಯಕರು ಅಧಿಕಸಂಖ್ಯೆಯಲ್ಲಿದ್ದುದರಿಂದ ಹೆಚ್ಚು ಅಧಿಕಾರಕ್ಕಾಗಿ ಸಹಜವಾಗಿಯೇ ಅವರ ನಡುವೆ ಸಂಘರ್ಷಗಳು ಉಂಟಾಗುತ್ತಿದ್ದುದು ಸಾಮಾನ್ಯವಾಗಿತ್ತು. ನಾಯಕನ ಆಳ್ವಿಕೆಯಡಿಯಲ್ಲಿಯ ಊರುಗಳು ಆಯಾಯ ನಾಯಕನ ಪರವಾಗಿ ಇರುತ್ತಿದ್ದುದು ಸಹಜವಾಗಿತ್ತು. ಈ ನಾಯಕರ ವಶದಲ್ಲಿದ್ದ ನಾಡುಗಳ ಜನರೂ ಕೂಡ ಬೇರೊಂದು ನಾಡಿನ ಜನರೊಡನೆ ವೈಷಮ್ಯದಿಂದ ಇರುತ್ತಿದ್ದರು. ಇಂತಹ ಸಂದರ್ಭದಲ್ಲಿ ಯೌವನಾವಸ್ಥೆಯಲ್ಲಿಯೇ ಯುದ್ಧ, ಸಂಘರ್ಷ ಮೊದಲಾದ ಕಾರಣಗಳಿಂದ ಸಾಯುತ್ತಿದ್ದ ಯುವಕರಿಗೆ ಅರೆಬಾಚೆಕಾರರು ಎನ್ನುತ್ತಿದ್ದರು(ಚಿಣ್ಣಪ್ಪ, ೧೯೨೪). ಈ ವೈಷಮ್ಯ ವೈವಾಹಿಕ ಸಂಬಂಧಗಳಿಂದಲೂ ದೂರವಿರುವಂತೆ ಮಾಡಿತ್ತು. ಇದು ನಾಡಿನ ನಾಯಕರ ಮೇಲೆ ಜನ ಹೊಂದಿದ್ದ ಗೌರವಾದರಗಳನ್ನು ತಿಳಿಸುತ್ತದೆ. ಆದರೂ ನಾಡು–ನಾಡುಗಳ ನಡುವೆ ಮಾನವೀಯ ಸಂಬಂಧಗಳು ಕಡಿದುಹೋಗಿದ್ದವು.

### ಕೊಡಗಿನಲ್ಲಿ ದೇಶ ಕಟ್ಟಿದ ಪ್ರಕ್ರಿಯೆ

೧೬ನೇ ಶತಮಾನದ ನಂತರದ ಕಾಲಾವಧಿಯಲ್ಲಿ ಕೊಡಗು ರಾಜರ ಆಡಳಿತದಲ್ಲಿ ಚಾರಿತ್ರಿಕ ಅಂಶಗಳು ದಾಖಲಾಗಿರುವುದರಿಂದ ಚರಿತ್ರೆ ನಿರ್ಮಾಣಕ್ಕೆ ಬೇಕಾದ ಪೂರಕ ಅಂಶಗಳು ದೊರೆಯುತ್ತವೆ. ಆದರೆ ಅದಕ್ಕಿಂತ ಮುಂಚಿನ ಕಾಲಘಟ್ಟದ ಬಗೆಗೆ ಕೆಲವು ಜಾನಪದ ಹಾಡುಗಳಲ್ಲಿ ಅದರ ಜಾಡು ಕಾಣಿಸುವುದು ಬಿಟ್ಟರೆ ಉಳಿದಂತೆ ಇತ್ತೀಚೆಗೆ ಕಾಣಬರುತ್ತಿರುವ ಬರಹಗಳಲ್ಲಿ ಹೆಚ್ಚಾಗಿ ಊಹಾಪೋಹಗಳೇ ತುಂಬಿಕೊಂಡಿವೆ.

ಕೊಡಗಿನ ದೇಶ ಕಟ್ಟುವ ಸಂದರ್ಭದಲ್ಲಿ ಜನಾಂಗದ ಮೂಲ ಹುಡುಕುವ ಪ್ರಯತ್ನವನ್ನು ಮಾಡಲಾಗಿದೆ. ಉದಾಹರಣೆಗೆ ಪೊಂಜಾಂಡ ಅಪ್ಪಯ್ಯ ಎನ್ನುವ ಕೊಡಗಿನ ಬರಹಗಾರರೊಬ್ಬರ ಪ್ರಕಾರ ಕೊಡವರ ಮೂಲವನ್ನು ಮಧ್ಯಪೂರ್ವಾತ್ಯ ದೇಶಗಳ(ಇರಾನ್, ಇರಾಕ್, ಕುರ್ದ್‌ಪ್ರದೇಶಗಳು) ಕಡೆಯಿಂದ ಬಂದ ಸೈನಿಕರು ಅಲೆಗ್ಸಾಂಡರ್‌ನ ಸೈನ್ಯದ ಭಾಗವಾಗಿದ್ದರೆಂದೂ, ಅಲೆಗ್ಸಾಂಡರ್ ಅನಿವಾರ್ಯವಾಗಿ ತನ್ನ ನಾಡಿಗೆ ಹಿಂತಿರುಗಿದ ಸಂದರ್ಭದಲ್ಲಿ ಅವನ ಸೈನಿಕರ ಅನೇಕ ತುಕಡಿಗಳು ಇಲ್ಲೇ ಉಳಿದುಹೋದವು ಎಂಬುದಾಗಿಯೂ, ಅವುಗಳಲ್ಲಿ ಸುಮಾರು ೧೨ ತುಕಡಿಗಳು (ಒಂದೊಂದು ತುಕಡಿಯಲ್ಲಿ ೧೦೦ ಸೈನಿಕರು) ಮಲಬಾರನ್ನು ದಾಟಿ ಕೊಡಗಿನ ಪ್ರದೇಶಕ್ಕೆ ನುಗ್ಗಿದರು ಎನ್ನುತ್ತಾರೆ. ಹೀಗೆ ನುಗ್ಗಿದ ೧೨ ತುಕಡಿಗಳ ಸೈನಿಕರು ಕೊಡಗಿನಲ್ಲಿ ನೆಲೆನಿಂತುದಾಗಿಯೂ ಈ ೧೨೦೦ ಸೈನಿಕರೇ ಈಗಿನ ಸರಿಸುಮಾರು ೧೨೦೦ ಕೊಡವ ಮನೆತನಗಳ ಮೂಲಪುರುಷರೆಂಬುದಾಗಿಯೂ ವಾದವನ್ನಿಡುತ್ತಾರೆ. ಮುಂದುವರಿದು ಈ ಮನೆತನಗಳು ಮುಂದೆ ಹೇಗೆ ನಾಡು ಕಟ್ಟುವಲ್ಲಿ ಆಧಾರಸ್ತಂಭಗಳಾದವು ಎಂಬುದನ್ನು ಅಪ್ಪಯ್ಯನವರು ಹೇಳುತ್ತಾ ಕೊಡಗಿನ ೧೨ ಕೊಂಬುಗಳ ಕಲ್ಪನೆ ಪ್ರಾಯೋಗಿಕ ಅಲ್ಲವೆಂದೂ ಕಹಳೆ ಅಥವಾ ಕೊಂಬಿನ ಧ್ವನಿ ಅಷ್ಟು ದೂರಕ್ಕೆ ತಲುಪುವ ಸಾಧ್ಯತೆಗಳಿಲ್ಲವೆಂದೂ ವಾದಿಸುತ್ತಾರೆ. ಬದಲಾಗಿ ಅವರ ಪ್ರಕಾರ ಅದು ಕೊಂಬು ಅಲ್ಲ 'ಕಂಬ್' ಎನ್ನುತ್ತಾರೆ. 'ಕಂಬ್' ಎಂದರೆ ಗ್ರೀಕ್ ಭಾಷೆಯಲ್ಲಿ 'Army Column'

ಅಥವಾ ತುಕಡಿಗಳು ಎಂದು ಅರ್ಥ ಎನ್ನುತ್ತಾರೆ. ಹಾಗಾಗಿ ಈ ಅಲೆಗ್ಸಾಂಡರನ ೧೨೦೦ ಸೈನಿಕರನ್ನೊಳಗೊಂಡ ೧೨ ತುಕಡಿಗಳೇ ೧೨ ಕಂಬ್‌ಗಳೆಂದೂ ಅವು ಕೊಂಬುಗಳಾದವೆಂದೂ, ಈ ೧೨ ಕಂಬ್‌ಗಳ ಅಥವಾ ಕೊಂಬುಗಳ ಆಧಾರದ ಮೇಲೆ ೩೫ ನಾಡುಗಳ ಪ್ರತಿಷ್ಠಾಪನೆ ಆಯಿತು ಎಂದು ಅಪ್ಪಯ್ಯನವರು ಅಭಿಪ್ರಾಯ ಪಡುತ್ತಾರೆ(ಅಪ್ಪಯ್ಯ, ೨೦೧೨: ೧೪೫). ಆದರೆ ಅವರು ಈ ವಾದಕ್ಕೆ ಬೇಕಾದ ಸೂಕ್ತವಾದ ಆಕರಗಳನ್ನು ಒದಗಿಸದಿರುವುದನ್ನು ಗಮನಿಸಬಹುದು. ಕೊಡಗಿನ ಮತ್ತೊಂದು ಬರಹಗಾರರಾದ ಕಾರ್ಯಪ್ಪ ಮತ್ತು ಪೊನ್ನಮ್ಮ ಕಾರ್ಯಪ್ಪ ಅವರು ಕೊಡವರನ್ನು ಇಂಡೋಸಿಥಿಯನ್ ಮೂಲದವರು ಎಂದು ಅಭಿಪ್ರಾಯ ಪಡುತ್ತಾರೆ(ಕಾರ್ಯಪ್ಪ, ಪೊನ್ನಮ್ಮ ಕಾರ್ಯಪ್ಪ ೧೯೮೧).

* * *

ವಿಜಯನಗರ ಪತನದ ನಂತರದಲ್ಲಿ ಗಂಗರ ಕಾಲಘಟ್ಟದ ನಂತರದಲ್ಲಿ ಕೊಂಗಾಳ್ವರು ಮತ್ತು ಚೆಂಗಾಳ್ವರು ಎಂಬ ಎರಡು ಮನೆತನಗಳು ಕೊಡಗಿನ ಉತ್ತರ ಭಾಗದ ನಂಜರಾಯ ಪಟ್ಟಣ ಮೊದಲಾದ ಪ್ರದೇಶಗಳನ್ನು ಆಳಿದರು. ಕೊಂಗಾಳ್ವರು ಮತ್ತು ಚೆಂಗಾಳ್ವರ ಆಡಳಿತ ಕೊನೆಗೊಂಡ ನಂತರ ಅನೇಕ ನಾಯಕರು ಒಂದೊಂದು ಪ್ರದೇಶಗಳ ಆಳ್ವಿಕೆ ಮಾಡಲಾರಂಭಿಸಿದರು. ಬಹುಶಃ ಒಬ್ಬೊಬ್ಬರು ಒಂದೊಂದು ನಾಡುಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ತಮ್ಮ ಹತೋಟಿಯಲ್ಲಿದ್ದ ನಾಡುಗಳನ್ನು ಉಳಿಸಿಕೊಳ್ಳಲು ಸಾಕಷ್ಟು ಪ್ರಯತ್ನಗಳನ್ನೂ ಮಾಡುತ್ತಿದ್ದರು. ತಮ್ಮ ಕೋಟೆಗಳ ಭದ್ರತೆ, ಆರ್ಥಿಕ ಸ್ಥಿತಿಯ ಭದ್ರತೆ, ಸಾಮಾನ್ಯ ಜನರ ಕ್ಷೇಮಕ್ಕೆ ಪ್ರಯತ್ನಿಸಿದ ಕೆಲವು ನಾಯಕರುಗಳನ್ನು ಕೊಡಗಿನ ಇತಿಹಾಸ ತಿಳಿಸುತ್ತದೆ.

ಬಹುಶಃ ಈ ಕೊಡಗಿನ ಅರಸರು ಆಡಳಿತಕ್ಕೆ ಬರುವ ಸಂದರ್ಭದಲ್ಲಿ ಸಾಮುದಾಯಿಕ ಆಳ್ವಿಕೆ ಇದ್ದಂತೆ ತೋರುತ್ತದೆ. ಆದರೆ ಕೊಡಗಿನ ಅರಸರು ರಾಜ್ಯಸ್ಥಾಪನೆ ಮಾಡಿದ ಸಂದರ್ಭದಲ್ಲಿ ನಾಯಕರು ಪರಸ್ಪರ ಕಚ್ಚಾಡುತ್ತಿದ್ದ ಪರಿಸ್ಥಿತಿಯ ಪ್ರಯೋಜನ ಪಡೆದುಕೊಂಡ, ಲಿಂಗಾಯತ ಅರಸರು ಎಲ್ಲ ನಾಯಕರ ಆಡಳಿತದ ಮೇಲೆ ಆಧಿಪತ್ಯ ಸಾಧಿಸಿ ಕೊಡಗಿನಾದ್ಯಂತ ಸಾರ್ವಭೌಮತ್ವ ಸ್ಥಾಪಿಸಿದರು.

ಕೊಡಗಿನ ಅರಸರು ಹೀಗೆ ಸಾರ್ವಭೌಮತ್ವ ಸ್ಥಾಪಿಸಿ ಆಡಳಿತಸೂತ್ರವನ್ನು ಹಿಡಿದಾಗ ಶತ್ರುಗಳನ್ನು ಸದೆಬಡಿಯುವುದು ಮಾತ್ರವಲ್ಲ. ಕೊಡಗಿನ ಜನಮನವನ್ನು ಗೆಲ್ಲುವುದು ಕೂಡ ಅವರಿಗೆ ಮುಖ್ಯವಾಗಿತ್ತು. ಹಾಗಾಗಿ ಆಡಳಿತದ ಅನುಕೂಲಕ್ಕಾಗಿ, ಶಾಂತಿಪರಿಪಾಲನೆಗಾಗಿ, ತೆರಿಗೆ ವಸೂಲಾತಿಗಾಗಿ ಹಾಗೂ ರಾಜ್ಯದ ಭದ್ರತೆಗಾಗಿ ನಾಡನ್ನು ೧೨ ಕೊಂಬುಗಳಾಗಿಯೂ ೩೫ ನಾಡುಗಳಾಗಿಯೂ ವಿಂಗಡಿಸಿದರು ಎನ್ನುವ ವಿಚಾರ ಇತಿಹಾಸದ ಪುಟಗಳಿಂದಲೂ,ಜಾನಪದ ಹಾಡುಗಳಿಂದಲೂ ತಿಳಿದುಬರುತ್ತದೆ. ಜನಪದ ಹಾಡುಗಳಲ್ಲಿ ಪ್ರಮುಖವಾದ 'ದೇಶಕಟ್ಟ್ ಪಾಟ್'ನ್ನು ಈ ಕೆಳಗೆ ನೋಡಬಹುದು. 'ದೇಶಕಟ್ಟ್ ಪಾಟ್'ನ್ನು ಮೊದಲು ಕೃತಿಮೂಲಕ ಬೆಳಕಿಗೆ ತಂದವರು ನಡಿಕೇರಿಯಂಡ ಚಿಣ್ಣಪ್ಪನವರು. ನಂತರದಲ್ಲಿ ಡಿ.ಎನ್. ಕೃಷ್ಣಯ್ಯ ಮತ್ತು ಪರದಂಡ ಚಂಗಪ್ಪನವರ ಕೃತಿಗಳಲ್ಲಿಯೂ ದೇಶಕಟ್ಟ್ ಪಾಟ್‌ಗಳ ಆವೃತ್ತಿಗಳು ಪ್ರಕಟವಾಗಿರುವುದನ್ನು ಕಾಣಬಹುದು.

## ದೇಶಕೆಟ್ಟ್ ಪಾಟ್

ಬಾಳೊ ಬಾಳೊ ನಂಗಡ
ದೇವ ಬಾಳೊ ಮಾದೇವ;
ಪಟ್ಟ ಬಾಳೊ ಸೂರಿಯ
ಕೂಡ ಬಾಳೊ ಚಣ್ಣೂರ;
ಭೂಮಿ ಬಾಳೊ ಜಬ್ಬೂಮಿ;
ಜಬ್ಬಾರಂಡ ಭೂಮಿಲ್
ಈ ಭೂಮಿರ ಮೀದಲ್
ಏದ್ ದೇಶ ಚೊಲ್ಲುಳ್ಳ?
ಪಾಡಿ ನೋಟಿ ಕಾಂಬಕ್ಕ
ಪೊಮ್ಮಾಲೆ ಕೊಡವುನ
ಎನ್ನನೆ ಪವುತದೊ?
ಅಲ್ಲತೊಂದು ಅಲ್ಲಲ
ಪನ್ನೆರಂಡ್ ಕೊಂಬಾಯಿ
ಈ ದೇಶ ಪವುತತ್
ಎನ್ನತಾಂಡ ಕೊಂಬಾಪ?
ಕೇಳಿ ಕೇಳಿ ಬೆಂದುವೆ
ಕೈ ಬೈಯಿರಿ ಕೊಂಬಲ್ಲ;
ಬೊವ್ವಾಯಿರಿ ಕೊಂಬಲ್ಲ;
ಪಾಪಲಚಿ ಕೊಂಬಲ್ಲ
ಚಿತ್ತಾಲ್‌ಡ ಕೊಂಬಲ್ಲ;
ಕೆಂಗಡಮ ಕೊಂಬಲ್ಲ;
ಪೆಗ್ಗಾಟಿರ ಕೊಂಬಲ್ಲ;
ಬೊಳ್ಳಾನೆರ ಕೊಂಬಲ್ಲ;
ಇಂದ್ ಬಾವೊಡೆವೋಂಡ
ಪಲ್ಲಕಿರ ಕೊಂಬಲ್ಲ;
ಪಾಲೇರಿ ಒಡೆವೋಂಡ
ಕಚ್ಚಿಕೊಂಬ್ ನಲ್ಲಾಲ್
ಕೊಡುಮಲೆಕೊರ್‌ತೊರ
ಜಾಮ ಕೊಂಬುರ್‌ಪ್‌ನ
ಜಾಮ ಕೊಂಬುರ್‌ಪಣೆ

ಪನ್ನೆರಂಡ್ ಕೊಂಬಾನ
ಎನ್ನನೆಂದರಿವಿರ?
ಪಾಲೇರಿ ಒಡೆವೋಂಡ
ಪೊಂದೇವಡಿ ಪಟ್ಟಿಲ್
ಜಾಮ ಕೊಂಬುರ್‌ಪುಚಿ;
ಆಂಡ ಧನಿ ನಿಂದಲ್ಲಿ
ಕೊಂಬ್‌ಡೆಣ್ಣ ಒಂದಾಚಿ;
ಅಲ್ಲಿ ಪೋಯಿ ನಿಂದಿತ್
ಜಾಮ ಕೊಂಬುರ್‌ಪ್‌ಚಿ;
ಆಂಡ ಧನಿ ನಿಂದಲ್ಲಿ
ಕೊಂಬ್‌ಡೆಣ್ಣ ದಂಡಾಚಿ;
ಇನ್ನನಾಚಿ ಕೊಂಬೆಲ್ಲ.
ಪೊಮ್ಮಾಲೆ ಕೊಡವ್‌ಲ್
ಪನ್ನೆರಂಡ್ ಕೊಂಬಾಚಿ.
ಪನ್ನೆರಂಡ್ ಕೊಂಬಲ್
ಎಚ್ಚಕುಳ್ಳ ನಾಡಾಪ?
ಅಲ್ಲತೊಂಡು ಅಲ್ಲಲ
ನುಪ್ಪತಂಜಿ ನಾಡಾಪ.
ಎನ್ನನೆಂದರಿವಿರ?
ಮೂಲ ಕನ್ನಿ ಕಾವೇರಿ
ಕಾವೇರ್‍ಯಮ್ಮೆ ತಾಯಿರ
ನೀಲಕೊಡಿ ತೀರ್‌ತ
ಮಮ್ಮಾಯತೆ ಪುಟ್ಟಿತ್
ಚಾಯಿ ಬುದ್ದಿತೊಕ್ಕಿತ್
ಕೊಡವುನ ಪವುತತ್–
ಚೋರಂಗೆ ಮುರಿಚಿತ್
ಕೀತ್ ದಂಡ್ ಬೆಚ್ಚೋಲೆ:
ಬೊಳ್ಳ ತೆಂಗೆ ಪೊಜ್ಜಿತ್
ಭಾಗ ದಂಡ್ ಬೆಚ್ಚೋಲೆ
ಸೀಮೆನ ಪವುತತ್.

ಈನಂಗುಂಡ್ ಪೋರಾಂದ್
ಕಾವೇರಿ ಕೊಂಡಾಕರೆ
ಕಾರೋಟೆ ನೆಡಿ ಪೋಲೆ
ಗುದ್ದ್‌ನ ಕಲ ಪೋಲೆ
ಗುದ್ದ ಗುದ್ದ ನಾಡೋನ್
ಕೆಂಗಳಮೆಕ್ಗ್ಗಟ್ಟ್
ಕ್ಗ್ಗಟ್ಟ್ ಪದಿನಾಲ್.
ಕಾವೇರಿ ಕೊಂಡೀಕರೆ
ಬೊಳ್ಳೋಟೆ ನೆಡಿ ಪೋಲೆ
ಪಾಬೊಳಿಯ ಮೇಂದಲೆ.
ದಂಡ್ ನಾಡೂ ಕೂಡಣೆ
ನಾಡಿರುವತೆಟ್ಟಾನ.
ನುಪ್ಪತಂಜಿ ನಾಡ್‌ಕ್
ನಾಡ್ ಪೋರಂದೆಣ್ಣಿತ್
ಪಟ್ಟಿ ಪೊಳೆಕಾಬರ
ಎಣ್ಣೆ ಪೊಳೆಕೀಬರ
ಏಳ್ ನಾಡ್ ಸೂರ್ಲಬಿ;
ಮೂಂದ್ ನಾಡೂ ಕೂಡಣೆ
ನುಪ್ಪತಂಜಿ ನಾಡಾನ.
ನುಪ್ಪತಂಜಿ ನಾಡ್‌ಕ್
ಸೀಮೆ ತಕ್ಕಂಗೆಚ್ಚಕ್?
ತಕ್ಕಂಡ ಪೆದಲೆನ್ನ?
ಕೇಳಿ, ಕೇಳಿ ಬೆಂದುವೆ,
ನೇರ ಬಂದುದಿಪಲ್ಲಿ
ತಾಳೆ ಪೂವ್ ತಾಳೇರಿ
ಆ ನಾಡ್ ನಡುವುಲ್
ಕಾಜುಮಾಲೆ ಕಳ್ಳೆಯು,
ಬೀರಪಟ್ಟ ಬೊಳ್ಳೆಯು
ಜೋಡೆರಂಡ್ ತಕ್ಕಂಗ;
ನೇರ ಮಜ್ಜಣಾಪಲ್ಲಿ
ಆನೆ ಬೆಪ್ಪ್ ನಾಡ್‌ಲ್
ಮಾತನು ಬುಡುವನು
ಜೋಡೆರಂಡ್ ತಕ್ಕಂಗ
ನೇರೊಯಿಪತಾಪಲ್ಲಿ

ನಾಲಾಯಿರ ನಾಡ್‌ಲ್
ಜೊಡೆರಂಡ್ ತಕ್ಕಂಗ
ಪಾಂಡಿಯು ಪರದನು;
ನೇರ ಪೋಯಿ ತಾವಲ್ಲಿ
ಉದ್ದ ಕೊಡೆ ತಾವುಲ್
ಪೋರೆಯು, ಪರುವನು
ಜೊಡೆರಂಡ್ ತಕ್ಕಂಗ
ಪಾಂಡಿಯು ಪರದನು;
ನೇರ ಪೋಯಿ ತಾವಲ್ಲಿ
ಉದ್ದ ಕೊಡೆ ತಾವುಲ್
ಪೋರೆಯು, ಪರುವನು
ಜೊಡೆರಂಡ್ ತಕ್ಕಂಗ
ಸೀಮೆ ತಕ್ಕಂಗೆಟ್ಟಾನ.
ನುಪ್ಪತಂಜಿ ನಾಡ್‌ಲ್
ಕೂಟಇಾಯ ತ್ೇಪಕ್
ಎಚ್ಚಕುಳ್ಳ ಪಟ್ಟ್ಯಾಪ?
ಚೆಂಡೋಲೆ ಕಡಿಯೋಂಡ
ಪೊಂಬಾವಲಿ ಪಟ್ಯೋಂದ್ ;
ಕುಯ್ಯಂಗೇರಿ ನಾಡೋಂದ
ಕುಟ್ಟುರ್‌ಪ್ ಕಾರುಂದ
ಕಾರುಂದತ್ ಪಟ್ಯೊಂದ್;
ಉದ್ದಕೊಡೆ ತಾವುಲ್
ಅಲ್ಲಿಂಜೂ ತಿರುವುಳ್ಳ
ಪಚ್ಚೆ ಕೊಡೆ ಪಾಂಡತ್
ಪಾಂಡತುಳ್ಳ ಪಟ್ಯೊಂದ್;
ಈನಂಗುಂಡು ಪೋರಾಂದ್
ಪಾಂಬ್ ಕಣ್ಣ್ ಪಾಲೇರಿ
ಇಂದ್ ಬಾವೊಡೆವೋಂಡ
ಪೊಂದೇವಡಿ ಪಟ್ಯೋಂದ್;
ನುಪ್ಪತಂಜಿ ನಾಡ್‌ಕ್
ನಾಲ್ ಪಟ್ಟಿಡಾಚಿಲ
ನುಪ್ಪತ್ತಂಜಿ ನಾಡ್‌ಲ್
ತಕ್ಕ ಪೋಯಳಪಕ್
ನುಪ್ಪತಂಜಿ ಅಂಬ್‌ಲ;

ದೇಬುವ ಕುಳಿಪಕ್
ನುಪ್ಪತಂಜಿ ಪಾಕೆರೆ;
ಚಿಕ್ಕಿ ಬಂದ ಚೋಮಂಗ್
ನೀಕುಡಿ ಕುಡಿಪಕ್
ನುಪ್ಪತಂಜಿ ನೀಕೆರೆ:
ನಾಡ್‌ಕೊರ್ ಮಾದೇವ;
ಊರ್‌ಕೊರ್ ಪೊವ್ವದಿ;
ಕೇರಿಕೊರ್ ಐಯ್ಯಪ್ಪ;
ಓಣಿಕೊರ್ ನಾತನ್
ಒಕ್ಕಕೊರ್ ಪೂದನ್
ಅನ್ನತ ನೆಲೆಯಾಪ;
ಎಂದೆಣ್ಣಿತ್ ಪಾಡುವ.
ಈ ಪಾಡ್‌ನ ಬೆಪ್ಪಿನೊ
ಬೆಪ್ಪಕೊಮ್ಮೆಡ್‌ಪಕ್ಕ
ಪಾಡುವ ಮೊರಡಾಪ
ಆದಿ ಮೂಲ ಲೆಲ್ಲೇಲೊ!

(ಚಿಣ್ಣಪ್ಪ, ೧೯೨೪:೩೩),
(ಚಂಗಪ್ಪ, ೨೦೦೩:೯೪),
(ಕೃಷ್ಣಯ್ಯ, ೧೯೭೪:೧೧೬-೧೧೭)

ಈ ಮೇಲಿನ ದೇಶಕಟ್ಟ್‌ಪಾಟ್ ನಡಿಕೇರಿಯಂಡ ಚಿಣ್ಣಪ್ಪನವರು ಮೊದಲಿಗೆ ಪ್ರಕಟಿಸಿದರು. ಪರದಂಡ ಚಂಗಪ್ಪನವರ ಕೃತಿಯಲ್ಲಿ ಪ್ರಕಟವಾಗಿರುವ 'ದೇಶಕಟ್ಟ್‌ಪಾಟ್' ಚಿಣ್ಣಪ್ಪನವರ ಅನುಕರಣೆಯಾಗಿದೆ. ಡಿ.ಎನ್ ಕೃಷ್ಣಯ್ಯನವರು ದೇಶಕಟ್ಟ್‌ಪಾಟ್‌ನ್ನು 'ನಾಡುಕಟ್ಟ್‌ಪಾಟ್' ಎಂದು ಕರೆದಿಂದ್ದಾರೆ.

ಹೀಗೆ ಅಸ್ತಿತ್ವಕ್ಕೆ ಬಂದ ನಾಡೊಂದರ ೧೨ ಕೊಂಬುಗಳು ಹಾಗೂ ಅವುಗಳ ವಿಸ್ತಾರ ಎಲ್ಲಿಯವರೆಗೆ ಇತ್ತು ಎಂಬುದನ್ನು ಪರದಂಡ ಚಂಗಪ್ಪನವರು ಸಂಗ್ರಹಿಸಿದ ಜಾನಪದ ಹಾಡೊಂದು ಈ ರೀತಿ ಹೇಳುತ್ತದೆ:

ಕುಟ್ಟತ್ ಮಲೆಯಂಜಿ ಬೊಟ್ಟತ್ ಮಲೆಯೊಳ – ೧ (ಕುಟ್ಟದ ಮಲೆಯಿಂದ ಬೊಟ್ಟತ್ತು ಮಲೆವರೆಗೆ)
ಬೊಟ್ಟತ್ ಮಲೆಯಂಜೆ, ಕಾನಂಗಂಡಿ ಬಕ್ಕೋಳ – ೨ (ಬೊಟ್ಟತ್ತು ಮಲೆಯಿಂದ ಕಾನಂಗಂಡಿ ಬಕ್ಕದವರೆಗೆ)
ಅಲ್ಲ್‌ಂಜೀ ಉರ್‌ಪಣೇ, ಪೀಲಿ ಬೆಟ್ಟ ಕುಂದೋಳ – ೩ (ಅಲ್ಲಿಂದ ಊದಿದಾಗ ಪೀಲಿಬೆಟ್ಟದವರೆಗೆ)
ಪೀಲಿ ಬೆಟ್ಟ ಕುಂದ್‌ಂಜಿ ಪೆಗ್ಗಳತ್ ಕಂಡ್ಯೋಳ – ೪ (ಪೀಲಿಬೆಟ್ಟದಿಂದ ಪೆಗ್ಗಳದವರೆಗೆ)
ಪೆಗ್ಗಳತ್ ಕಂಡಿಂಜಿ ಸೋಮಗಿರಿ ಕುಂದೋಳ – ೫ (ಪೆಗ್ಗಳದ ಅಂಗಳದಿಂದ ಸೋಮಗಿರಿ ಬೆಟ್ಟದವರೆಗೆ)
ಸೋಮಗಿರಿ ಕುಂದ್‌ಂಜಿ ಇಗ್ಗುತಪ್ಪ ಕುಂದೋಳ – ೬ (ಸೋಮಗಿರಿಬೆಟ್ಟದಿಂದ ಇಗ್ಗುತ್ತಪ್ಪ ಬೆಟ್ಟದವರೆಗೆ)
ಇಗ್ಗುತಪ್ಪ ಕುಂದ್‌ಜಿ ಬ್ರಹ್ಮಗಿರಿ ಮೋಳ್‌ಕ್ – ೭ (ಇಗ್ಗುತ್ತಪ್ಪ ಬೆಟ್ಟದಿಂದ ಬ್ರಹ್ಮಗಿರಿಯ ತುದಿಯವರೆಗೆ)
ಬ್ರಹ್ಮಗಿರಿ ಮೋಳಂಜಿ ಚೆಂಬೂವ ಪೆರಾಜೆ – ೮ (ಬ್ರಹ್ಮಗಿರಿ ತುದಿಯಿಂದ ಪೆರಾಜೆವರೆಗೆ)
ಪೆರಾಜೆರ ಉಟ್ಟಂಜಿ ಕಡಮ್ಮಂಗಲ್ ಕುಂದೋಳ – ೯ (ಪೆರಾಜೆಯ ತುದಿಯಿಂದ ಕಡಮ್ಮಂಗಲ್ ಬೆಟ್ಟದವರೆಗೆ)
ಕಡಮ್ಮಂಗಲ್ ಕುಂದ್‌ಂಜಿ ಕಾಟೀಪಾರೆ ಬಕ್ಕೋಳ – ೧೦ (ಕಡಮ್ಮಂಗಲ್ ಬೆಟ್ಟದಿಂದ ಕಾಟೀಪಾರೆ ಬಕ್ಕದವರೆಗೆ)
ಕಾಟಿಪಾರೆ ಉಟ್ಟಂಜಿ ಸಿದ್ದೇಶ್ವರ ಗದ್ದಿಗೆ – ೧೧ (ಕಾಟಿಪಾರೆಯಿಂದ ಸಿದ್ದೇಶ್ವರನ ಗದ್ದಿಗೆವರೆಗೆ)
ಅಲ್ಲಿಂಜಿ ಉರ್‌ಪುವಕ ಬೂಟಿಪಾರೆ ಕುಯ್ಯೋಳ – ೧೨ (ಅಲ್ಲಿಂದ ಊದಿದಾಗ ಬೂಟಿಪಾರೆ ಆಳದವರೆಗೆ)

ಮೂಲ ಆಕರ(ಚಂಗಪ್ಪ, ೨೦೦೩: ೨೫೦)

ಹೀಗೆ ದೊಡ್ಡ ವೀರಪ್ಪರಾಜನ (ಸಿರಿಬಾಲು) ಕಾಲದಲ್ಲಿ ೧೨ ಕೊಂಬುಗಳಾಗಿ ಕೊಡಗು ವಿಂಗಡಣೆ ಯಾಯಿತು. ಈ ೧೨ ಕೊಂಬುಗಳು ಎರಡು ವಿಭಾಗಗಳಲ್ಲಿ ವಿಂಗಡಣೆಗೊಂಡು ಮೇಂದಲೆನಾಡು–ಕಿಗ್ಗಟ್ಟುನಾಡು ಎಂಬುದಾಗಿ ಮೇಂದಲೆ ನಾಡಿನಲ್ಲಿ ೧೪ ನಾಡುಗಳೂ ಕಿಗ್ಗಟ್ಟು ನಾಡಿನಲ್ಲಿ ೧೪ ನಾಡುಗಳೂ ಒಟ್ಟು ೨೮ ನಾಡುಗಳು ಆದವು. ೧೪ ನಾಡುಗಳು ಪ್ರಾಪರ್ ಕೊಡಗಿನ ಉತ್ತರ ಭಾಗದ ಮೇಂದಲೆ ನಾಡಿನಲ್ಲಿಯೂ, ೧೪ ನಾಡುಗಳು ದಕ್ಷಿಣ ಭಾಗದ ಕೊಡಗಿನಲ್ಲಿಯೂ ಸೇರಿದಾಗ ೨೮ ನಾಡುಗಳು ಆದರೂ ನಾಡುಗಳು ಸಾಕಾಗಲಿಲ್ಲ ಎಂಬ ಕಾರಣಕ್ಕಾಗಿ ಏಳುಸಾವಿರ ಸೀಮೆ(ಈಗಿನ ಕೊಡಗಿನ ಉತ್ತರ ಭಾಗದಲ್ಲಿರುವ ಸೋಮರ್‌ಪೇಟೆ ತಾಲ್ಲೂಕಿನ)ಯನ್ನು ಸೇರಿಸಿ ೩೫ ನಾಡುಗಳನ್ನಾಗಿ ಮಾಡಿದರು. ಈ ನಾಡುಗಳ ವಿಸ್ತರಣೆ ಆಡಳಿತದ ಅನುಕೂಲಕ್ಕಾಗಿ ಮಾಡಿದುದಾಗಿತ್ತು.

**ಕೊಡಗಿನ ೧೪+೧೪+೭= ೩೫ ನಾಡುಗಳ ನಕ್ಷೆ**



ದೊಡ್ಡವೀರಪ್ಪ ರಾಜನು ೧೬೮೧–೧೭೩೬ರವರೆಗೆ ಆಳ್ವಿಕೆ ನಡೆಸಿದ ಬಗೆಗೆ ಎಂ.ಜಿ.ನಾಗರಾಜ ಅವರ "ಕೊಡಗಿನ ಹಾಲೇರಿ ರಾಜವಂಶವು" ಎಂಬ ಪುಸ್ತಕದಲ್ಲಿ ದಾಖಲಿಸಿದ್ದಾರೆ(ನಾಗರಾಜ ೨೦೦೪:೧೩೬). ಆದರೆ ಲೂಯಿ ರೈಸ್ ಅವರು ತಮ್ಮ "ಎಫಿಗ್ರಾಫಿಯಾ ಕರ್ನಾಟಿಕ"ದಲ್ಲಿ ಅವರ ಆಡಳಿತ ೧೬೮೭–೧೭೩೬ ಎಂದು ದಾಖಲಿಸುತ್ತಾರೆ (ರೈಸ್, ೧೯೧೪:೨೪). ಏನಿದ್ದರೂ ಕೂಡ ಹೆಚ್ಚು ಕಡಿಮೆ ೫೦ ವರ್ಷಗಳಷ್ಟು ಆಡಳಿತ ಮಾಡಿದ ದೊಡ್ಡವೀರಪ್ಪ ರಾಜನು ನಾಡುಗಳ ವಿಂಗಡಣೆಯನ್ನು ಸಮರ್ಥವಾಗಿ ಮಾಡಿ ಕಂದಾಯ ತೆರಿಗೆಗಳನ್ನು ವ್ಯವಸ್ಥಿತವಾಗಿ ವಸೂಲಿ ಮಾಡುವ ನಿಯಮವನ್ನು ರೂಪಿಸಿದುದಾಗಿ ಎಂ.ಜಿ. ನಾಗರಾಜ ಹೇಳುತ್ತಾರೆ(ನಾಗರಾಜ, ೨೦೦೪:೧೬–೧೭). ದೊಡ್ಡ ವೀರಪ್ಪನ ಕಾಲದ ೩೫ ನಾಡುಗಳ ವಿಂಗಡಣೆ ಈ ಕೆಳಗಿನಂತಿದೆ.

ದೊಡ್ಡವೀರಪ್ಪರ ಕಾಲದಲ್ಲಿ ೩೫ ನಾಡುಗಳಾದವೆಂದು ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ'ಯಲ್ಲಿ ಬರುವ ದೇಶಕಟ್ಟ್ ಪಾಟ್‌ನಲ್ಲಿ ಉದ್ಧೃತವಿದೆ. ಆದರೆ ಪಟ್ಟೋಲೆ ಪಳಮೆಯಲ್ಲಿ ತಾವಳಗೇರಿ ಮೂರ್ನಾಡು, ಅಂಜಿಗೇರಿನಾಡು, ಮರೆನಾಡು, ಹತ್ತುಗಟ್ಟುನಾಡು, ಬೆಟ್ಟಿಯತ್ತನಾಡು, ಅಮ್ಮತ್ತಿನಾಡು, ಎಡೆನಾಲ್ಕುನಾಡು, ಬೆಪ್ಪುನಾಡು, ಕಡಿಯತ್ತುನಾಡು, ಹುದಿಕೇರಿನಾಡು, ಮುದುಗೇರಿನಾಡು, ಪೊರೆನಾಲ್ಕುನಾಡು, ಹಾಲೇರಿನಾಡು, ಕಾಂತಮಾರ್ನಾಡು, ಹುದಿಕೇರಿನಾಡು, ಕಗ್ಗೋಡುನಾಡು, ಮಡಿಕೇರಿನಾಡು, ಹೊರಮಲೆನಾಡು, ಮುತ್ತನಾಡು, ಸೂರ್ಲಬಿನಾಡು ಮತ್ತು ಗಡಿನಾಡು ಎಂದು ಕೇವಲ ೨೫ ಮಾತ್ರ ನಾಡುಗಳನ್ನು ಉಲ್ಲೇಖಿಸಿರುತ್ತಾರೆ (ಚಿಣ್ಣಪ್ಪ, ೧೯೨೪: ೨೯, ೩೦, ೩೧).

ದೇಶಕಟ್ಟ್‌ಪಾಟ್‌ನ್ನು ಡಿ.ಎನ್. ಕೃಷ್ಣಯ್ಯ ಅವರು 'ನಾಡ್‌ಕಟ್ಟ್ ಪಾಟ್' ಎಂದಿದ್ದಾರೆ. "ನಾಡ್‌ಕಟ್ಟ್" ಹಾಡಿನಿಂದ ಕೊಡಗಿನಲ್ಲಿ ಹನ್ನೆರಡು ಕೊಂಬಿನ ಪ್ರದೇಶಗಳು, ಮೂವತ್ತೈದು ನಾಡುಗಳೂ ಸೀಮೆತಕ್ಕ ಅಥವಾ ದೇತಕ್ಕರ ಸ್ಥಾನಗಳು ಹೇಗೆ ನಿರ್ಮಿತವಾದುವು ಎಂಬುದು ತಿಳಿಯುತ್ತದೆ. ಇಷ್ಟೇ ಅಲ್ಲದೆ ಜನರು ಸೇರುವ ದೊಡ್ಡ ಅಂಗಣಗಳೂ, ತಕ್ಕರು ಸೇರುವ ಅಂಬಲಗಳೂ, ಊರಿನ ಕೆರೆಗಳೂ, ದೇವ ದೈವಗಳೂ ಹೇಗೆ ಏರ್ಪಾಟಾದುವು ಎಂಬುದೂ ಗೊತ್ತಾಗುತ್ತದೆ. (ಕೃಷ್ಣಯ್ಯ, ೧೯೭೪:೧೧೭)

ಪರದಂಡ ಚಂಗಪ್ಪನವರ 'ಕೊಡಗಿನ ನಿವಾಸಿಯರ ಪುರಾಣ ಸಂಸ್ಕೃತಿಯ ಮತ್ತು ಊರೂರು ದೇವಾಲಯಗಳ ಪರಿಚಯ' ಎನ್ನುವ ಕೃತಿಯಲ್ಲಿ ದೊಡ್ಡವೀರಪ್ಪರ ಕಾಲದ ೩೫ ನಾಡುಗಳ ಹೆಸರನ್ನು ಸ್ಪಷ್ಟವಾಗಿ ಕೊಡಲಾಗಿದೆ. "ಪಾಟೊಳಿಯ ಮೇಂದಲೆಯಲ್ಲಿ ೧೪ ನಾಡುಗಳು, ಕೆಂಗಳಮ್ಮೆ ಕಿಗ್ಗಟ್ಟ್‌ನಲ್ಲಿ ೧೪ ನಾಡುಗಳು, ಆದರೂ ನಾಡುಗಳು ಸಾಕಾಗಲಿಲ್ಲ ಎಂದು ಏಳು ಸಾವಿರ ಸೀಮೆಯಲ್ಲಿನ ೭ ನಾಡುಗಳನ್ನು ಸೇರಿಸಿದಾಗ ೩೫ ನಾಡುಗಳಾದವು ಎನ್ನುತ್ತಾರೆ. ಆ ನಾಡುಗಳ ವಿವರ ಈ ಕೆಳಗಿನಂತಿವೆ.

**ಪಾಚೊಳಿಯ ಮೇಂದಲೆಯಲ್ಲಿ ೧೪ ನಾಡುಗಳು**

| | | | |
|---|---|---|---|
| ೧. | ಪಾಡಿನಾಲ್ಕು ನಾಡು | ೮. | ಬೋಟೋಳಿ ನಾಡು |
| ೨. | ಕಡಿಯುತ್ತ ನಾಡು | ೯. | ಅಮ್ಮತ್ತಿ ನಾಡು |
| ೩. | ಕಾಂತಮೂರ್ನಾಡು | ೧೦. | ಬೆಪ್ಪು ನಾಡು |
| ೪. | ಬೈರವ ನಾಡು | ೧೧. | ಕುಯ್ಯಂಗೇರಿನಾಡು |
| ೫. | ಬೇಂಗು ನಾಡು | ೧೨. | ಕಗ್ಗೋಡು ನಾಡು |
| ೬. | ಎಡೆ ನಾಡು | ೧೩. | ಬಲ್ಲತ್ ನಾಡು |
| ೭. | ಪೆರವ ನಾಡು | ೧೪. | ತಾವು ನಾಡು |

**ಕೆಂಗಳಮ್ಮೆ ಕ್‌ಗ್ಗಟ್ಟ್‌ನಲ್ಲಿ–೧೪ ನಾಡು**

| | | | |
|---|---|---|---|
| ೧. | ಕುರ್ಚಿತೊರೆನಾಡು | ೮. | ಬೇರಳೆನಾಡು |
| ೨. | ಕುತ್ತ್‌ನಾಡು | ೯. | ಬೊಟ್ಯತ್ ನಾಡು |
| ೩. | ಆರ್ಕೇರಿನಾಡು | ೧೦. | ಅಯ್ಯತ್ ನಾಡು |
| ೪. | ಅಂಜಿಕೇರಿ ನಾಡು | ೧೧. | ಕಿಗ್ಗೂರ್ ನಾಡು |
| ೫. | ಪತ್ತ್‌ಗಟ್ಟ್‌ನಾಡು | ೧೨. | ಹಳ್ಳಿಗಟ್ಟ್‌ನಾಡು |
| ೬. | ಕಿರುನಾಲ್ಕುನಾಡು | ೧೩. | ಶ್ರೀಮಂಗಲನಾಡು |
| ೭. | ತಾಳೇರಿ ನಾಡು | ೧೪. | ಮರೆನಾಡು |

**ಏಳು ಸಾವಿರ ನಾಡು–೭ ನಾಡುಗಳು**

| | | | |
|---|---|---|---|
| ೧. | ಸೂರ್ಲಬಿ | ೫. | ಮಡಿಕೇರಿನಾಡು |
| ೨. | ಮುತ್ತ್‌ನಾಡು | ೬. | ಗಡಿನಾಡು |
| ೩. | ಬದಿಗೇರಿನಾಡು | ೭. | ಹಾಲೇರಿನಾಡು |
| ೪. | ಹೊರಮಲೆನಾಡು | | |

(ಪರದಂಡ ಚಂಗಪ್ಪ, ೨೦೧೪(೨೦೦೩): ೩೧೨:೧೨)

ಹೀಗೆ ಒಟ್ಟಾರೆ ೩೫ ನಾಡುಗಳು ಲಿಂಗಾಯತ ಅರಸರ ಕಾಲದಲ್ಲಿ ಇದ್ದವು ಹಾಗೂ ಆಡಳಿತ ವ್ಯವಸ್ಥೆಯನ್ನು ರೂಪಿಸುವ ಸಲುವಾಗಿ ಮತ್ತು ಕೊಡಗು ರಾಜ್ಯಕ್ಕೆ ಸಮಗ್ರತೆ ತರುವ ಸಲುವಾಗಿ ಲಿಂಗಾಯತ ಅರಸರು ಶ್ರಮಿಸಿದರು ಎಂದು ತಿಳಿದುಬರುತ್ತದೆ.

ಮುಂದುವರಿದು ಈ ನಾಡುಗಳಿಗೆ ಬಲ್ಲತ್ ನಾಡು ಎಂಬ ನಾಡನ್ನು ದೊಡ್ಡವೀರಪ್ಪ ಅಥವಾ ದೊಡ್ಡ ವೀರರಾಜೇಂದ್ರ ರಾಜನ ಕಾಲದಲ್ಲಿ ಸೇರಿಕೊಂಡಿದ್ದುದಾಗಿ ತಿಳಿದುಬರುತ್ತದೆ (ಚಂಗಪ್ಪ, ೨೦೧೦(೨೦೦೩):೩೧೧, ೩೧೨). ಹೀಗೆ ರೂಪಿತಗೊಂಡ ೩೫ ನಾಡುಗಳಿಗೆ ೮ ದೇಶತಕ್ಕರಿದ್ದರು ಹಾಗೂ ನ್ಯಾಯ ತೀರ್ಮಾನಕ್ಕೆ ೪ ಪಟ್ಟಿಗಳಿದ್ದವು. ಕಳ್ಳೇಂಗಡ, ಬೊಳ್ಳೆರ, ಪಾಂಡಿರ, ಪರದಂಡ, ಮಾತಂಡ, ಬುಡುವಂಡ, ಪೋರೆರ ಮತ್ತು ಪರುವಂಡ ಎಂದು ೮ ಒಕ್ಕಗಳು ದೇಶತಕ್ಕರಾಗಿದ್ದರು. ಆದರೆ ಈ ೮ ಒಕ್ಕಗಳಲ್ಲಿ ಬುಡುವಂಡ, ಪೋರೆರ ಮತ್ತು ಪರುವಂಡ ಒಕ್ಕಗಳು ನಿರ್ನಾಮ(ಕುತ್ತಿನಾಶ)ಗೊಂಡವು. ಪ್ರಸ್ತುತ ಸಾಂಪ್ರದಾಯಿಕವಾಗಿ ೫ ದೇಶ ತಕ್ಕರಿದ್ದಾರೆ.

ಆಗಿನ ಕಾಲದಲ್ಲಿ ಈ ದೇಶತಕ್ಕರು ಕಾನೂನು ಪರಿಪಾಲನೆ, ಸುವ್ಯವಸ್ಥೆ ಹಾಗೂ ತೆರಿಗೆ ವಸೂಲಾತಿ ಈ ಎಲ್ಲ ಜವಾಬ್ದಾರಿಗಳನ್ನು ಹೊತ್ತಿರುತ್ತಿದ್ದರು. ಇವರ ನ್ಯಾಯತೀರ್ಮಾನಕ್ಕೆ ಕಡಿಯತ್‌ನಾಡಿನ ಬಾವಲಿ ಗ್ರಾಮದಲ್ಲಿ ಒಂದು ಪಟ್ಟಿ, ಕುಯ್ಯಂಗೇರಿನಾಡಿನ ಕಾರುದಂಡದಲ್ಲಿ ಒಂದು ಪಟ್ಟಿ, ತಾವುನಾಡಿನ ಪಾಂಡ ಎನ್ನುವಲ್ಲಿ ಒಂದು ಪಟ್ಟಿ, ಪಾಲೇರಿಯಲ್ಲಿ ಪೊಂದೇವಡಿಯಲ್ಲಿ ಒಂದು ಪಟ್ಟಿ ಎಂದು ನಾಲ್ಕು ಪಟ್ಟಿ ಅಥವಾ ನ್ಯಾಯಾಲಯಗಳಿರುತ್ತಿದ್ದವು(ಚಂಗಪ್ಪ, ೨೦೧೦(೨೦೦೩):೩೧೩, ೩೬೪).

ಮುಂದೆ ಬ್ರಿಟಿಷರ ಆಳ್ವಿಕೆ ಸಂದರ್ಭದಲ್ಲಿ ಈ ನಾಡುಗಳ ರಚನೆಯ ತಳಹದಿಯ ಮೇಲೆಯೇ ಆಡಳಿತ ವ್ಯವಸ್ಥೆ ಮುಂದುವರಿಯಿತು. ಈ ಕಾಲದಲ್ಲಿ ಕೊಡಗಿನ ಒಟ್ಟಾರೆ ವಿಸ್ತೀರ್ಣವನ್ನು ಗಮನದಲ್ಲಿಟ್ಟುಕೊಂಡು ಅಂಕಿ ಅಂಶಗಳ ಆಧಾರದ ಮೇಲೆ ಕೊಡಗು ೬ ತಾಲೂಕುಗಳಾಗಿ ವಿಂಗಡಿಸಲ್ಪಟ್ಟಿತು. ಕೊಡಗಿನ ಒಟ್ಟಾರೆ ವಿಸ್ತೀರ್ಣ ೧೫೮೫ ಚದರ ಮೈಲಿಗಳಿದ್ದು ಇದರೊಳಗೆ ೫೦೮ ಗ್ರಾಮಗಳು ಇದ್ದುದಾಗಿ ತಿಳಿಯುತ್ತದೆ. ಇಲ್ಲಿ ನಾಡುಗಳು ಕಡಿಮೆಯಾಗಿ ರುವುದನ್ನು ಜಿ. ರಿಕ್ತರ್‌ನ ಈ ಕೋಷ್ಟಕದಿಂದ ತಿಳಿಯಬಹುದಾಗಿದೆ.

**ತಾಲೂಕು-೧ : ಮಡಿಕೇರಿ**

| | | | ಒಟ್ಟು ಗ್ರಾಮಗಳು | |
|---|---|---|---|---|
| ೧. | ಮಡಿಕೇರಿ-ಹಾಲೇರಿನಾಡ್ | ೪೯ | ೧೫ | ಮಡಿಕೇರಿ |
| ೨. | ಕಗ್ಗೋಡ್ಲು ನಾಡ್ | ೪೦ | ೬ | ತಾಲತ್‌ಮನೆ |
| ೩. | ಹೋರೂರು ನೂರೊಕ್ಕಲುನಾಡು | ೩೯ | ೧೧ | ಬೊಯ್‌ಕೇರಿ |
| ೪. | ಹುದಿಕೇರಿ ಕಾಂತ-ಮೂರ್ನಾಡು | ೪೯ | ೧೪ | ಮೂರ್ನಾಡ್ |
| ೫. | ಉಲುಗುಲು-ಮಡಿಕೇರಿನಾಡು | ೩೨ | ೧೧ | ಸುಂಟಿಕೊಪ್ಪ |
| | ಒಟ್ಟು | ೨೦೯ | ೫೭ | |

ತಾಲೂಕು-೨ : ಪಾಡಿನಾಲ್ಕುನಾಡು

| | | | ಒಟ್ಟು ಗ್ರಾಮಗಳು | |
|---|---|---|---|---|
| ೧. | ಪಾಡಿನಾಲಕುನಾಡು | ೧೪೨ | ೧೨ | ನಾಲ್ಕ್‌ನಾಡು |
| ೨. | ಕಡಿಯತ್‌ನಾಡು | ೫೧ | ೧೨ | ಬಾವುಲಿ |
| ೩. | ತಾವುನಾಡು | ೧೩೯ | ೯ | ಭಾಗಮಂಡಲ |
| ೪. | ಬೇಂಗ್‌ನಾಡು | ೪೨ | ೧೧ | ಕೊಳಗದಾಳ್ |
| ೫. | ಕುಯ್ಯಂಗೇರಿ | ೩೯ | ೧೩ | ಪಾಲೂರು |
| | ಒಟ್ಟು | ೪೧೩ | ೫೭ | |

ತಾಲೂಕು-೩ : ಎಡೆನಾಲ್ಕ್ ನಾಡು

| | | | ಒಟ್ಟು ಗ್ರಾಮಗಳು | |
|---|---|---|---|---|
| ೧. | ಎಡೆನಾಲ್ಕ್ ನಾಡು | ೯೨ | ೨ | ವೀರರಾಜೇಂದ್ರಪೇಟೆ |
| ೨. | ಬೆಪ್ಪುನಾಡು | ೪೧ | ೮ | ಅರ್ಮೇರಿ |
| ೩. | ಅಮ್ಮತ್ತಿನಾಡು | ೭೭ | ೧೯ | ಕೋಲೆಪೇಟೆ |
| | ಒಟ್ಟು | ೨೧೦ | ೪೯ | |

ತಾಲೂಕು-೪ : ಕಿಗ್ಗಟ್ಟ್‌ನಾಡು

| | | | ಒಟ್ಟು ಗ್ರಾಮಗಳು | |
|---|---|---|---|---|
| ೧. | ಅಂಜಿಕೇರಿನಾಡು | ೮೯ | ೧೫ | ಹುದಿಕೇರಿ |
| ೨. | ತಾವಳಗೇರಿ ನಾಡು | ೧೧೦ | ೧೫ | ತವಲಕೇರಿ |
| ೩. | ಹತ್ತುಗಟ್ಟ್ ನಾಡು | ೧೧೩ | ೧೩ | ಪೊನ್ನಂಪೇಟೆ |
| ೪. | ಬೆಟ್ಯತ್ ನಾಡು | ೮೯ | ೨೦ | ಕುಂಟಗ್ರಾಮ |
| | ಒಟ್ಟು | ೪೦೧ | ೬೩ | |

**ತಾಲೂಕು-೫ : ನಂಜರಾಜ ಪಟ್ಟಣ ತಾಲೂಕು**

| | | | ಒಟ್ಟು ಗ್ರಾಮಗಳು | ಫ್ರೇಜರ್‌ಪೇಟೆ |
|---|---|---|---|---|
| ೧. | ಸೂರ್ಲಬಿಗಡಿನಾಡು | ೧೧೩ | ೨೧ | ಮಾದಾಪುರ |
| ೨. | ಯಡವನಾಡು | ೯೪ | ೩೭ | ಸೋಮವಾರಪೇಟೆ |
| ೩. | ನಂಜರಾಜ ಪಟ್ಟಣ ಹೋಬಳಿ | | ೨೬ | ಫ್ರೇಜರ್‌ಪೇಟೆ |
| ೪. | ರಾಮಸ್ವಾಮಿ ಕಣಿವೆ ಹೋಬಳಿ | ೫೫ | ೩೦ | ಕಂಪೂರು |
| | **ಒಟ್ಟು** | **೨೬೨** | **೧೧೪** | |

**ತಾಲೂಕು-೬ : ಏಳು ಸಾವಿರ ಸೀಮೆ ತಾಲೂಕು**

| | | | ಒಟ್ಟು ಗ್ರಾಮಗಳು | ಶನಿವಾರಸಂತೆ |
|---|---|---|---|---|
| ೧. | ಕೊಡ್ಲಿ ಹೋಬಳಿ | ೨೭ | ೫೫ | ಕೊಡ್ಲಿಪೇಟೆ |
| ೨. | ಬಿಳ್ಹಡ ಹೋಬಳಿ | ೧೮ | ೪೦ | ಶನಿವಾರಸಂತೆ |
| ೩. | ನಿಡ್ತ ಹೋಬಳಿ | ೪೬ | ೭೩ | ಗೌಡಹಳ್ಳಿ |
| | **ಒಟ್ಟು** | **೯೧** | **೧೬೮** | |
| | **ಒಟ್ಟು ಮೊತ್ತ** | **೧೫೮೫** | **೫೦೮** | |

ವಿರಾಜಪೇಟೆ ತಾಲೂಕು ನಾಡಾಗಿಯೂ ಕರೆಯಲ್ಪಡಲು ಪ್ರಾರಂಭಿಸಿದುದು ಗಮನಾರ್ಹ. ಅಂದರೆ ಅದಕ್ಕಿಂತ ಹಿಂದಿನ ನಾಡಿನ ಕಲ್ಪನೆ ಮಾಯವಾಗಿ ತಾಲೂಕುಗಳು ಬಂದರೂ ಜನತೆ ತಾಲೂಕುಗಳನ್ನು ನಾಡುಗಳಾಗಿಯೇ ಸ್ವೀಕಾರ ಮಾಡಿಕೊಂಡದ್ದು ಈ ರೀತಿಯ ಬರವಣಿಗೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

ಬ್ರಿಟಿಷರ ಆಳ್ವಿಕೆಯಲ್ಲಿ ನಾಡು ಕಛೇರಿಗಳು, ತಾಲ್ಲೂಕು ಕಛೇರಿಗಳು, ಬೇರೆ ಬೇರೆ ಇಲಾಖೆಗಳು ಇಂಗ್ಲಿಷರ ಆಡಳಿತದ ರೀತಿ ಅನುಷ್ಠಾನಕ್ಕೆ ಬಂದವು. ಕೊಡಗಿನ ಅರಸರ ಕಾಲದಲ್ಲಿ ಕೊಡಗು ಸಂಸ್ಥಾನಕ್ಕೊಳಪಟ್ಟ ಸುಳ್ಯ, ಪುತ್ತೂರು, ಪಂಜೆ ಮಾಗಣೆ ಮೊದಲಾದ ಪ್ರದೇಶಗಳನ್ನು(ಈ ಪ್ರಾಂತ್ಯಗಳು ಮಂಗಳೂರು ವಿಭಾಗಕ್ಕೆ ಸೇರಿ ಹೋದವು.) ಕೈಬಿಟ್ಟು ಭೌಗೋಳಿಕ ಪರಿಮಿತಿಗಳ ಆಧಾರದ ಮೇಲೆ ಕೊಡಗು ಪ್ರಾಂತ್ಯವನ್ನು ಬ್ರಿಟಿಷರು ಈ ಮೇಲಿನಂತೆ ಕ್ರೋಢೀಕರಿಸಿ ಆಡಳಿತಯಂತ್ರ ರೂಪಿಸಿದರು.

* * *

ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಪ್ರಜಾಪ್ರಭುತ್ವ ಸ್ಥಾಪನೆಯಾದ ಸಂದರ್ಭದಲ್ಲಿ ಕೊಡಗು 'ಸಿ' ದರ್ಜೆಯ ರಾಜ್ಯವಾಗಿ ಅಸ್ತಿತ್ವ ಪಡೆದುಕೊಂಡಿದ್ದು ಗಮನಾರ್ಹ. ೧೯೪೭ ಜುಲೈನಲ್ಲಿ ಭಾರತದ ಪ್ರಾವಿನ್ಸ್ ಪಾರ್ಲಿಮೆಂಟು ಡೆಲ್ಲಿ, ಅಜ್ಮೀರ ಹಾಗೂ ಕೊಡಗನ್ನು ಚೀಫ್ ಕಮೀಷನರ್ಸ್ ಪ್ರಾವಿನ್ಸ್‌ಗಳೆಂದು ಅಂಗೀಕರಿಸಿತು (ಮುತ್ತಣ್ಣ, ೧೯೫೩: ೧೧೫).

೧೯೪೯ ಮೇ ೧೬ರಂದು ಚೀಫ್ ಕಮೀಷನರ್‌ಗಳ ಆಡಳಿತದೊಳಗೆ ಬರುವ ೩ ಪ್ರಾವಿನ್ಸ್‌ಗಳನ್ನೊಳಗೊಂಡಂತೆ ಇನ್ನೂ ೭ ಪ್ರದೇಶಗಳು ಭಾರತದ ಸಂವಿಧಾನದ ೨೩೯-೨೪೨ ವಿಧಿಗಳ ಪ್ರಕಾರ 'ಸಿ' ರಾಜ್ಯಗಳೆಂಬಂತೆ ಅಸ್ತಿತ್ವಕ್ಕೆ ಬಂದವು ಎಂಬುದು ಕೊಡಗಿನ ಚರಿತ್ರೆಗೆ ಸಂಬಂಧಪಟ್ಟಂತೆ ಗಮನಾರ್ಹ ವಿಚಾರ. ಮೊದಲಿನ ಮೂರು ಹಾಗೂ ನಂತರ ಸೇರಿಕೊಂಡ ೭ ಪ್ರದೇಶಗಳು ಹೀಗೆ ಒಟ್ಟಾರೆ ೧೦ ಪ್ರದೇಶಗಳನ್ನು ಈ ಕೆಳಗೆ ಹೆಸರಿಸಲಾಗಿದೆ.

| | | | |
|---|---|---|---|
| ೧. | ಅಜ್ಮೀರ | ೨. | ಕೊಡಗು |
| ೩. | ಭೋಪಾಲ್ | ೪. | ಭೀಲಾಸ್‌ಪುರ |
| ೫. | ತ್ರಿಪುರ | ೬. | ಮಣಿಪುರ |
| ೭. | ಡೆಲ್ಲಿ | ೮. | ಕಚ್ |
| ೯. | ಹಿಮಾಚಲ ಪ್ರದೇಶ | ೧೦. | ವಿಂಧ್ಯಾಪ್ರದೇಶ |

೧೯೫೨ ಮಾರ್ಚ್ ೨೬ರಂದು ಅಂದಿನ ಭಾರತದ ಗೃಹಮಂತ್ರಿಗಳಾಗಿದ್ದ ಡಾ.ಕೈಲಾಸನಾಥ ಕಟ್ಜು ಅವರು ಕೊಡಗಿನ 'ಸಿ' ರಾಜ್ಯದ ಹೊಸ ಮಂತ್ರಿಮಂಡಲವನ್ನು ಉದ್ಘಾಟಿಸಿದರು.

ಚೆಪ್ಪುಡಿರ ಪೂಣಚ್ಚನವರು ಕೊಡಗಿನ ಮೊದಲ ಮುಖ್ಯಮಂತ್ರಿಗಳಾದರು (ಮುತ್ತಣ್ಣ, ೧೯೫೩: ೧೧೫). ವಿಧಾನಸಭೆಯಲ್ಲಿ ಸಭಾಧ್ಯಕ್ಷರಾಗಿ ಬಿದ್ದಂಡ ಕುಶಾಲಪ್ಪನವರು ಆಯ್ಕೆಯಾದರು (ಅದೇ,). ವಿಧಾನಸಭೆಯಲ್ಲಿ ಒಟ್ಟಾರೆ ೨೪ ಸದಸ್ಯರಿದ್ದರು (ಅದೇ, ೧೨೬). ಹೀಗೆ ಕೊಡಗು 'ಸಿ' ರಾಜ್ಯವಾಗಿ ೧೯೫೬ರವರೆಗೆ ಭಾರತದ ಪ್ರಜಾಸತ್ತಾತ್ಮಕ ರಾಷ್ಟ್ರದ ಒಂದು ಪ್ರಮುಖ ರಾಜ್ಯವಾಗಿ ರೂಪುಗೊಂಡಿತ್ತು.

೧೯೫೬ರಲ್ಲಿ ಭಾಷಾವಾರು ಪ್ರಾಂತಗಳ ರಚನೆಯಾಗಿ ಕೊಡಗು ಕರ್ನಾಟಕದೊಡನೆ ವಿಲೀನಗೊಳ್ಳುವವರೆಗೂ ಶಿಷ್ಟತೆಯನ್ನು ಕಾಯ್ದುಕೊಂಡು ಬಂದಿತು.

ಹೀಗೆ ಕರ್ನಾಟಕದೊಡನೆ 'ಕೊಡಗು ವಿಲೀನವಾಗುವುದರೊಂದಿಗೆ ಕರ್ನಾಟಕದ ಒಂದು ಜಿಲ್ಲೆಯಾಗಿ ಕೊಡಗು ರೂಪುತಳೆಯಿತು. ಕೊಡಗು ಕರ್ನಾಟಕದೊಡನೆ ವಿಲೀನವಾಗುವುದಕ್ಕೆ ಸ್ಥಳೀಯರ ವಿರೋಧವಿತ್ತು. ಅದರಲ್ಲೂ ಕೃಷಿಕೇಂದ್ರಿತ ಸಮುದಾಯ ಅಥವಾ ಪ್ರಬಲ ವರ್ಗದವರು ಅಸಮಾಧಾನ ವ್ಯಕ್ತಪಡಿಸಿದ್ದರು. ಶತಮಾನಗಳಿಂದಲೂ ಕೊಡಗಿನ ಆಡಳಿತ ಸೂತ್ರದ ನಿಯಂತ್ರಣ

ಹೊಂದಿದ್ದ ಪ್ರಬಲ ವರ್ಗದವರ ಅಸಮಾಧಾನ ಸಹಜವೇ ಆಗಿತ್ತು. ಲಿಂಗಾಯತ ಅರಸರ ಆಳ್ವಿಕೆ ಮತ್ತು ಬ್ರಿಟಿಷ್ ಆಡಳಿತದಲ್ಲಿ ನೇರ ಹತೋಟಿ ಹೊಂದಿದ್ದ ಪ್ರಬಲವರ್ಗದ ಸಮುದಾಯಗಳಿಗೆ ಕರ್ನಾಟಕದೊಳಗೆ ವಿಲೀನವಾಗಿದ್ದು, ತಮ್ಮ ಅಧಿಕಾರವನ್ನು, ಪ್ರಭಾವವನ್ನು ಕಸಿದುಕೊಂಡಂತಾಗಿತ್ತು. ಈ ಎಲ್ಲ ವಿದ್ಯಮಾನಗಳ ಅಸಮಾಧಾನಗಳ ಹಿನ್ನೆಲೆಯಲ್ಲಿ ಕೊಡಗಿನಲ್ಲಿ ಎರಡು ಮುಖ್ಯ ಚಳುವಳಿಗಳು ನಡೆದಿರುವುದನ್ನು ಕಾಣಬಹುದು. ಇದರ ವಿವರಗಳನ್ನು ಮುಂದಿನ ಭಾಗದಲ್ಲಿ ನೋಡಬಹುದಾಗಿದೆ.

**ಚಳವಳಿಗಳು**

ಸ್ವಾತಂತ್ರ್ಯೋತ್ತರ .ಕಾಲದಲ್ಲಿ ಕೊಡಗಿನ ಏಕೀಕರಣದ ದೃಷ್ಟಿಯಿಂದ ಜಾತಿ, ಮತ, ಭೇದಗಳನ್ನು ಮೀರಿದ ನಾಡಿನ ಮೇಲಿನ ಪ್ರೇಮ ಕಾರಣವಾಗಿ ಹೋರಾಡಿದ ಕೆಲವು ಚಳವಳಿಗಳು ಕಾಣಬರುತ್ತವೆ. ಈ ಹಿನ್ನೆಲೆಯಲ್ಲಿ ಎರಡು ಚಳವಳಿಗಳನ್ನು ಪ್ರಮುಖವಾಗಿ ನಾಡಿನ ಸಮಗ್ರತೆಯ ದೃಷ್ಟಿಯಿಂದ ಗುರುತಿಸಬಹುದು.

ಅ. ಬರಪೊಳೆ ಚಳವಳಿ

ಆ. ಪ್ರತ್ಯೇಕ ರಾಜ್ಯ ಚಳವಳಿ

**ಬರಪೊಳೆ ಚಳವಳಿ**

ನಾಡಿನ ಪ್ರಶ್ನೆ ಬಂದಾಗ ೧೯೪೭ರಲ್ಲಿ ಸ್ವಾತಂತ್ರ್ಯ ಬಂದು ಕೊಡಗು ರಾಜ್ಯವಾಗಿ ಉಳಿದರೂ ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಕೊಡಗು ಕರ್ನಾಟಕ ರಾಜ್ಯದ ಒಂದು ಸಣ್ಣ ಜಿಲ್ಲೆಯಾಗಿ ಅಸ್ತಿತ್ವ ಪಡೆದುಕೊಂಡದ್ದು ನಾಡಿನಾದ್ಯಂತ ಅಸಮಾಧಾನಕ್ಕೆ ಎಡೆ ಮಾಡಿ ಕೊಟ್ಟ ವಿಷಯವಾಗಿತ್ತು. ಆದರೆ ಅಂದಿನ ರಾಷ್ಟ್ರಮಟ್ಟದ ರಾಜಕೀಯ ವಿದ್ಯಾಮಾನಗಳ ಅನಿವಾರ್ಯತೆಯು ಈ ನಿರ್ಧಾರವನ್ನು ಬದಲಿಸುವಂತಿರಲಿಲ್ಲ. ಹೊಸ ವ್ಯವಸ್ಥೆಗೆ ಹೊಂದಿಕೊಳ್ಳಲು ಕೊಡಗಿನ ಜನತೆಗೆ ದಶಕಗಳೇ ಬೇಕಾದವು. ಈ ಮಧ್ಯೆ ರಾಜ್ಯ ಸರಕಾರ ಮಲತಾಯಿ ಧೋರಣೆ ಮಾಡುತ್ತಿದೆ ಎಂಬ ಅಭಿಪ್ರಾಯಗಳು ಜನಮನದಲ್ಲಿ ಮೂಡತೊಡಗಿತು. ಅದಕ್ಕೆ ಪೂರಕವಾಗಿ ತಮ್ಮ ಅಸಮಾಧಾನವನ್ನು ವ್ಯಕ್ತ ಮಾಡಲು ಒದಗಿದ ಸಂದರ್ಭವೆಂದರೆ 'ಬರಪೊಳೆ' ಅಣೆಕಟ್ಟಿನ ವಿಷಯ.

ಬರಪೊಳೆ ಅಣೆಕಟ್ಟು ಕಟ್ಟಿದರೆ ಅದರ ಸುತ್ತಮುತ್ತಲಿನ ಬಿರುನಾಣೆ, ಟಿ.ಶೆಟ್ಟಿಗೆಡಿ, ರುದ್ರಗುಪ್ಪೆ, ನಾಂಗಾಲ, ಬಾಡಗ, ಬಿಟ್ಟಂಗಾಲ, ಪೊನ್ನಂಪೇಟೆ ಮೊದಲಾದ ಕೊಡಗಿನ ಹೃದಯ ಭಾಗದ ಊರುಗಳಲ್ಲಿ ಶತಮಾನಗಳಿಂದ ನೆಲೆಸಿರುವ ಒಕ್ಕಗಳು ತಮ್ಮ ಜಮ್ಮ ಭೂಮಿ ಮತ್ತು ಐನ್‌ಮನೆಗಳನ್ನು ಕಳೆದುಕೊಂಡು ಸಾಂಸ್ಕೃತಿಕ ಹಿತಾಸಕ್ತಿಗಳಿಗೆ ತೊಂದರೆಯಾಗುತ್ತದೆ ಎಂಬ ನಿಲುವನ್ನು ಸ್ಥಳೀಯ ಸಮುದಾಯಗಳು ತಾಳಿದರು.

ಇದು ಕೇಂದ್ರ ಸರಕಾರದ ಯೋಜನೆಯಾಗಿದ್ದು, ಇಲ್ಲಿ ದಕ್ಷಿಣ ಕೊಡಗಿನ ಸಾಕಷ್ಟು ಪ್ರದೇಶಗಳು ಈ ಯೋಜನೆ ಅನುಷ್ಠಾನಕ್ಕೆ ಬಂದರೆ ಮುಳುಗುವ ಸಾಧ್ಯತೆಗಳು ಹೆಚ್ಚಾಗಿದ್ದವು. ೧೯೮೦ರ ದಶಕದ ಮೊದಲಾರ್ಧದಲ್ಲಿ ಈ ಚಳವಳಿ ಕೊಡಗಿನಲ್ಲಿ ಎಲ್ಲಾ ಭಾಗಗಳಲ್ಲೂ ವ್ಯಾಪಕವಾಗಿ ಉಗ್ರ ರೂಪ ತಾಳಿತ್ತು. ಸರಕಾರವು ದೃಢನಿಲುವು ತಾಳಿ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಎಲ್ಲಾ ರೀತಿಯ ಸಿದ್ಧತೆಗಳನ್ನು ಮಾಡಿಕೊಂಡು ಮೊದಲ ಹಂತದ ಕೆಲಸವೂ ಪ್ರಾರಂಭವಾಗಿತ್ತು. ಸಾಕಷ್ಟು ಇಂಜಿನೀಯರ್‌ಗಳು ಹಾಗೂ ಇತರ ಕೆಲಸಗಾರರೂ ಬರಪೊಳೆ ಪ್ರಾಂತದಲ್ಲಿ ವಾಸ್ತವ್ಯ ಹೂಡಿದ್ದರು. ಆದರೆ ಚಳವಳಿ ಉಗ್ರರೂಪ ತಾಳಿದ ಪರಿಣಾಮವಾಗಿ ಈ ಯೋಜನೆಯನ್ನು ಸದ್ಯಕ್ಕೆ ಕೈಬಿಡುವ ನಿರ್ಧಾರಕ್ಕೆ ಸರಕಾರ ಬಂದಿತ್ತು. ಆ ಸಂದರ್ಭದಲ್ಲಿ ಕೊಡಗಿನ ಎಲ್ಲಾ ಜನಾಂಗದ ಜನರು ಮನೆಮನೆಯಿಂದ ಆಸ್ತಿ, ಅಂತಸ್ತು, ಜಾತಿ, ಭೇದಗಳನ್ನು ಮರೆತು ನಾಡಿನ ರಕ್ಷಣೆಗಾಗಿ ಪಣ ತೊಟ್ಟು ನಿಂತಿದ್ದುದು ಚಾರಿತ್ರಿಕವಾಗಿ ಗಮನಾರ್ಹವಾದ ವಿಚಾರ. ಕೊಡಗಿನ ಬುದ್ಧಿಜೀವಿಗಳ ವಲಯ ಕೂಡಾ ಈ ಯೋಜನೆಯ ಬಗ್ಗೆ ತೀವ್ರ ವಿರೋಧವನ್ನು ವ್ಯಕ್ತಪಡಿಸಿ ಕೊಡಗಿನ ಪಾರಂಪರಿಕ ಜಮೀನುಗಳ, ನದಿವನಗಳ, ಬೆಟ್ಟ-ಗುಡ್ಡಗಳ ಹಾಗೂ ಒಟ್ಟಾರೆ ಪರಿಸರಕ್ಕೆ ಹಾನಿಯುಂಟಾಗುತ್ತದೆ ಎಂದು ಅಭಿಪ್ರಾಯ ಪಟ್ಟಿತು. ಪುಟ್ಟ ಜಿಲ್ಲೆಯ ಸಾಂಸ್ಕೃತಿಕ ಹಿರಿಮೆಗೆ ಧಕ್ಕೆಯಾಗುತ್ತದೆ ಎಂಬ ಘೋಷಣೆಗಳೊಂದಿಗೆ ಪ್ರತಿಭಟನೆಗೆ ಇಳಿದರು. ಬರಪೊಳೆ ಚಳವಳಿಗೆ ಈ ಮೇಲಿನ ಎಲ್ಲಾ ಅಂಶಗಳಿಗಿಂತ ಪ್ರಧಾನವಾಗಿದ್ದುದು 'ಒಕ್ಕ'. ಪರಂಪರಾಗತವಾಗಿ ಉಳಿದುಬಂದಿರುವ ಒಕ್ಕಗಳು ಅಣೆಕಟ್ಟೆ ಕಟ್ಟಿದರೆ, ನೀರಿನಲ್ಲಿ ಮುಳುಗಿ ಹೋಗುತ್ತವೆ. ಆದ್ದರಿಂದ ಈ ಒಕ್ಕಗಳನ್ನು ಉಳಿಸಿಕೊಳ್ಳುವುದು ನಾಡಿನ ಜನತೆಗೆ ಮುಖ್ಯವಾಗಿತ್ತು. ಈ ಒಕ್ಕಗಳನ್ನು ಸ್ಥಳಾಂತರಿಸುವ ಸೂಚನೆಯನ್ನು ಸರ್ಕಾರ ನೀಡಿತ್ತಾದರೂ ಒಕ್ಕಗಳ ಸ್ಥಾನಪಲ್ಲಟ ಒಕ್ಕದೊಲವಿನ ಮನಸ್ಸುಗಳಿಗೆ ಒಪ್ಪಿತವಾಗಲಿಲ್ಲ. ಕೊಡಗಿನ ಒಕ್ಕಗಳು ಕೇವಲ ಮನೆಗಳಾಗಿರಲಿಲ್ಲ. ಅಲ್ಲಿನ ನೆಲದೊಡಲ ಜೊತೆಗಿನ ಕರುಳುಬಳ್ಳಿಯ ಸಾಂಸ್ಕೃತಿಕ ಸಂಬಂಧವಾಗಿತ್ತು. ಹೀಗಾಗಿ ಬರಪೊಳೆ ಚಳವಳಿ ಒಂದರ್ಥದ 'ಒಕ್ಕಸಂಬಂಧಿ' ಚಳವಳಿಯಾಗಿ ಯಶಸ್ವಿಯಾಯಿತು. ಒಕ್ಕಗಳನ್ನು ಉಳಿಸಿಕೊಳ್ಳುವಲ್ಲಿ ಕೊಡಗಿನ ಸಮಗ್ರ ಹೋರಾಟ ಬರಪೊಳೆ ಚಳವಳಿಯ ಮೂಲಕ ಆರಂಭವಾದದ್ದು ಇಲ್ಲಿ ಪ್ರಧಾನವಾಗುತ್ತದೆ.

ಈ ಸಂದರ್ಭದಲ್ಲಿ ಬಂದ ಪ್ರಕಟಿತ ಕ್ರಾಂತಿ ಗೀತೆಯೊಂದನ್ನು ಇಲ್ಲಿ ಉಲ್ಲೇಖಿಸುವುದು ಉಚಿತವಾಗುತ್ತದೆ.

ಏಳಿ ಏಳಿ ಮಕ್ಕಳೇ, ಕಾವೇರಮ್ಮೆರ ಮಕ್ಕಳೇ ।
ಕಚ್ಚೆ ಬಾಲ ಬಲ್‌ಚಂಡ್, ಕೊಚ್ಚೆರೊಳ್‌ಟ್ ಅಳಕತಿ ।
ಕಾವೇರಮ್ಮೆರ ಮಣ್ಣ್‌ನಾ, ನೀರ್‌ರೋಳ್‌ಲ್ ಮುಳ್ಕತಿ ।
ಎಂಗಡಜ್ಜ ಸೈಸುಲೆ, ನಿಂಗಡ ಮಕ್ಕ ಉಳಿಯುಲೆ ॥ಏಳಿ॥

ಪೊನ್ನ್‌ನಾಡ್ ಕೊಡಗ್‌ರ, ಶಾಂತಿಪ್ರೀಯ ಕೊಡವಳೆ ।
ಸ್ವಾರ್ಥಬುಟ್ಟ್ ಉಳಿವುಕಾಯಿ, ಒಗ್ಗಟ್ಟಾಯಿ ನಿಕ್ಕನಾ ।
ಕೊಂಬ ಮೀಸೆ ಬೆಚ್ಚಂಡ್, ಬಾರ್‌ರೊಳಲ್ ಅಳಕಂಡಾ ।
ಕೊಡಗ್‌ಕಾಯಿತ್ ಎಲ್ಲಾರೂ, ರಟ್ಟೆ ತೆಕ್ಕೆ ನಿಕ್ಕನಾ ॥ಏಳಿ॥

ಸ್ವಾರ್ಥಕಾಯಿತ್ ಪೂಣಚ್ಚಜ್ಜ, ಕೊಡಗ್‌ನಂದ್ ಮಾರ್‌ಚಿ ।
ಕೇಳಿಪಟ್ಟ ಕಾರ್ಯಪ್ಪಜ್ಜ, ಕಾವೇರಮ್ಮೆನ ಪೊಲತ್‌ಚಿ ।
ರಾಜ್ಯಪೋಯಿ ಜಿಲ್ಲೆ ಆಚಿ, ಜಿಲ್ಲೆ ಪೋಯಿ ಕೊಲ್ಲಿ ಆಪ ।
ಕೊಲ್ಲಿ ಆಪಾಂಗ್‌ಂಜಿ ಮಿಂಞ, ಚೆಲ್ಲಿ ಎಂಗ ನಿಕ್ಕನಾ ॥ಏಳಿ॥

ಎಂದು ಸಣ್ಣುವಂಡ ರತನ್ ಸೋಮಯ್ಯ ಎನ್ನುವವರು ಕೊಡಗಿನ ಪತ್ರಿಕೆಯೊಂದರಲ್ಲಿ ಕ್ರಾಂತಿಕಾರಿ ಗೀತೆಯೊಂದನ್ನು ಪ್ರಕಟಿಸುತ್ತಾರೆ. ಶಾಂತಿ ಪ್ರೀತಿಯುಳ್ಳ ಕೊಡಗರಾದ ನಾವು ಸ್ವಾರ್ಥವನ್ನು ತ್ಯಜಿಸಿ ಬೀದಿಗಿಳಿದು ಹೋರಾಡೋಣ. ರಾಜ್ಯ ಹೋಗಿ ಜಿಲ್ಲೆ ಆಯಿತು. ಜಿಲ್ಲೆ ಹೋಗಿ ಕೊಲ್ಲಿ ಮಾಡುವುದಕ್ಕೆ ನಾವು ಬಿಡಬಾರದು ಎಂಬ ಅಭಿಪ್ರಾಯ ಈ ಕವಿತೆಯಲ್ಲಿ ವ್ಯಕ್ತವಾಗುತ್ತದೆ. ಹೀಗೆ ಕೊಡಗಿನ ಜನತೆಯ ಜನಮನಗಳನ್ನು ಬಡಿದೆಬ್ಬಿಸುವ ಈ ರೀತಿಯ ಕೆಲಸಗಳನ್ನು ನೂರಾರು ಜನರು ಮಾಡುತ್ತಾರೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಅಣೆಕಟ್ಟು ಬಂದರೆ ಅದರ ಪರಿಣಾಮಕ್ಕೊಳಪಡುವುದು ದಕ್ಷಿಣ ಕೊಡಗಿನ ನೂರಾರು ಒಕ್ಕಗಳು. ಈ ಒಕ್ಕಗಳು ಕೇವಲ ಕೆಲವು ಕುಟುಂಬಗಳಲ್ಲ. ಈ ಒಕ್ಕಗಳಿಗೆ ಒಂದು ಸಾಂಸ್ಕೃತಿಕ ಇತಿಹಾಸವಿರುತ್ತದೆ. ಸಾಂಸ್ಕೃತಿಕ ಇತಿಹಾಸದ ನೆಲೆಗಟ್ಟು ಇರುವುದು ಆ ನೆಲದಲ್ಲಿ. ಇಂತಹ ನೆಲ ಮುಳುಗಿದರೆ ಆ ನೆಲದೊಡನೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಂಬಂಧವಿರುವ ಜನ ಕೊಡಗಿನಾದ್ಯಂತ ಇರುತ್ತಾರೆ. ಹಾಗಾಗಿ ಇದು ಒಟ್ಟಾರೆಯಾಗಿ ಜನಮನ ಅಸ್ತಿತ್ವದ ಪ್ರಶ್ನೆಯಾಗಿ ತಲೆಯೆತ್ತಿತ್ತು. ಈ ಸಂದರ್ಭದಲ್ಲಿ ತಾಯಿನಾಡನ್ನು ಉಳಿಸಿಕೊಳ್ಳುವ ಪ್ರಯತ್ನವಾಗಿ ಕೊಡಗಿನಾದ್ಯಂತ ಜನರು ಸಂಘಟಿತರಾಗಿ ಈ ಯೋಜನೆ ಜಾರಿಗೆ ಬರದ ಹಾಗೆ ಮಾಡಿದ್ದು ಚಾರಿತ್ರಿಕವಾಗಿ ಒಕ್ಕ–ನಾಡು–ಭಾಷೆ–ಸಂಸ್ಕೃತಿ ಈ ಬುನಾದಿಗಳ ಮೇಲೆಯೇ ಎಂದರೆ ತಪ್ಪಾಗಲಾರದು. ಕೇಂದ್ರ ಹಾಗೂ ರಾಜ್ಯ ಸರಕಾರದ ವ್ಯವಸ್ಥೆಯೊಡನೆ ಕೊಡಗು ಸಂಘರ್ಷದ ಹಾದಿ ತುಳಿದದ್ದನ್ನು ಇಲ್ಲಿ ಗಮನಿಸಬಹುದು.

**ಪ್ರತ್ಯೇಕ ರಾಜ್ಯ ಚಳುವಳಿ**

ಲಿಂಗಾಯಿತ ಅರಸರ ಕಾಲದಲ್ಲಿ ಕೊಡವ ಸಮುದಾಯವು ಸಾಕಷ್ಟು ರಾಜಕೀಯ ಪ್ರಭಾವವನ್ನಿರಿಸಿಕೊಂಡಿತ್ತು. ಬ್ರಿಟಿಷ್ ಆಡಳಿತದಲ್ಲಿ ಈ ಪ್ರಭಾವವು ಮತ್ತಷ್ಟು ಗಟ್ಟಿಯಾಯಿತು. ೧೮೩೪ ರಿಂದ ೧೯೪೭ರ ಅವಧಿಯಲ್ಲಿ ಅಂದರೆ ಸುಮಾರು ಒಂದು ಶತಮಾನಕ್ಕೂ ಮೇಲ್ಪಟ್ಟು ಕೊಡಗಿನ ಆಡಳಿತ ಮತ್ತು ರಾಜಕಾರಣದಲ್ಲಿ ಕೊಡವರು ಪ್ರಭಾವಶಾಲಿಗಳಾಗಿದ್ದರು.

ಬ್ರಿಟಿಷರಿಗೆ ಕೊಡಗನ್ನು ಆಕ್ರಮಿಸಿಕೊಳ್ಳುವ ಸಂದರ್ಭದಲ್ಲಿ ಮತ್ತು ಅಮರಸುಳ್ಯ ದಂಗೆಯ ಸಮಯದಲ್ಲಿ ಕೊಡವರು ನಿರೀಕ್ಷಿಸಿದಕ್ಕಿಂತ ಹೆಚ್ಚಾಗಿಯೇ ಸಹಾಯ ಮಾಡಿದ್ದರಿಂದ ಸಹಜವಾಗಿಯೇ ಬ್ರಿಟಿಷ್ ಆಡಳಿತಕ್ಕೆ ಕೊಡವರು ಆಪ್ತರಾದರು. ಬಿಟಿಷ್ ಆಡಳಿತದಲ್ಲಿ ಕೊಡವರಿಗೆ 'ಅಸಿಸ್ಟೆಂಟ್ ಚೀಫ್ ಕಮೀಷನರ್' ಪದವಿಯು ಮೀಸಲಾಗಿತ್ತು. ಇದಲ್ಲದೆ ಅನೇಕ ಪ್ರಮುಖ ಹುದ್ದೆಗಳಲ್ಲಿ ಕೊಡವರೇ ಇದ್ದುದು ಕೊಡಗಿನ ಚರಿತ್ರೆಗಳಲ್ಲಿ ತಿಳಿಯುತ್ತದೆ. ಬ್ರಿಟಿಷ್ ಆಡಳಿತ ವ್ಯವಸ್ಥೆಯಲ್ಲಿ ಕೇವಲ ಸುಭೇದಾರರಾಗಿದ್ದ ಕೊಡವರು ನೂರಾರು ಏಕರೆ ಸರಕಾರಿ ಜಮೀನುಗಳನ್ನು ತಮ್ಮ ಒಕ್ಕಗಳಿಗೆ ಸರಕಾರಿ ಕಡತಗಳಲ್ಲಿ ತಿದ್ದುಪಡಿ ಮಾಡಿ ಕಂದಾಯ ಸಲ್ಲಿಸುವುದರೊಂದಿಗೆ ತಮ್ಮ ಸ್ವಾಧೀನಕ್ಕೆ ತೆಗೆದು ಕೊಂಡಿರುವ ಉದಾಹರಣೆಗಳೂ ಇವೆ. ಕೊಡಗಿನ 'ಚೀಫ್ ಕಮೀಷನರ್' ಹುದ್ದೆಗೆ ಏರಿದ ಕೇಟೋಳಿರ ಚಂಗಪ್ಪನವರೂ ಕೊಡವರೆ ಆಗಿದ್ದರು. ಆ ಸಮಯದಲ್ಲಿ 'ರಾವ್ ಬಹದ್ದೂರ್'ರೆಂದೂ ಪರಿಗಣಿಸಲ್ಪಟ್ಟ ಕೆಲವು ಗಣ್ಯರೂ ಕೂಡ ಕೊಡವರೆ ಆಗಿದ್ದರು. ಮಿಲಿಟರಿಯಲ್ಲಿ ಭಾರತದ ಮುಖ್ಯ ದಂಡನಾಯಕರ ಸ್ಥಾನಕ್ಕೇರಿದವರೂ ಇಬ್ಬರು ಕೊಡವರೇ ಆಗಿದ್ದರು. ಇಂಡಿಯನ ಫಾರಿನ್ ಸರ್ವಿಸನಲ್ಲಿಯೂ ಕೊಡವರೊಬ್ಬರು ಇದ್ದರು. ಇದಲ್ಲದೆ ಭಾರತ ಸೇವೆಗಳಲ್ಲಿ ದೊಡ್ಡ ಹುದ್ದೆಗಳಲ್ಲಿ ಪೋಲಿಸ ಇಲಾಖೆ, ರೆವೆನ್ಯೂ ಇಲಾಖೆಗಳು ಮುಂತಾದ ಆಯಕಟ್ಟಿನ ಹುದ್ದೆಗಳಲ್ಲಿಯೂ ಕೊಡವರಿದ್ದದು ಮುಖ್ಯವಾಗುತ್ತದೆ. ಮತ್ತು ಈ ಎಲ್ಲ ವಿದ್ಯಾಮಾನಗಳ ಪರಿಣಾಮವಾಗಿ ಕೊಡವ ಸಮುದಾಯ ಬ್ರಿಟಿಷ್ ಆಡಳಿತದಲ್ಲಿ ಪ್ರಭಾವಶಾಲಿಗಳಾಗಿದ್ದದು ಸಹಜವೇ ಆಗಿತ್ತು. ಹಾಗಾಗಿ ಕೊಡವರಿಗೆ ವಿಶೇಷ ಸವಲತ್ತುಗಳು ದೊರಕಿದವು.

೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯಬಂದು ಪ್ರಜಾಸತ್ತಾತ್ಮಕ ಸರಕಾರ ನೆಲೆಸಿತು. ಆ ಸಂದರ್ಭದಲ್ಲಿ ಕೊಡಗಿನಲ್ಲಿ 'ಕಮೀಷಾನರೇಟ್ ಪ್ರಾವಿನ್ಸ್' ಆಡಳಿತದಲ್ಲಿಯೂ ಕೊಡವರು ಹಿಡಿತ ಇಟ್ಟುಕೊಂಡಿದ್ದರು. ೧೯೫೨-೫೬ರವರೆಗೆ ಇದ್ದ ಕೊಡಗು 'ಸಿ' ರಾಜ್ಯ ವ್ಯವಸ್ಥೆಯಲ್ಲಿ ಮುಖ್ಯಮಂತ್ರಿಗಳೂ, ವಿರೋಧಪಕ್ಷದ ನಾಯಕರೂ ಕೊಡವರೇ ಆಗಿದ್ದರು. ಕೊಡಗು ಲೆಜಿಸ್ಲೇಟಿವ್ ಅಸೆಂಬ್ಲಿ ಮತ್ತು ಲೆಜಿಸ್ಲೇಟಿವ್ ಕೌನ್ಸಿಲ್‌ಗಳಲ್ಲಿ ಕೊಡವರಿಗೆ ಹೆಚ್ಚಿನ ಸ್ಥಾನಗಳಿದ್ದವು. ಹಾಗಾಗಿ ೧೯೫೬ರವರೆಗೂ ಕೊಡಗಿನ ಆಡಳಿತ ಸೂತ್ರ ಕೊಡವ ಸಮುದಾಯದ ಕೈಯಲ್ಲಿಯೇ ಇತ್ತು.

೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಕೊಡಗು ಕರ್ನಾಟಕದೊಡನೆ ವಿಲೀನವಾಯಿತು. ಹಾಗಾಗಿ ಸುಮಾರು ಒಂದು ಶತಮಾನಕ್ಕೂ ಹೆಚ್ಚು ಕೊಡಗನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಆಳಿದ ಕೊಡವ ಸಮುದಾಯಕ್ಕೆ ೧೯೫೬ರ ವಿಲೀನ ಬಹಳಷ್ಟು ಅಸಮಾಧಾನ ತಂದಿತು. ಅಂದಿನ ಮುಖ್ಯಮಂತ್ರಿಗಳಾಗಿದ್ದ ಸಿ.ಎಂ. ಪೂಣಚ್ಚನವರು "ತಮ್ಮ ಸ್ವಾರ್ಥಕ್ಕೆ ಕೊಡಗನ್ನು ಕರ್ನಾಟಕದೊಡನೆ ವಿಲೀನಗೊಳಿಸಿದರು" ಎಂಬ ಅಸಮಾಧಾನದ ಧ್ವನಿಯು ವಿಲೀನ ವಿರೋಧಿಗಳಿಗೆ ಸಹಜವಾಗಿಯೇ ಇತ್ತು. ಇದಕ್ಕೆ ವ್ಯತಿರಿಕ್ತವಾದ ಅಭಿಪ್ರಾಯಗಳೂ

ಇವೆ. ಪೂಣಚ್ಚನವರಿಗೆ ದೇಶದ ಸಮಗ್ರತೆಯ ದೃಷ್ಟಿಕೋನ ಇದ್ದುದ್ದರಿಂದ ಕೊಡಗನ್ನು ಕರ್ನಾಟಕಕ್ಕೆ ಸೇರ್ಪಡೆ ಮಾಡುವುದು ಅನಿವಾರ್ಯವಾಗಿತ್ತು. ನೆಹರೂ ನೇತೃತ್ವದ ಪ್ರಬಲವಾದ ಕಾಂಗ್ರೆಸ್ ಸರ್ಕಾರದಡಿಯಲ್ಲಿ ದೇಶದ ರಾಜಕೀಯ ಮತ್ತು ಸಮಕಾಲೀನ ವಿದ್ಯಾಮಾನಗಳು ನಿರ್ದಾಕ್ಷಿಣ್ಯವಾಗಿ ರೂಪುಗೊಳ್ಳುತ್ತಿದ್ದುದರಿಂದ ಕೊಡಗಿನಲ್ಲಿ ತಕ್ಷಣವೇ ಚಳುವಳಿ ಅಥವಾ ವಿಲೀನದ ವಿರುದ್ಧ ಬಂಡಾಯ ಏಳಲಿಲ್ಲ. ಆದರೆ ವಿಲೀನ ವಿರೋಧಿ ಭಾವನೆಗಳು ದಟ್ಟವಾಗಿತ್ತು. ೧೯೬೦-೭೦ರ ಸಂದರ್ಭದಲ್ಲಿ ಶಸ್ತ್ರಾಸ್ತ್ರಕಾಯ್ದೆ ತಿದ್ದುಪಡಿಯಾಯಿತು. ಕೊಡವರಿಗೆ(ಕೊಡಗಿನಲ್ಲಿ ಇತರ ಸಮುದಾಯಗಳಿಗೂ ಶಸ್ತ್ರಕಾಯ್ದೆಯ ವಿನಾಯಿತಿ ಇತ್ತು) ಬ್ರಿಟಿಷ್ ಆಡಳಿತದಲ್ಲಿದ್ದ ಶಸ್ತ್ರ ಪರವಾನಾಗಿ ವಿನಾಯ್ತಿಯ ಬಗ್ಗೆ ತಿದ್ದುಪಡಿ ಮಾಡಲು ಹೊರಟ ಸರಕಾರದ ವಿರುದ್ಧ ಸಹಜವಾಗಿಯೇ ಕೊಡವರು ಅಸಮಾಧಾನಗೊಂಡರು. ಇದರೊಂದಿಗೆ ಕೊಡಗಿನಲ್ಲಿ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿಲ್ಲವೆಂಬ ಕಾರಣ, ಹಾಗೂ ಕೊಡವರು ಮೀಸಲಾತಿ ಒಳಗೆ ಬರದ ಕಾರಣ ಸರಕಾರಿ ಕೆಲಸಕ್ಕೆ ಮೊದಲಿನ ಮಾದರಿಯಲ್ಲಿ ಸೇರ್ಪಡೆಯಾಗಲು ಸಾಧ್ಯವಾಗುತ್ತಿರಲಿಲ್ಲ ಎನ್ನುವ ಕಾರಣಗಳಿಂದಾಗಿ ಅಸಮಾಧಾನ ಹೊಗೆಯಾಡುತ್ತಿತ್ತು. ೧೯೮೦ರ ಅವಧಿಯಲ್ಲಿ ಅಂದರೆ ಬರಪೊಳೆ ಚಳುವಳಿಯ ಸಂದರ್ಭದಲ್ಲಿ ಬಂಡಾಯದ ಎಚ್ಚರಿಕೆಯನ್ನು ಕೊಡವ ಸಮುದಾಯ ಕೊಟ್ಟಿತ್ತು. ಆ ಸಂದರ್ಭದಲ್ಲಿ ಉಳಿದ ಕೊಡಗಿನ ಸಮುದಾಯಗಳು ಕೊಡವರೊಡನೆ ಸಾಕಷ್ಟು ಮಟ್ಟಿಗೆ ಕೈಜೋಡಿಸಿತ್ತು.

೧೯೯೦ರಲ್ಲಿ ಈ ಎಲ್ಲ ಹಿನ್ನೆಲೆ ಮತ್ತು ವಿದ್ಯಾಮಾನಗಳ ಪರಿಣಾಮವಾಗಿ ಕೊಡಗು ಏಕೀಕರಣ ರಂಗ ಎನ್ನುವ ಸಂಘಟನೆ ಅಸ್ತಿತ್ವಕ್ಕೆ ಬಂದಿತು. ಈ ಸಂಘಟನೆಗೆ ಎಲ್ಲ ಸಮುದಾಯದವರನ್ನು ಒಳಗೊಂಡು ಹೋರಾಟ ಮಾಡುವ ಆಶಯವಿತ್ತು. ಈ ಸಂದರ್ಭದಲ್ಲಿ ಮೃದು ನಿಲುವುಗಳ ಸಂಘಟನೆಗಳಿಂದ ಪ್ರಯೋಜವಿಲ್ಲ ಎಂಬ ಅಭಿಪ್ರಾಯದೊಂದಿಗೆ ಆ ಸಮಯದಲ್ಲಿ ಶ್ರೀಲಂಕಾದಲ್ಲಿ ಹಿಂಸಾತ್ಮಕ ಹಾದಿಯನ್ನು ಅನುಸರಿಸಿದ (LTTE) ಎಲ್.ಟಿ.ಟಿ.ಇನ ಧೋರಣೆಗಳನ್ನು ಹೊಂದಿದ ಲಿವಾಕ್ ಎಂಬ ಸಂಘಟನೆಯೊಂದು (ಲಿಬರೇಷನ್ ವಾರಿಯರ್ಸ್ ಆಫ್ ಕೂರ್ಗ್) ಅಸ್ತಿತ್ವಕ್ಕೆ ಬಂದಿತ್ತು. ಪ್ರತ್ಯೇಕತಾವಾದ ಇವರ ಮುಖ್ಯ ಧ್ಯೇಯವಾಗಿತ್ತು. ಈ ಸಂಘಟನೆಯನ್ನು ರೂಪಿಸಿ ಮುಂದಾಳತ್ವ ವಹಿಸಿಕೊಂಡವರು ಕೊಡವರೇ ಆಗಿದ್ದರು. ಕೆಂಬಟ್ಟಿ, ಎರವ, ಕುರುಬ ಮೊದಲಾದ ದಲಿತರು, ವೃತ್ತಿಪರ ಕುಶಲಕರ್ಮಿ ವರ್ಗಗಳು, ಕೃಷಿ ಕೇಂದ್ರಿತ ಸಮುದಾಯದವರೆಲ್ಲರನ್ನೂ ಲಿವಾಕ್ ಸಂಘಟನೆ ಒಳಗೊಂಡಿಯೆಂದು ಘೋಷಿಸಿಕೊಂಡಿತ್ತು. ಆದರೆ ತನ್ನ ಹಿಂಸಾತ್ಮಕ ನಿಲುವನ್ನು ಸಮರ್ಥಿಸಿಕೊಳ್ಳಲು ಮುಂದಾದಾಗ ಈ ಸಂಘಟನೆಯನ್ನು ಹತ್ತಿಕ್ಕಲು ಪೊಲೀಸ್ ಕಾರ್ಯಾಚರಣೆ ನಡೆಯಿತು. ಹಾಗಾಗಿ ಈ ಸಂಘಟನೆಯ ಮುಂದಾಳುಗಳು ತಮ್ಮ ಮಾರ್ಗವನ್ನು ಬದಲಿಸಿ ಜಾರ್ಖಂಡ್ ಮುಕ್ತಿ ಮೋರ್ಛಾದ ಮಾದರಿಯನ್ನು ಅನುಸರಿಸಿ ಕೊಡಗು ರಾಜ್ಯ ಮುಕ್ತಿ ಮೋರ್ಛಾ(ಕೆ.ಆರ್.ಎಂ.ಎಂ.) ಎಂಬ ಸಂಘಟನೆಯನ್ನು ರೂಪಿಸಿದರು.

ಪ್ರತ್ಯೇಕ ರಾಜ್ಯವೇ ಇದರ ಧ್ಯೇಯ ಮತ್ತು ಉದ್ದೇಶ ಆಗಿತ್ತು. ಇವರು "ಗಾಂಧಿ ಮಾರ್ಗ" ಅಥವಾ "ಅಹಿಂಸೆಯ ಚಳುವಳಿ"ಗಳನ್ನು ತಾವು ಹಮ್ಮಿಕೊಳ್ಳುತ್ತೇವೆಂದು ಘೋಷಿಸಿದರು.

ಆ ಸಂದರ್ಭದಲ್ಲಿ ಆದ ಮುಖ್ಯ ಬೆಳವಣಿಗೆ ಎಂದರೆ ಈ ಸಂಘಟನೆ 'ಕೊಡವ ಸಂಸ್ಕೃತಿ'ಗೆ ಹೆಚ್ಚು ಪ್ರಾಮುಖ್ಯತೆ ಕೊಡುವುದರೊಂದಿಗೆ ಉಳಿದ ಸಮುದಾಯಗಳಿಗೆ ಅಸಮಾಧಾನ ಉಂಟಾಗುವಂತಹ ವಿದ್ಯಮಾನಗಳು ನಡೆಯಲು ಪ್ರಾರಂಭವಾಯಿತು. ಹೀಗಾಗಿ ಈ ಸಂಘಟನೆಗೆ ವಿರುದ್ಧ ನಿಲುವಿನೊಂದಿಗೆ 'ಕೊಡಗು ಪ್ರಜಾವೇದಿಕೆ' ಎಂಬ ಸಂಘಟನೆಯು ರೂಪುಗೊಂಡಿತು. ಈ ಸಂಘಟನೆಯು ಕೊಡಗಿನ ಇತರ ಸಮುದಾಯಗಳಾದ ಹಿಂದುಳಿದ ವರ್ಗದವರು, ಅಲ್ಪಸಂಖ್ಯಾತರು ಮತ್ತು ದಲಿತರನ್ನು ಒಳಗೊಂಡಿತ್ತು. ಕೆ.ಆರ್.ಎಂ.ಎಂ. ಕೊಡವರ ಹಿತಾಸಕ್ತಿಗಳನ್ನು ಮಾತ್ರ ಕಾಪಾಡಲು ಯತ್ನಿಸುತ್ತಿದೆ ಎಂಬುದಾಗಿ ಕೊಡಗು ಪ್ರಜಾವೇದಿಕೆ ಆರೋಪಿಸಿತು. ಪ್ರತ್ಯೇಕ ರಾಜ್ಯ ಚಳುವಳಿ ಉಳಿದ ಸಮುದಾಯಗಳಿಗೆ ಉಪಯೋಗವಾಗುವುದಿಲ್ಲ ಎಂದು ಕೊಡಗು ಪ್ರಜಾವೇದಿಕೆ ಕರೆಕೊಟ್ಟಿತು. ಕೆ.ಆರ್.ಎಂ.ಎಂ.ನ ಪ್ರತ್ಯೇಕ ರಾಜ್ಯ ಬೇಡಿಕೆಗೆ ಕೊಡಗಿನ ಸಮಸ್ತ ಸಮುದಾಯಗಳ ಪ್ರೋತ್ಸಾಹ ಇಲ್ಲದ್ದರಿಂದ ಈ ಸಂಘಟನೆಯು ತನ್ನ ಚಟುವಟಿಕೆಗಳನ್ನು ಕೊನೆಗೊಳಿಸಿತು. ಆದರೆ ಇದರ ಮುಖಂಡರು ೨೦೦೦ರ ಹೊತ್ತಿಗೆ 'ಕೂರ್ಗ್ ನ್ಯಾಷನಲ್ ಕೌನ್ಸಿಲ್'(ಸಿ.ಎನ್.ಸಿ.) ಎಂಬ ಮತ್ತೊಂದು ಸಂಘಟನೆಯನ್ನು ಹುಟ್ಟು ಹಾಕಿದರು. ಈ ಸಂದರ್ಭದಲ್ಲಿ ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಈ ಸಂಘಟನೆ ತ್ಯಜಿಸಿತು. ಆದರೆ ಕೊಡವ ಸಂಸ್ಕೃತಿ, ಭಾಷೆ ಮೊದಲಾದವುಗಳನ್ನು ರಕ್ಷಿಸುವ ಮತ್ತು ಪೋಷಿಸುವ ದೃಷ್ಟಿಯಿಂದ ಕೊಡವ ಸಮುದಾಯಕ್ಕೆ ಸ್ವಾಯತ್ತತೆ ಕಲ್ಪಿಸಬೇಕೆಂದು ಕೇಂದ್ರ ಸರಕಾರಕ್ಕೆ ಮನವಿಮಾಡಿತು. ಗೂರ್ಖಲ್ಯಾಂಡ್ ಮಾದರಿಯಲ್ಲಿ "ಕೊಡವ ಲ್ಯಾಂಡ್" ಎಂದು ಕೊಡಗನ್ನು ಘೋಷಿಸಬೇಕು ಮತ್ತು ಕೊಡವ ಭಾಷೆ, ಸಂಸ್ಕೃತಿ ಆಚಾರ ವಿಚಾರಗಳನ್ನು ಕೇಂದ್ರ ಸರಕಾರ ರಕ್ಷಿಸಲು ಕ್ರಮಕೈಗೊಳ್ಳಬೇಕು ಮತ್ತು ಕೊಡವರನ್ನು 'ಸ್ಪೆಷಲ್ ರೇಸ್' ಎಂದು ಘೋಷಿಸಬೇಕೆಂದು ಸರಕಾರವನ್ನು ಒತ್ತಾಯಿಸುತ್ತಿರುವುದನ್ನು ಕಾಣಬಹುದು (ತಂಬಂಡ, ೨೦೦೪:೩).

"ಕೊಡಗೆಂದರೆ ಕೊಡವರು, ಕೊಡವರೆಂದರೆ ಕೊಡಗು" ಎನ್ನುವ ರೀತಿಯ ಸಿ.ಎನ್.ಸಿ.ಯ ಧೋರಣೆಗೆ ಕೊಡವರಲ್ಲಿನ ಕೆಲವರು ಬಿಟ್ಟರೆ ಬಹುತೇಕವಾಗಿ ಉಳಿದವರ ಅನುಮೋದನೆ ಇದಕ್ಕೆ ಕಂಡುಬರುತ್ತಿಲ್ಲ. ನಾಡು-ನುಡಿ ಎಂಬ ಪ್ರಶ್ನೆಗಳು ಈ ಸಂದರ್ಭದಲ್ಲಿ ಕೇವಲ ಬಲಿಷ್ಠ ಸಮುದಾಯವೊಂದಕ್ಕೆ ಮಾತ್ರ ಸಮೀಕರಣಗೊಳ್ಳುತ್ತಿರುವ ಪ್ರಕ್ರಿಯೆಯನ್ನು ಇಲ್ಲಿ ನಾವು ನೋಡಬಹುದು. ಉಳಿದ ಸಮುದಾಯಗಳು ಜಾಗ್ರತರಾಗಿ ತಮ್ಮ ಅನನ್ಯತೆಯನ್ನು ಸಾರಲು ಪ್ರಯತ್ನಿಸುತ್ತಿರುವುದನ್ನು ಕಾಣಬಹುದಾಗಿದೆ. ಕೊಡಗು-ನಾಡು-ನುಡಿ ಪ್ರಶ್ನೆಗಳು ಈ ಸಂದರ್ಭದಲ್ಲಿ ಬಲಹೀನಗೊಳ್ಳುತ್ತಿರುವುದನ್ನು ಕಾಣಬಹುದು.

### ೪.೧.೨. ಕೊಡಗು ಭಾಷೆ (ನುಡಿ)

ಕೊಡಗು ಭಾಷೆ ಕೊಡಗಿನ ಪ್ರಧಾನವಾದ ಭಾಷೆ. ಕೊಡಗಿನ ಬಹುತೇಕ ಕೃಷಿ ಸಮುದಾಯಗಳ ಜನರು ಆಡುವ ನಾಡು ಭಾಷೆ. ಆದರೆ "ಕೊಡಗು" ಭಾಷೆಯನ್ನು 'ಕೊಡವ ಭಾಷೆ' ಎಂದು ಸಾರ್ವತ್ರಿಕವಾಗಿ ಜನರು ಕರೆಯುತ್ತಿರುವುದರಿಂದ ಪ್ರಸ್ತುತ ಮಹಾಪ್ರಬಂಧದಲ್ಲಿ ಕೊಡಗು ಭಾಷೆಯನ್ನು ಕೊಡವ ಭಾಷೆ ಎಂದೇ ಬಳಸಲಾಗಿದೆ.

ಕೊಡಗು ಭಾಷೆ ದ್ರಾವಿಡ ಭಾಷಾ ಪಂಗಡಕ್ಕೆ ಸೇರಿದೆ. ಈ ಭಾಷೆಗೆ ಲಿಪಿಯಿಲ್ಲ. ಲಿಖಿತ ರೂಪಗಳಿಲ್ಲದುದರಿಂದ ಈ ಭಾಷೆಯ ಸ್ವರೂಪವನ್ನರಿಯಲು ಸುಲಭ ಸಾಧ್ಯವಿಲ್ಲ. ಈಗಿರುವ ಕೊಡವ ಭಾಷೆಯಲ್ಲಿ ೩೩ ಕೊಡಗು ವರ್ಣಮಾಲೆ ಈ ಕೆಳಗಿನಂತಿದೆ.

ಅ ಇ ಉ ಎ ಒ

ಆ ಈ ಊ ಏ ಓ

ಕ ಗ ಙ

ಚ ಜ ಞ

ಟ ಡ ಣ

ತ ದ ನ

ಪ ಬ ಮ

ಯ ರ ಲ ವ ಶ ಷ ಸ ಹ ಳ.

ಕೊಡಗು ಭಾಷೆಯಲ್ಲಿ ಮಹಾಪ್ರಾಣಾಕ್ಷರಗಳಿಲ್ಲ. ಕೊಡವ ಭಾಷೆಯ ಮೇಲೆ ಕನ್ನಡ, ತುಳು, ಮಲಯಾಳಂ ಮೊದಲಾದ ಭಾಷೆಗಳು ಪ್ರಭಾವ ಬೀರಿವೆ. ಕೊಡಗು ಭಾಷೆ ಬೇರೆ ಬೇರೆ ಭಾಷೆಯ ಪದಗಳನ್ನು ಹೊಂದಿಸಿಕೊಂಡು ರೂಪ ಪಡೆದಂತೆ ಕಾಣುತ್ತದೆ. ಮೊದಲು ಕಾಲ್ಡ್‌ವೆಲ್, ಗ್ರೇಯಿಟರ್ ಮೊದಲಾದವರು 'ಕೊಡವ ಭಾಷೆ'ಯನ್ನು ಅಧ್ಯಯನ ಮಾಡಿದ ಮೊದಲಿಗರು(ತಂಬಂಡ, ೨೦೦೫).

ಕೊಡಗು ಭಾಷೆಯ ವೈಲಕ್ಷಣಗಳನ್ನು ಅವಲೋಕಿಸಿದರೆ ಕೊಡಗು ಭಾಷೆಯ ಪದಗಳ ಪದಾದಿಯಲ್ಲಿ ಸಂಯುಕ್ತ ವ್ಯಂಜನಗಳು ಕಾಣುವುದಿಲ್ಲ. ಅನ್ಯಭಾಷೆಯಿಂದ ಬಂದ ಪದಗಳಲ್ಲಿ ಮಾತ್ರ ಪದಾದಿ ಸಂಯುಕ್ತ ವ್ಯಂಜನಗಳು ಕಾಣಬರುತ್ತವೆ. ಉದಾಹರಣೆಗೆ ತ್ರಿವೇಣಿ, ತ್ಯಾಗ, ದ್ವೇಷ ಇತ್ಯಾದಿ.

ಭಾಷಾ ದೃಷ್ಟಿಯಿಂದ ಕೊಡವ ಭಾಷೆ ತಮಿಳು, ಮಲಯಾಳಂಗಳಿಗೆ ಹೆಚ್ಚು ಸಮೀಪವಿದೆ. ಆದರೆ ಕರ್ನಾಟಕದಲ್ಲಿ ಭಾಷಾ ವ್ಯವಹಾರ ಕನ್ನಡದ ಮೂಲಕವೇ ನಡೆಯಬೇಕಾಗಿರುವುದರಿಂದಲೂ,

ಭೌಗೋಳಿಕವಾಗಿಯೂ ಕನ್ನಡ ಪ್ರದೇಶ ಕೊಡಗನ್ನು ಸುತ್ತುವರಿದಿರುವುದರಿಂದಲೂ ಕೊಡಗು ಭಾಷೆಯ ಮೇಲೆ ಕನ್ನಡದ ಪ್ರಭಾವ ಸಾಕಷ್ಟು ಆಗಿದೆ.

ಈಗಿನ ಕೊಡಗು ಭಾಷೆಯಲ್ಲಿ ಪಾರ್ಸೀ, ಅರಬ್ಬೀ, ಉರ್ದು ಪದಗಳು ಸೇರ್ಪಡೆಯಾಗಿ ದಿನಬಳಕೆಯಲ್ಲಿವೆ. ಉದಾ: ಹುಕುಂ, ಹಜಾಮ, ಹುಷಾರು ಇತ್ಯಾದಿ. ಇತ್ತೀಚೆಗೆ ಇಂಗ್ಲೀಷ್ ಶಬ್ದಗಳ ಬಳಕೆ ತೀವ್ರವಾಗಿರುವುದನ್ನು ಗಮನಿಸಬಹುದು.

**ನುಡಿಯ ಅಭಿವ್ಯಕ್ತಿಯಾಗಿ ಒಕ್ಕ**

ಕಿಗ್ಗಟ್ಟು ನಾಡಿನ(ದಕ್ಷಿಣ ಕೊಡಗಿನ) ಜನರು ಮಾತನಾಡುವ ಭಾಷೆಗೂ, ಮೇಂದಲೆ ನಾಡಿನ(ವಾಯುವ್ಯ ಕೊಡಗಿನ) ಜನರು ಮಾತಾಡುವ ಭಾಷೆಗೂ ಹೇಗೆ ಸಾಕಷ್ಟು ವ್ಯತ್ಯಾಸಗಳು ಕಂಡುಬರುತ್ತವೆಯೋ ಹಾಗೆಯೇ ಪ್ರತಿ ಊರಿನ ಜನರು ಮಾತನಾಡುವ ಭಾಷೆ ಭಿನ್ನವಾಗಿರುತ್ತದೆ. ಹಾಗೆಯೇ ಪ್ರತಿ ಒಕ್ಕದಲ್ಲೂ ಕೂಡಾ ಭಾಷೆಯ ಶೈಲಿ ಅವರವರ ಒಕ್ಕದ ಸಂಸ್ಕೃತಿಯ ಆಧಾರದ ಮೇಲೆ ಅನಾವರಣಗೊಳ್ಳುತ್ತದೆ. ಒಂದೇ ಊರಿನ ಅಕ್ಕಪಕ್ಕದ ಬೇರೆ ಬೇರೆ ಒಕ್ಕಗಳ ಭಾಷೆಗಳ ಬಳಕೆ, ಧ್ವನಗಳ ಏರಿಳಿತ ಭಿನ್ನವಾಗಿರುವುದು ಕ್ಷೇತ್ರಕಾರ್ಯದಿಂದ ಗಮನಕ್ಕೆ ಬಂದ ವಿಚಾರ. 'ಬಂದಿರಾ ಬೆಂದ್‌ಕಳೇ' ಎಂದು ಅತಿಥಿಗಳನ್ನು ಸ್ವಾಗತಿಸುವ ರೀತಿಯಲ್ಲಿ ಎರಡು ಮನೆತನಗಳ ಅಭಿವ್ಯಕ್ತಿ ಬೇರೆ ಬೇರೆಯಾಗಿರುತ್ತದೆ. ಪ್ರಾದೇಶಿಕವಾಗಿ ಮೇಂದಲೆ ನಾಡಿನಲ್ಲಿ ಭಾಷೆ ಸುಲಲಿತವಾಗಿ ಕಂಡುಬಂದರೆ, ಕಿಗ್ಗಟ್ಟು ನಾಡಿನಲ್ಲಿ ಭಾಷೆ ಗಡುಸಾಗಿರುವುದನ್ನು ಕಾಣಬಹುದು. ಉದಾಹರಣೆಗೆ ಮೇಂದಲೆಯಲ್ಲಿ 'ಬಪ್ಪಿ'(ಬರುತ್ತೇನೆ) ಎನ್ನುವ ಪದ ಕಿಗ್ಗಟ್ಟು ನಾಡಿನಲ್ಲಿ 'ಬಪ್ಪಳೆ' ಆಗುತ್ತದೆ. ಈಗ ಇಂತಹ ಭಾಷಾಪ್ರಯೋಗ ಕಡಿಮೆಯಾಗಿದೆ. ಕೆಲವೊಮ್ಮೆ ಈ ಎರಡು ನಾಡುಗಳ ಭಾಷೆಗಳ ಬಳಕೆಗಳಲ್ಲಿ 'ಪ'ಕಾರ 'ಹ'ಕಾರಗಳ ಬಳಕೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಉದಾಹರಣೆಗೆ ಮೇಂದಲೆಯಲ್ಲಿ 'ಪೋಪಿ'(ಹೋಗುತ್ತೇನೆ) ಎನ್ನುವುದು ಕಿಗ್ಗಟ್ಟು ನಾಡಿನಲ್ಲಿ 'ಹೋಪಳೆ' ಆಗುತ್ತದೆ. ಹೀಗೆಯೇ ಪ್ರತಿ ಊರುಗಳ ಹಾಗೂ ಒಕ್ಕಗಳ ಭಾಷಾಭಿವ್ಯಕ್ತಿಯಲ್ಲಿ ವ್ಯತ್ಯಾಸ ಉಂಟಾಗುವುದನ್ನು ಗಮನಿಸಬಹುದು. ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಬಲಿಷ್ಠರಾದವರು ಮಾತಾಡುವ ಕೊಡವ ಭಾಷೆಗೂ, ಆರ್ಥಿಕ ಸದೃಢತೆಯಿಲ್ಲದ ಜನರ ಭಾಷೆಗೂ ವ್ಯತ್ಯಾಸ ಕಂಡುಬರುತ್ತದೆ. ನಾಲ್ಕು ನಾಡಿನವರು ಬಳಸುವ ಭಾಷೆಯ ಶೈಲಿಗೂ, ಕಡಿಯತ್ತು ನಾಡಿನವರು ಬಳಸುವ ಭಾಷೆಯ ಶೈಲಿಗೂ ವ್ಯತ್ಯಾಸ ಕಾಣಬಹುದು.

ಭಾಷೆಯಲ್ಲಿ ಪ್ರಾದೇಶಿಕ ವ್ಯತ್ಯಾಸಗಳು ಇರುವಂತೆ ಒಕ್ಕಗಳ ಭಾಷೆಯಲ್ಲಿಯೂ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಭಾಷಾಭಿವ್ಯಕ್ತಿಯ ಶೈಲಿ(Style) ಒಕ್ಕದಿಂದ ಒಕ್ಕಕ್ಕೆ ಭಿನ್ನವಾಗಿ ಬಳಕೆಗೊಳ್ಳುವುದು ಸ್ಪಷ್ಟವಾಗಿ ಕಾಣುತ್ತದೆ. ಭಾಷಾಭಿವ್ಯಕ್ತಿಯ ವ್ಯತ್ಯಯಗಳಿಗೆ ಒಕ್ಕ ಸಂಸ್ಕೃತಿಯೇ ಕಾರಣವಿರಬಹುದಾದರೂ ಇದಕ್ಕೆ ಒಕ್ಕದ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಮೊದಲಾದ ಇತರ ಅಂಶಗಳೂ ಕಾರಣವಾಗಬಲ್ಲವು.

ಹಾಗೆಯೇ ಪ್ರತಿ ಊರುಗಳ ಹಾಗೂ ಒಕ್ಕ ಭಾಷೆಯ ಅಭಿವ್ಯಕ್ತಿ ವ್ಯತ್ಯಾಸಗಳಿಗೆ ಆರ್ಥಿಕ ಹಾಗೂ ಶೈಕ್ಷಣಿಕ ಅಂಶಗಳು ಕೂಡ ಬಹಳ ಪ್ರಧಾನವಾಗಿ ಕೆಲಸ ಮಾಡುತ್ತವೆ. ಆರ್ಥಿಕ ಹಾಗೂ ಶೈಕ್ಷಣಿಕ ಸುಧಾರಣೆ ಭಾಷೆಯ ನಾವೀನ್ಯ ಪ್ರಯೋಗಕ್ಕೆ ಹೇತುವಾದರೆ ಆರ್ಥಿಕ ಹಾಗೂ ಶೈಕ್ಷಣಿಕ ಸದೃಢತೆಯಿಲ್ಲದ ಒಕ್ಕಗಳಲ್ಲಿ ಭಾಷಾನಾವೀನ್ಯತೆ ಕಂಡುಬರುವುದಿಲ್ಲ.

**ಅಪ್ಪಚ್ಚ** ಕವಿ ಕೊಡವ ಭಾಷೆಯ ಆದಿ ಕವಿ. ಕೊಡಗಿನ ಜನಜೀವನದ ಮೇಲೆ ಗಾಢವಾದ ಪ್ರಭಾವ ಬೀರಿದ ಕೊಡವ ಭಾಷೆಯ ಮೊದಲ ಕವಿ ಹರದಾಸ ಅಪ್ಪಚ್ಚ. ಮಹಾಕವಿಯೊಬ್ಬನ ಚಿಂತನೆಗಳು ಕೊಡವ ಭಾಷೆಯಲ್ಲಿ ಮೊದಲು ಕಂಡದ್ದು ಹರದಾಸ ಅಪ್ಪಚ್ಚನೆಂಬ ನಾಟಕ ರಚನಕಾರನ ನಾಟಕಗಳ ಮೂಲಕ. ಇವರ ಕಾವೇರಿ ನಾಟಕ, ಯಯಾತಿ ರಾಜ ನಾಟಕ, ಸಾವಿತ್ರಿ ನಾಟಕ, ಸುಬ್ರಹ್ಮಣ್ಯ ನಾಟಕಗಳು ಕೊಡಗಿನಲ್ಲಿ ಜನಪ್ರಿಯ ನಾಟಕಗಳಾಗಿ ಇಂದಿಗೂ ಉಳಿದುಬಂದಿವೆ. ಕೊಡಗು ಭಾಷೆಗೆ ತನ್ನದೇ ಆದ ಸತ್ವವಿದೆ ಎಂಬುದನ್ನು ಮನಗಾಣಿಸಿದುದೇ ಅಪ್ಪಚ್ಚ ಕವಿ. ತನ್ನ ನಾಟಕಗಳ ಮೂಲಕ ಕೊಡವ ಭಾಷೆಗೆ ಜೀವಂತಿಕೆಯನ್ನು ತುಂಬಿದ ಈ ಕವಿ ಕೊಡವ ಸಾಹಿತ್ಯಕ್ಕೆ ಭದ್ರವಾದ ತಳಹದಿಯನ್ನು ಹಾಕಿದರು. ತನ್ನ ನಾಟಕಗಳ ಮೂಲಕ ಜೀವನ ಸಂದೇಶಗಳನ್ನು ಅಪ್ಪಚ್ಚ ಕವಿ ನೀಡುವ ಬಗೆ ಮಾತ್ರ ಮನೋಜ್ಞವಾಗಿರುತ್ತದೆ.

ತಾಮನೆ ಮರೆಯತೆ ಬಾಮನೆ ಪಳೆಯತೆ
ನೆರೆಮನೆಕ್ ನೀ ಪೋಕತೆ
ಅಪ್ಪಂಗು ಅವ್ವಂಗು ಮಾಂವಂಗು, ಮಾಂವಿಕು
ಬಗ್ಗಿ ನಡಪಾನ ಮರೆಯತೆ

ಎನ್ನುವ ಮಾತುಗಳು ಹೆಣ್ಣುಮಗಳೊಬ್ಬಳು ತವರುಮನೆ ಹಾಗೂ ಗಂಡನ ಮನೆಯ ಸೇತುವೆಯಾಗಿ ಅಪ್ಪ, ಅಮ್ಮ, ಅತ್ತೆ, ಮಾವನನ್ನು ಗೌರವಿಸುತ್ತಾ ಬಾಳಬೇಕೆಂಬ ಜೀವನ ಸಂದೇಶಗಳು ಮನದಾಳದಲ್ಲಿ ನೆಲೆನಿಂತು ಎಚ್ಚರಿಸುತ್ತಲೇ ಇರುತ್ತದೆ.

ನಿಂದಿಯೇ ನಾನ್ । ಬಂದಿಯಾ ಪಂದಿ ॥
ಡಿಂದ್ ನಿನ್ನಲೊ । ಕೊಂದಿತೇ ಪೋಪಿ ॥
ಚೊಕ್ಕ್‌ನ ಪಂದಿ । ಚೊಕ್ಕಡಕ್ಕುವಿ ॥
ತಿಕ್ಕಿ ಬೆಚ್ಚಿಯೇ । ದುಕ್ಕಡ ಕತ್ತಿ ॥
ಬಾಳ್‌ಲ್ ನೀಡ । ಬೋಳೆ ಕೆತ್ತಿತ್ ॥
ಕೇಳಿ ಕೇಪಿನಾ । ಕಾಳೆ ಪಂದಿಯೇ ॥

ಎನ್ನುವ ಸಾಲುಗಳಲ್ಲಿ ಕವಿಯು ಭಾಷೆಯನ್ನು ಬಳಸಿದ ನಾವಿನ್ಯತೆನ್ನು ಗಮನಿಸಬಹುದು. ಕೊಡವ ಭಾಷೆಯನ್ನು ಸಮೃದ್ಧವಾಗಿ ದುಡಿಸಿಕೊಂಡವರು ಅಪ್ಪಚ್ಚ ಕವಿ. ೧೮೬೮ ಜನಿಸಿದ ಇವರು ತನ್ನ ನಾಲ್ಕು ನಾಟಕಗಳ ಮೂಲಕ ಅಂದಿನ ಸಾಮಾಜಿಕ ಚಿತ್ರಣವನ್ನು ಕಟ್ಟಿಕೊಟ್ಟರು.

ಅಪ್ಪಚ್ಚ ಕವಿಯು ಹುಟ್ಟಿದ ಕಾಲಕ್ಕಾಗಲೇ ಅಂದರೆ ೧೮೬೯ರಲ್ಲಿ ಗ್ರೆಯಿಟರ್ ಎಂಬ ಬ್ರಿಟಿಷ್ ಆಡಳಿತಗಾರನ 'ಕೊಡಗು ದೇಶದ ವರ್ಣನೆ' ಎನ್ನುವ ಕನ್ನಡ ಪುಸ್ತಕದಲ್ಲಿ ರಾಣಿ ಪಾಟ್ ಮತ್ತು 'ಪುತ್ತರಿಪಾಟ್' ಎಂಬ ಎರಡು ಹಾಡುಗಳನ್ನು ಸಂಗ್ರಹಿಸಿದ್ದರೆಂದು ತಿಳಿದುಬರುತ್ತದೆ. ವಿಕ್ಟೋರಿಯಾ ರಾಣಿಯ ಕುರಿತು 'ರಾಣಿರ ಪಾಟ್' ರಚನೆಯಾಗಿರುತ್ತದೆ ಮತ್ತು 'ಹುತ್ತರಿ ಹಾಡು' ಕೊಡಗಿನ ಮಣ್ಣಿನ ಸಂಸ್ಕೃತಿಯನ್ನೊಳಗೊಂಡ ಹಾಡು. ಹಾಗಾಗಿ ಈ ಸಂಗ್ರಹಗಳು ಭಾಷೆಯ ದೃಷ್ಟಿಯಿಂದ ಮುಖ್ಯವಾಗುತ್ತದೆ. ಅದಕ್ಕೂ ಮುನ್ನ ಅಂದರೆ ೧೮೭೭ರಲ್ಲಿ ಗ್ರೋವರ್ ಎಂಬ ವಿದ್ವಾಂಸರು 'ಇಂಡಿಯನ್ ಆ್ಯಂಟಿಕ್ವೆರಿ'ಯಲ್ಲಿ ಕನ್ನಡ-ಬಡಗ-ಕೊಡಗು ಭಾಷೆಗಳಿಗೆ ಸಂಬಂಧಿಸಿದ ಜನಪದ ಗೀತೆಗಳನ್ನು ಸಂಗ್ರಹಿಸಿದರು ಎಂದು ವಿಜಯ್ ಪೂಣಚ್ಚ ತಂಬಂಡ ಅವರು ದಾಖಲಿಸುತ್ತಾರೆ(ತಂಬಂಡ, ೨೦೦೫:VII)

೧೯೨೪ರಲ್ಲಿ ನಡಿಕೇರಿಯಂಡ ಚಿಣ್ಣಪ್ಪನವರು ಕೊಡಗಿನ ಚರಿತ್ರೆ, ಸಂಸ್ಕೃತಿ, ಸಂಪ್ರದಾಯಗಳು, ಜನಪದ ಹಾಡುಗಳಾದ ಬಾಳೊಪಾಟ್‌ಗಳು, ಗಾದೆಗಳು ಮತ್ತು ಜಾತಿಪದ್ಧತಿಗಳನ್ನು ಒಳಗೊಂಡ ಸಂಕೀರ್ಣವಾದ ಕೃತಿಯನ್ನು ರಚಿಸುತ್ತಾರೆ. ಕೊಡವ ಭಾಷೆಯ ದೃಷ್ಟಿಯಿಂದ ಅಥವಾ ನಾಡು ನುಡಿಯ ದೃಷ್ಟಿಯಿಂದ ಇದು ಮಹತ್ವದ ಕೃತಿಯಾಗುತ್ತದೆ. ಆಧುನಿಕ ಸಂದರ್ಭದಲ್ಲಿ ಸಂಪ್ರದಾಯ-ಪದ್ಧತಿಗಳು(ಕೊಡಗು ಸಂಸ್ಕೃತಿಗೆ ಸಂಬಂಧಿಸಿದಂತೆ) ಸಡಿಲವಾಗುತ್ತಿರುವ ಸಂದರ್ಭದಲ್ಲಿ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ'ಯು ಮುಖ್ಯ ಕೃತಿಯಾಗುತ್ತದೆ. ಚಿಣ್ಣಪ್ಪನವರು ತಳೆದ ಕೆಲವು ನಿಲುವುಗಳು ಅಂದಿನ ಸಾಮಾಜಿಕ ಮತ್ತು ರಾಜಕೀಯ ಅನಿವಾರ್ಯತೆಗಳಾಗಿದ್ದವು. ಅದು ಚಿಣ್ಣಪ್ಪನವರ ನಿಲುವು ಎಂದು ಪರಿಗಣಿಸಲಾಗದಿದ್ದರೂ ನಾಡು ನುಡಿಯ ಸಮತೋಲನತೆಯ ದೃಷ್ಟಿಯಿಂದ ಸೂಕ್ಷ್ಮತೆಯನ್ನು ಕಾಪಾಡಲು ವಿಫಲವಾಯಿತು ಎನ್ನುವುದನ್ನು ವಿಜಯ ಪೂಣಚ್ಚ ತಂಬಂಡ ಅವರ ಈ ಕೆಳಗಿನ ಅಭಿಪ್ರಾಯಗಳಿಂದ ತಿಳಿದುಕೊಳ್ಳಬಹುದು.

> ಕೊಡಗಿನ ಸಂಸ್ಕೃತಿಯ ಹಾಗೂ ಜನಪದ ಇತಿಹಾಸದ ಕುರಿತು ಪಟ್ಟೋಲೆ ಪಳಮೆ ಪ್ರಕಟವಾಗುವವರೆಗೂ ದೇಶೀಯನೊಬ್ಬನ ಮೂಲಕ ಕೊಡಗಿನ ಬಗ್ಗೆ ಮಾಹಿತಿ ದೊರಕಿರಲಿಲ್ಲ. ಈಗಾಗಲೇ ಹೇಳಿದಂತೆ ಕೊಡಗಿನ ೧೭ ಸಮುದಾಯಗಳಿಗೆ ಸಂಬಂಧಿಸಿದ ಪದ್ಧತಿ, ಪರಂಪರೆ, ಜನಪದ ಗೀತೆಗಳ ಸಂಗ್ರಹವನ್ನು ಪಟ್ಟೋಲೆ ಪಳಮೆಯ ಹೆಸರಿನಲ್ಲಿ ದಾಖಲು ಮಾಡಲಾಗಿದ್ದರೂ ಕ್ರಮೇಣ ಅದು ಕೊಡಗಿನ ಪ್ರಬಲ ಸಮುದಾಯವಾದ ಕೊಡವ ಜಾತಿಯ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿ ಮಾರ್ಪಾಡಾಯಿತು. ಹೀಗೆ ವೈದಿಕ ಸಂಸ್ಕೃತಿಗೆ ಪರ್ಯಾಯವಾಗಿದ್ದ ಬುಡಕಟ್ಟು ಸಮುದಾಯಗಳ ಜನಪದ ಸಂಸ್ಕೃತಿಯು ಅವುಗಳಲ್ಲಿ ಪ್ರಬಲವಾದ ಒಂದು ಬುಡಕಟ್ಟಿನ ಹೆಸರಿನೊಂದಿಗೆ ಸಮೀಕರಿಸಲ್ಪಟ್ಟಿತು. ಈ ರೀತಿ ಕೊಡವ ಸಂಸ್ಕೃತಿ ಎಂದರೆ ಕೊಡವ ಭಾಷೆಯನ್ನು ಮಾತನಾಡುವ ಜನಗಳ ಸಂಸ್ಕೃತಿ ಎನ್ನುವ ಮೊದಲಿನ ಮೂಲ ನಿಲುವು ಸಂಕುಚಿತಗೊಳ್ಳುತ್ತ, ಕೊಡವ ಭಾಷೆಯನ್ನು ಮಾತನಾಡುವ ಬಹುತೇಕ ಬುಡಕಟ್ಟುಗಳನ್ನೇ ಹೊರಗಿಡುತ್ತದೆ. ಈ ಪ್ರಕ್ರಿಯೆಯ ತಾರ್ಕಿಕ ಅಂತ್ಯವೆಂದರೆ ಕೊಡಗಿನ ಹಲವು ಬುಡಕಟ್ಟುಗಳಲ್ಲಿ ಒಂದು ಬುಡಕಟ್ಟಾದ "ಕೊಡವರ"

> ಸಂಸ್ಕೃತಿಯೇ ಕೊಡವ ಸಂಸ್ಕೃತಿಯು ಎಂದಾಗುತ್ತದೆ. ಕೊಡಗಿನಲ್ಲಿ ಲಾಗಾಯ್ತಿನಿಂದ ಭೂಹಿಡುವಳಿಗಳನ್ನುಳ್ಳ ಕೊಡವ ಭಾಷೆಯನ್ನು ಮಾತನಾಡದವರ ಜನಸಂಖ್ಯೆ ಬಹಳಷ್ಟಿವೆ. ಕೊಡಗಿನ ಮಣ್ಣಿನ ಭಾಷೆಯಾದ  ಎರವ, ಕುಡಿಯ ಮತ್ತು ಅರೆಭಾಷೆಗಳನ್ನು ಮಾತನಾಡುವ ಲಕ್ಷಾಂತರ ಮಂದಿ ಈ ವರ್ಗಕ್ಕೆ ಸೇರುತ್ತಾರೆ. ಆದರೆ ಕೊಡವ ಸಂಸ್ಕೃತಿ ಎಂದರೆ ಕೊಡವ ಭಾಷೆಯನ್ನು ಮಾತನಾಡುವವರ ಸಂಸ್ಕೃತಿ ಎನ್ನುವ ಸಮೀಕರಣದಲ್ಲಿ ಇವರೆಲ್ಲಾ ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ದುರ್ಬಲಗೊಂಡಿದ್ದಾರೆ. ಭೂಹಿಡುವಳಿಯನ್ನು ಸಾಮಾನ್ಯವಾಗಿ ಹೊಂದದ ಕೆಂಬಟ್ಟಿಯವರ ರೀತಿ–ರಿವಾಜುಗಳು ಹುಟ್ಟು ಸಾವಿಗೆ ಸಂಬಂಧಿಸಿದ ಜನಪದ ಗೀತೆಗಳು ಪಟ್ಟೋಲೆ ಪಳಮೆಯಲ್ಲಿ ದಾಖಲಾಗಿದ್ದರೂ ಅವುಗಳೊಂದಿಗೆ ಕೆಂಬಟ್ಟಿ ಸಮುದಾಯಕ್ಕಿದ್ದ ಸಂಬಂಧಗಳನ್ನು ನಿರ್ಲಕ್ಷಿಸಲಾಯಿತು. ಹೀಗಾಗಿ ವೈದಿಕ ಸಮಾಜದ ರೀತಿ–ನಿಯಮಗಳಿಗೆ ಪರ್ಯಾಯವೆಂದು ಕಂಡುಕೊಂಡ ಪಟ್ಟೋಲೆ ಪಳಮೆಯಂಥ ಕೃತಿಗಳು ಜನರ ಜನಪದವಾಗಿ ಒಂದೇ ಒಂದು ಸಮುದಾಯದ ಜೊತೆಗೆ ಸಮೀಕರಿಸಿಕೊಂಡಿತ್ತು. ಒಂದು ಹಂತದವರೆಗೆ ಕೊಡಗಿನ ಜನರ ಸಾಂಸ್ಕೃತಿಕ ಇತಿಹಾಸವನ್ನು ದಾಖಲಿಸುವಲ್ಲಿ ಪಟ್ಟೋಲೆ ಪಳಮೆ ಸಫಲವಾದರೂ ನಡಿಕೇರಿಯಂಡ ಚಿಣ್ಣಪ್ಪನವರು ಕೊಡಗಿನ ದುರ್ಬಲ ಜಾತಿಗಳ ಹಿನ್ನೆಲೆಯ ಮೂಲನಿವಾಸಿ ಸಮುದಾಯಗಳನ್ನು ನಿರ್ಲಕ್ಷಿಸಿರುವುದು ಕಂಡುಬರುತ್ತದೆ (ತಂಬಂಡ, ೨೦೦೪:೪೬–೪೭).

ಕೊಡವ ಭಾಷೆ ಅಥವಾ ಕೊಡಗು ಭಾಷೆಯನ್ನು ಕೊಡಗಿನ ಕೃಷಿಕೇಂದ್ರಿಯ ಸಮುದಾಯವಾದ ಕೊಡವರು, ಹೆಗ್ಗಡೆ, ಅಮ್ಮಕೊಡವ, ಕೊಡವ ನಾಯರ್‌ಗಳು ಮತ್ತು ಕುಶಲಕರ್ಮಿವರ್ಗವಾದ ಐರಿ, ಗೊಲ್ಲ, ಕೊಲ್ಲ, ಕೋಯವ, ಕೋಲಯ, ಬಣ್ಣ, ಮಲಯ, ಕುಡಿಯ, ಮಡಿವಾಳ, ನಾಯಿಂದ, ಕಣಿಯ, ಮುಕ್ಕಾಟಿ ಮೊದಲಾದ ಹಾಗೂ ಕೃಷಿ ಕಾರ್ಮಿಕ ಸಮುದಾಯದ ಕೆಂಬಟ್ಟಿಗಳು ಮೊದಲಾದವರು ಆಡುಭಾಷೆಯಾಗಿ ಬಳಸಿಕೊಳ್ಳುತ್ತಿದ್ದಾರೆ. ಕೊಡಗಿನ ಮತ್ತೊಂದು ಕೃಷಿಕೇಂದ್ರಿತ ಸಮುದಾಯವಾದ ಜಮ್ಮ ಮಾಪಿಳ್ಳೆಗಳು ಮಲಯಾಳಂ ಮಾತಾಡುತ್ತಾರೆ. ಉತ್ತರ ಕೊಡಗಿನಲ್ಲಿ ಪ್ರಬಲವಾಗಿರುವ ಮತ್ತೊಂದು ಕೃಷಿಕೇಂದ್ರಿತ ಸಮುದಾಯವಾದ ಅರೆಭಾಷೆ ಕನ್ನಡ ಮಾತಾಡುವ ಗೌಡರು ಇದ್ದಾರೆ. ಕೊಡಗಿನಲ್ಲಿ ಕೊಡವ ಭಾಷೆಯನ್ನು ಮಾತಾಡುವ ಜನರು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿರುವಂತೆ ಸಾಮಾಜಿಕ 'ಔನತ್ಯದ ತಾಣ' ಅಥವಾ 'ಕೂರ್ಗ್‌ಪ್ರಾಪರ್'ನಲ್ಲಿ ಅಧಿಕವಾಗಿದ್ದಾರೆ. ಕೊಡವ ಭಾಷೆಯನ್ನು ಗೌಡರು, ಲಿಂಗಾಯಿತರು ಮುಂತಾದವರು ಕೂಡ ದ್ವಿಭಾಷಿಕರಾಗಿ ಮಾತಾಡುವುದನ್ನು ನೋಡಬಹುದು. ಇತ್ತೀಚೆಗೆ ಈ ವಿದ್ಯಮಾನಗಳು ಕಡಿಮೆಯಾಗುತ್ತಿದೆ. ಉಳಿದ ಕಡೆ ಅಷ್ಟೇನು ಈ ಭಾಷೆ ಬಳಕೆಯಲ್ಲಿ ಇಲ್ಲದಿದ್ದರೂ, ಒಟ್ಟಾರೆಯಾಗಿ ಕೊಡಗಿನಲ್ಲಿ ಕೊಡವ ಭಾಷೆಯೇ ಪ್ರಧಾನ ಭಾಷೆಯಾಗಿ ರೂಪುಗೊಂಡಿತು. ಬ್ರಿಟಿಷ ಆಡಳಿತಾವಧಿಯಲ್ಲಿ ಪ್ರಬಲವಾಗಿ ಹೊರಹೊಮ್ಮಿದ ಕೊಡವ ಸಮುದಾಯದ ಭಾಷೆ, ಕೊಡವ ಭಾಷೆಯೇ ಆಗಿರುವುದು ಕೂಡ ಇದಕ್ಕೆ ಮುಖ್ಯವಾದ ಕಾರಣವಾಯಿತು. ಕೊಡವರು ಕೆಳಕಂಡ ಕಾರಣಗಳಿಂದಾಗಿ ಭಾಷೆ, ಸಂಸ್ಕೃತಿ ಮತ್ತು ರಾಜಕಾರಣವನ್ನು ನಿರ್ವಚಿಸಲು ಶಕ್ತರಾದರು.

ಇವುಗಳು ನಾಡು-ನುಡಿಯನ್ನು ಅಭಿವ್ಯಕ್ತಗೊಳಿಸುವ ಪ್ರಬಲವಾದ ಅಂಶಗಳಾಗಿವೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಅಧಿಕಾರಶಾಹಿ

೨. ಭೂ ಒಡೆತನ

೩. ಜನಸಂಖ್ಯೆ

೪. ಇಂಗ್ಲಿಷ್ ವಿದ್ಯಾಭ್ಯಾಸ

೫. ಕೊಡವ ಸಮಾಜಗಳ ರಚನೆ ಮತ್ತು ರಾಜಕಾರಣ

**ಅಧಿಕಾರಶಾಹಿ**

ವಸಾಹತುಪೂರ್ವದ ಅರಸರ ಆಡಳಿತದಲ್ಲಿ ಕೊಡವ ಸಮುದಾಯದ ದಿವಾನರು ರಾಜತ್ವಕ್ಕೆ ಹತ್ತಿರವಿದ್ದರು. ಅರಸುಮನೆತನದ ಸದಸ್ಯರಿಗೆ ಅನೇಕ ಕೊಡವ ಕುಟುಂಬದೊಂದಿಗೆ ಮದುವೆ ಸಂಬಂಧಗಳು ಏರ್ಪಡುತ್ತಿದ್ದವು. ಅರಮನೆ ಚಾಕ್ರಿ ಮುಂತಾದ ವಹಿವಾಟುಗಳಲ್ಲಿ ಅರಸರೊಂದಿಗೆ ಒಳ್ಳೆಯ ಸಂಬಂಧ ಇಟ್ಟುಕೊಂಡಿದ್ದ ಕೊಡವರು ಜಮ್ಮ ಜಹಗೀರು ಮೊದಲಾದ ಭೂಹಿಡುವಳಿಗಳನ್ನು ಮತ್ತು ವಿಶೇಷ ಸವಲತ್ತುಗಳನ್ನು ಹೊಂದಿಕೊಂಡರು.

೧೮೩೪ರಲ್ಲಿ ಬ್ರಿಟಿಷ್‌ರು ಕೊಡಗಿನ ಆಡಳಿತವನ್ನು ವಹಿಸಿಕೊಂಡಾಗ ಬ್ರಿಟಿಷರಿಗೆ ಸಹಕರಿಸಿದ ಕೊಡಗಿನ ಕೊಡವ ದಿವಾನರ ಬಗ್ಗೆ ಒಳ್ಳೆಯ ಅಭಿಪ್ರಾಯವಿತ್ತು. ಅಮರ ಸುಳ್ಯ ದಂಗೆಯನ್ನು ಅಡಗಿಸುವಲ್ಲಿ ಮುಖ್ಯ ಪಾತ್ರವಹಿಸಿದ ಕೊಡಗಿನ ವೀರರನೇಕರು ಕೊಡವರೇ ಆಗಿದ್ದರು. ಬ್ರಿಟಿಷರು ಮುಖ್ಯವಾಗಿ ಕೊಡವ ಸಮುದಾಯ ತೋರಿಸಿದ ನಿಷ್ಠೆಯಿಂದ ಸಂತುಷ್ಟರಾಗಿದ್ದರು. ಹಾಗಾಗಿ ಈಗಾಗಲೇ ಪ್ರತ್ಯೇಕ ರಾಜ್ಯ ಚಳುವಳಿ ಅಧ್ಯಾಯದಲ್ಲಿ ಚರ್ಚಿಸಿರುವಂತೆ ಬ್ರಿಟಿಷ್ ಸರಕಾರದಲ್ಲಿ ಉನ್ನತ ಹುದ್ದೆಗಳು ಕೊಡವರಿಗೆ ಮೀಸಲಾಯಿತು. 'ಅಸಿಸ್ಟೆಂಟ್ ಕಮಿಷನರ್ ಆಫ್ ಕೊಡಗು' ಎನ್ನುವ ಆಯಕಟ್ಟಿನ ಹುದ್ದೆ ಕೊಡವರಿಗೇ ಮೀಸಲಾಗಿತ್ತು. ಅದರಲ್ಲಿ ಬ್ರಿಟಿಷರು ಮಾತ್ರ ಅಲಂಕರಿಸುತ್ತಿದ್ದ 'ಕಮೀಷನರ್ ಆಫ್ ಕೊಡಗು' ಹುದ್ದೆಯೂ ಒಂದು. ಕೇಟೋಳಿರ ಚಂಗಪ್ಪ ಎಂಬ ಕೊಡವರು ಕೂಡ ಈ ಹುದ್ದೆಯನ್ನು ಅಲಂಕರಿಸಿದ ಪ್ರಭಾವಿ ಕೊಡವರಾಗಿದ್ದರು. ರೆವಿನ್ಯೂ ಇಲಾಖೆಯಲ್ಲಿ ಸುಭೇದಾರ್ ಹುದ್ದೆಗಳು ಕೊಡವರಿಗೆ ವರವಾಗಿ ಪರಿಣಮಿಸಿದವು. ರಾವ್‌ಬಹದ್ದೂರ್ ಕೋಡಿರ ಉತ್ತಪ್ಪ, ರಾವ್‌ಬಹುದ್ದೂರ್ ಪಟ್ಟಡ ಉತ್ತಪ್ಪ, ರಾವ್ ಬಹದ್ದೂರ್ ಮಂಡೇಪಂಡ ಮಂದಣ್ಣ ಮೊದಲಾದ ವ್ಯಕ್ತಿತ್ವಗಳು ಕೊಡವರೇ ಆಗಿದ್ದು, ಅವರು ಬ್ರಿಟಿಷರ ಮೇಲೆ ಪ್ರಭಾವ ಬೀರಿ ಕೊಡವ ಸಮುದಾಯಗಳಿಗೆ ಶಸ್ತ್ರಾಸ್ತ್ರ ಕಾಯ್ದೆಯಲ್ಲಿ ವಿನಾಯಿತಿ ಮತ್ತು ಇತರ ಸವಲತ್ತುಗಳನ್ನು ಪಡೆಯುವಲ್ಲಿ ಸಫಲರಾದರು. ಈ ಸಂದರ್ಭದಲ್ಲಿ ಕೊಡಗಿನ ಗ್ರಾಮ ರಚನೆಯಲ್ಲಿ ಇತರ ಸಮುದಾಯಗಳ ಕುಶಲಕರ್ಮಿ ಮತ್ತು ಕೃಷಿ ಕಾರ್ಮಿಕ

ಸಮುದಾಯಗಳು ಪ್ರಧಾನ ಪಾತ್ರ ವಹಿಸಿದರೂ, ಕೃಷಿ ಕೇಂದ್ರಿತ ಸಮುದಾಯಗಳಲ್ಲಿ ಪ್ರಬಲವಾದ ಕೊಡವ ಸಮುದಾಯವು ಕೊಡಗಿನ ರಾಜಕಾರಣ ಮತ್ತು ಆಡಳಿತದಲ್ಲಿ ಪ್ರಾಬಲ್ಯವನ್ನು ಸಾಧಿಸಿದುದು ಚಾರಿತ್ರಿಕ ದೃಷ್ಟಿಯಿಂದ ಮುಖ್ಯವಾಗುತ್ತದೆ. ಕೊಡಗಿನ ನಾಡು ಮತ್ತು ನುಡಿಯನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಬ್ರಿಟಿಷ್ ಆಡಳಿತದ ಸಂದರ್ಭದಲ್ಲಿ ಕೊಡವ ಸಮುದಾಯಕ್ಕೆ ಸಾಧ್ಯವಾದುದು ಈ ಮೇಲಿನ ಕಾರಣಗಳಿಗೆ ಎನ್ನಬಹುದು. ಹೀಗಾಗಿ ಅಧಿಕಾರಶಾಹಿಯಲ್ಲಿ ಪ್ರಧಾನ ಪಾತ್ರ ವಹಿಸಿದ್ದ ಕೊಡವರಿಗೆ ಸಂಸ್ಕೃತಿ, ಭಾಷೆ, ಆರ್ಥಿಕತೆ ಮತ್ತು ರಾಜಕಾರಣದ ಮೇಲೆ ಪ್ರಭಾವ ಬೀರುವುದು ಸಾಧ್ಯವಾಯಿತು.

**ಭೂ ಒಡೆತನ**

ಮೇಲೆ ಹೇಳಿರುವಂತೆ ವಸಾಹತು ಪೂರ್ವದಲ್ಲಿಯೇ ಅರಸರ ಆಡಳಿತಕ್ಕೆ ಹತ್ತಿರವಿದ್ದ ಕೆಲವು ಕೊಡವ ಒಕ್ಕಗಳು ಸಾಕಷ್ಟು ಭೂಹಿಡುವಳಿಗಳನ್ನು ಹೊಂದಿದರು. ಜಮ್ಮ, ಜಹಗೀರು, ಸಾಗು, ಜಮ್ಮಮಲೆ ಮೊದಲಾದ ಭೂ ಹಿಡುವಳಿ ಹೊಂದಲು ಅರಸರ ಕಾಲದಲ್ಲಿ ಸಾಧ್ಯವಾಯಿತು. ಹಾಗೆಯೇ ಬ್ರಿಟಿಷ್ ಆಡಳಿತಕ್ಕೆ ಹತ್ತಿರವಿದ್ದ ಮತ್ತು ಬ್ರಿಟಿಷ್ ಸರಕಾರದಲ್ಲಿ ಆಯಕಟ್ಟಿನ ಜಾಗದಲ್ಲಿ ಅಧಿಕಾರಿಗಳಾಗಿದ್ದ ಕೊಡವ ಸಮುದಾಯಕ್ಕೆ ಖಾಲಿ ಇದ್ದ ಜಾಗಗಳನ್ನು ಹೊಂದುವುದು ಸುಲಭವಾಗಿತ್ತು:

> "ಮೊದಲಿಗೆ ಉತ್ತರ ಕೊಡಗಿನ ಜಮ್ಮ ಕೊಡಗರು, ಕೊಡವರು, ಐರಿಗಳು ಕೋಯವರು ಮತ್ತು ಇತರ ಬುಡಕಟ್ಟು ಸಮುದಾಯದವರು ಜಮ್ಮ ಭೂಹಿಡುವಳಿಯನ್ನು ಪಡೆದರು. ಆ ನಂತರ ಕೆಲವು ಮಾಪಿಳ್ಳೆಗಳು ಮತ್ತು ಗೌಡರು ಕೂಡ ಜಮ್ಮ ಭೂಹಿಡುವಳಿಯನ್ನು ಪಡೆದರು" ೧೮೩೬ರಲ್ಲಿ ೨೦೦೦ದಷ್ಟು ಇದ್ದ ಜಮ್ಮ ರೈತರು ೧೮೭೬ರಲ್ಲಿ ೩೪೮೦ಕ್ಕೆ ಏರಿತು ಎಂದು ಬೆಡೆನ್ ಪೊವೆಲ್ ಅವರು ಅಭಿಪ್ರಾಯ ಪಡುತ್ತಾರೆಂದು ಐ.ಮಾ. ಮುತ್ತಣನವರು ದಾಖಲಿಸುತ್ತಾರೆ(ಮುತ್ತಣ, ೧೯೫೩: ೧೫೧). ಹಾಗಾಗಿ ಭೂಹಿಡುವಳಿಯನ್ನು ಅಧಿಕವಾಗಿ ಹೊಂದಿದವರು ಬ್ರಿಟಿಷ ಆಡಳಿತದ ಆರಂಭದ ದಿನಗಳಲ್ಲಿ ಕೊಡವ ಸಮುದಾಯವೇ ಎಂದು ತಿಳಿಯುತ್ತದೆ. ಕೊಡವರು ಮಿಲಿಟರಿ ಸೇವೆಯ ಪ್ರತಿಫಲವಾಗಿ ಭೂಹಿಡುವಳಿ ಹೊಂದಿದರು. ಸಿರ್ಕಾರ್ಯಗಾರ್, ಕಾರ್ಯಗಾರ್, ಜಮೇದಾರ್ ಮೊದಲಾದ ಹುದ್ದೆಗಳಲ್ಲಿದ್ದವರು ಭೂಹಿಡುವಳಿ ಹೊಂದಲು ಅದರಲ್ಲೂ ಮುಖ್ಯವಾಗಿ ಜಮ್ಮವನ್ನು ಹೊಂದಲು ಅರ್ಹರಾದರು (ಮುತ್ತಣ್ಣ ೧೯೫೩:೧೫೩).

ಕೊಡವ ಅಧಿಕಾರಿಗಳು ಬ್ರಿಟಿಷ್ ಕಾಲಘಟ್ಟದಲ್ಲಿ ಪ್ರಭಾವಿಗಳಾಗಿದ್ದುದು ಮಾತ್ರವಲ್ಲದೆ, ಅರಸರ ಕಾಲದ ನಾಡುವ್ಯವಸ್ಥೆಯ ತಕ್ಕರು, ಪಾರುಪತ್ಯಗಾರರು, ಪಟೇಲರು ಮೊದಲಾದ ಸಾಂಪ್ರದಾಯಿಕ ಅಧಿಕಾರಿವರ್ಗಗಳನ್ನು ಆಡಳಿತಯಂತ್ರ ರೂಪಿಸುವಲ್ಲಿ ಸುಲಭ ವಿಧಾನ ಅನುಸರಿಸುವ ಕಾರಣದಿಂದ ಬ್ರಿಟಿಷ್ ಆಡಳಿತ ಉಳಿಸಿಕೊಂಡಿತು(ಮುತ್ತಣ, ೧೯೫೩:೧೮೫). ಇದಲ್ಲದೆ ಬ್ರಿಟಿಷರ ಕಾಲಕ್ಕೆ ಅರಮನೆ ಚಾಕ್ರಿಯನ್ನು ರೂರಲ್ ಪೋಲಿಸ್ ಮೊದಲಾದ ಹುದ್ದೆಗಳಿಗೆ ಒಳಪಡಿಸಿ ನಾಡಿನಾದ್ಯಂತ ಅಂದರೆ ಅವರವರ ಮನೆಗಳಿಗೆ ಹತ್ತಿರದ ಕಾನೂನು

ಪಾಲನೆ ಮೊದಲಾದ ಸರಕಾರಿ ಕೆಲಸಗಳಲ್ಲಿ ತೊಡಗಿಸಿದರು. ಕೃಷಿ ಚಟುವಟಿಕೆಗಳು ಸರಕಾರಿ ಉದ್ಯೋಗದ ಜೊತೆ ಜೊತೆಯಲ್ಲಿಯೇ ಸಾಗಿದ್ದರ ಫಲವಾಗಿ ಆರ್ಥಿಕತೆಯ ಬೆಳವಣಿಗೆಯಾಯಿತು. ಕೊಡಗಿನ ಇತರ ಕೃಷಿಕೇಂದ್ರಿತ ಸಮುದಾಯಗಳು ಮತ್ತು ಕೆಲವು ಕುಶಲ ಕರ್ಮಿ ವರ್ಗದವರು ಇದರ ಪ್ರಯೋಜನ ಪಡೆದುಕೊಂಡರೂ ಅದು ಕೊಡವ ಸಮುದಾಯಕ್ಕೆ ಹೋಲಿಸಿದರೆ ನಗಣ್ಯವೆಂದೇ ಹೇಳಬೇಕು. ಹಾಗಾಗಿ ಕೊಡಗಿನ ಭೂಹಿಡುವಳಿಯ ವಿಚಾರ ಬಂದಾಗಲೂ ಕೊಡವರೇ ಪ್ರಭಾವಶಾಲಿಗಳಾಗಿದ್ದು, ನಾಡು ಮತ್ತು ನುಡಿಗಳ ನಿಯಂತ್ರಣ ಕೊಡವರ ಕೈಯಲ್ಲಿ ಇತ್ತು ಎಂದು ಹೇಳಬಹುದು.

**ಜನಸಂಖ್ಯೆ**

೧೯೫೩ರಲ್ಲಿ ಐ.ಮಾ. ಮುತ್ತಣ್ಣನವರು ಕೊಡವರ ಸಂಖ್ಯೆ ೪೮೦೦೦, ಅಮ್ಮಕೊಡವರ ಸಂಖ್ಯೆ ೧೦೦೦, ಗೌಡರು ೧೭೦೦೦, ಎಂದು ದಾಖಲಿಸುತ್ತಾರೆ. ಹಾಗಾದರೆ ಉಳಿದ ಅಲ್ಪ ಸಂಖ್ಯಾತ ಕೊಡಗು ಭಾಷಿಕ ಸಮುದಾಯಗಳ ಸಂಖ್ಯೆ ಎಷ್ಟಿರಬಹುದೆಂದು ಊಹಿಸಬಹುದು. ಜನಸಂಖ್ಯಾ ದೃಷ್ಟಿಯಿಂದಲೂ ಪ್ರಬಲರಾಗಿದ್ದ ಕೊಡವರು ಕೊಡಗು ನಾಡನ್ನು ಮತ್ತು ಸಾಂಸ್ಕೃತಿಕ ವಿಚಾರಗಳನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡರು.

ಅರಸರ ಕಾಲದಲ್ಲಿ ದಿವಾನರಾಗಿಯೂ, ನಾಯಕರ ಕಾಲದಲ್ಲಿ ಕಾರ್ಯಕಾರರಾಗಿಯೂ ನಾಯಕರಾಗಿಯೂ, ಬ್ರಿಟಿಷರ ಕಾಲದಲ್ಲಿ ಅಧಿಕಾರಿಗಳಾಗಿಯೂ, ಪ್ರಸ್ತುತ ಸರಕಾರದ ಕೆಲವು ಪ್ರಮುಖ ಸ್ಥಾನಗಳಲ್ಲಿಯೂ ಇರುವ ಕೊಡವರು ರಾಜರಾಗಿಲ್ಲದಿದ್ದರೂ, ರಾಜತ್ವವನ್ನು ರೂಪಿಸಿದ ವರ್ಚಸ್ಸುಳ್ಳ ಜನಾಂಗ' ಎಂದು ಐ.ಮಾ. ಮುತ್ತಣ್ಣನವರು ಹೇಳಿಕೊಳ್ಳುತ್ತಾರೆ(ಮುತ್ತಣ, ೧೯೫೩:೨೮೮). ಈ ಮಾತುಗಳು ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತದೆ.

**ಇಂಗ್ಲಿಷ್ ವಿದ್ಯಾಭ್ಯಾಸ**

೧೮೩೪ರಲ್ಲಿ ಮಡಿಕೇರಿಯಲ್ಲಿ ಆಂಗ್ಲೊ ವರ್ನ್ಯಾಕ್ಯುಲರ್ ಶಾಲೆ ಪ್ರಾರಂಭವಾಯಿತು. ಅದಾದ ಕೆಲವು ಸಮಯದಲ್ಲಿ ವಿರಾಜಪೇಟೆಯಲ್ಲಿ ಆಂಗ್ಲ ಮಾಧ್ಯಮದ ಶಾಲೆಯೊಂದು ಪ್ರಾರಂಭವಾಯಿತು. ೧೮೬೨ರಲ್ಲಿ ನಾಡಿನ ತಕ್ಕ ಮುಖ್ಯಸ್ಥರು ಆಂಗ್ಲ ಮಾಧ್ಯಮದ ಶಾಲೆಗಳ ಅಗತ್ಯತೆಯನ್ನು ಮನಗಂಡು ಹೆಚ್ಚು ಶಾಲೆಗಳನ್ನು ಕೊಡಗಿನಲ್ಲಿ ತೆರೆಯುವಂತೆ ಆಗ್ರಹಿಸಿದರು. ೧೮೭೦ರ ವೇಳೆಗೆ ಕೊಡಗಿನ ಸುಮಾರು ೪೦ ಶಾಲೆಗಳಿದ್ದು, ಕರಡ, ಕಾಂತ ಮೂರ್ಗಾಡು, ಬೇಂಗುನಾಡು, ಕಳತ್ತೋಡು, ಕಾವಾಡಿ ಮತ್ತು ಚೆಂಬೆಬೆಳಿಯೂರು ನಾಡಿನ ಉತ್ತಮ ಶಾಲೆಗಳೆಂದು ಪರಿಗಣಿಸಲ್ಪಟ್ಟಿತು(ಮುತ್ತಣ್ಣ, ೧೯೫೩: ೧೭೭). ಕೊಡವ ಎಜ್ಯುಕೇಷನ್ ಫಂಡ್ ೧೯೧೭ರಲ್ಲಿ ಪ್ರಾರಂಭವಾಯಿತು. ಮಾತಂಡ ಚಂಗಪ್ಪ ಎಂಬವರು ಕೊಡಗಿನಿಂದ ಇಂಗ್ಲೆಂಡ್‌ಗೆ ಹೋಗಿ ಬ್ಯಾರಿಷ್ಟರ್ ಪದವಿ ಪಡೆದವರು. ಡಾ. ಕೊರವಂಡ ಅಪ್ಪಯ್ಯ ೧೮೮೪ರ ಕೊಡಗಿನ ಮೊದಲ ಡಾಕ್ಟರಾದರು. ಡಾ. ನಂಜಪ್ಪ ಮೈಸೂರು ಸಂಸ್ಥಾನದಲ್ಲಿ ಡಾಕ್ಟರಾಗಿದ್ದರು. ಪಾಲೇಕಂಡ ಮೇದಪ್ಪನವರು

೧೯೩೩ರಲ್ಲಿ ನ್ಯಾಯಾಧೀಶರಾಗಿ ೧೯೪೪ರಲ್ಲಿ ಮೈಸೂರಿನ ಮುಖ್ಯನ್ಯಾಯಾಧೀಶರಾದರು. ೧೯೪೯ರಲ್ಲಿ ಚೋನಿರ ಮುತ್ತಮ್ಮನವರು ಐ.ಎ.ಎಸ್. ಅಧಿಕಾರಿಯಾದರು. ಹಲವಾರು ಡಾಕ್ಟರುಗಳು, ಇಂಜಿನೀಯರ್‌ಗಳು, ವಕೀಲರು, ಪ್ರಾಧ್ಯಾಪಕರು, ದೊಡ್ಡ ದೊಡ್ಡ ಸರಕಾರಿ ನೌಕರರು, ಬ್ಯಾಂಕ್ ಉದ್ಯೋಗಿಗಳು ಮೊದಲಾದವರು ಕೊಡವರಾಗಿದ್ದುದು ವಿಶೇಷವಾಗಿತ್ತು. ಇಂಗ್ಲೀಷ್ ವಿದ್ಯಾಭ್ಯಾಸದಿಂದ ಸಾಂಪ್ರದಾಯಿಕ ಒಕ್ಕ ವ್ಯವಸ್ಥೆಗೆ ಧಕ್ಕೆ ಉಂಟಾದರೂ ಒಕ್ಕದ ಸದಸ್ಯರೊಬ್ಬರು ಇಂಗ್ಲೀಷ್ ವಿದ್ಯಾಭ್ಯಾಸದ ಫಲವಾಗಿ ದೊಡ್ಡ ಹುದ್ದೆಗಳನ್ನು ಹೊಂದುವುದು ಗೌರವದ ಪ್ರಶ್ನೆಯಾಗಿತ್ತು. ಇದು ಒಕ್ಕ ವ್ಯವಸ್ಥೆಗೆ ಹೊಸ ಆಯಾಮವನ್ನು ತಂದುಕೊಟ್ಟಿತು. ಇಂಗ್ಲೀಷ್ ವಿದ್ಯಾಭ್ಯಾಸ ಹೊಂದಲು ಕೊಡಗಿನಲ್ಲಿ ಎಲ್ಲ ಸಮುದಾಯಗಳಿಗೆ ಆರ್ಥಿಕ ಕಾರಣಗಳಿಂದ ಆರಂಭದ ದಿನಗಳಲ್ಲಿ ಸಾಧ್ಯವಾಗಲಿಲ್ಲ. ಹಾಗಾಗಿ ಆರ್ಥಿಕವಾಗಿ ಸದೃಢವಾಗಿದ್ದ ಕೊಡವ ಸಮುದಾಯದವರು ಇಂಗ್ಲೀಷ್ ವಿದ್ಯಾಭ್ಯಾಸದ ಅವಕಾಶವನ್ನು ಪಡೆದು ಪ್ರಬಲ ಸಮುದಾಯ ಎನಿಸಿಕೊಳ್ಳುವಲ್ಲಿ ಸಫಲರಾದರು.

**ಕೊಡವ ಸಮಾಜಗಳ ರಚನೆ ಮತ್ತು ರಾಜಕಾರಣ**

ಸ್ವಾತಂತ್ರ್ಯಪೂರ್ವದಲ್ಲಿ ಕೆಲವು ಕೊಡವ ಸಮಾಜಗಳು ಮಂದ್ ಮಾನಿಗಳಲ್ಲಿ ಪ್ರಾರಂಭವಾಗಿತ್ತು. ವೀರಾಜಪೇಟೆ ಮತ್ತು ಮಡಿಕೇರಿ ಕೊಡವ ಸಮಾಜಗಳು ಕೊಡಗಿನ ಮೊದಲ ಕೊಡವ ಸಮಾಜಗಳು. ಕೊಡಗಿನ ಬೇರೆ ಬೇರೆ ಚಾರಿತ್ರಿಕ ಕಾಲಘಟ್ಟದಲ್ಲಿ ರಾಜಕಾರಣದ ಹತೋಟಿ ಹೊಂದಿದ್ದ ಕೊಡವರಿಗೆ ಮೊದಲ ಬಾರಿಗೆ ೧೯೪೦ರ ಹೊತ್ತಿಗೆ ಅಂದರೆ ದೇಶಕ್ಕೆ ಸ್ವಾತಂತ್ರ್ಯ ಬರುವ ಸಂದರ್ಭದಲ್ಲಿ ಆತಂಕವುಂಟಾಯಿತು. ಹಾಗಾಗಿ ಎಲ್ಲ ನಾಡಿನ ತಕ್ಕ ಮುಖ್ಯಸ್ಥರು ಸೇರಿ ಅಖಿಲ ಕೊಡವ ಸಮಾಜವನ್ನು ೧೯೪೭ರಲ್ಲಿ ಸ್ಥಾಪಿಸಿದರು.

ಆ ಹೊತ್ತಿಗಾಗಲೇ ಬ್ರಿಟಿಷ್ ಆಡಳಿತದಲ್ಲಿ ಅಧಿಕಾರವನ್ನು ಅನುಭವಿಸಿದ್ದ ಕೊಡವರಿಗೆ ಭವಿಷ್ಯದ ಬಗ್ಗೆ ಸಹಜವಾಗಿಯೇ ಆತಂಕ ಉಂಟಾಗಿತ್ತು. ಸಮುದಾಯದ ಸಮಗ್ರತೆ ಮತ್ತು ನಾಡಿನ ಸಂಸ್ಕೃತಿ ಶಿಥಿಲಗೊಳ್ಳುತ್ತಿದೆ ಎಂಬ ಅಭಿಪ್ರಾಯ ಸಹಜವಾಗಿಯೇ ಮೂಡಿತ್ತು. ೧೯೮೦ರ ನಂತರ ಕೊಡಗಿನ ಅನೇಕ ಪ್ರಮುಖ ಪಟ್ಟಣಗಳಲ್ಲಿಯೂ ಕೊಡಗಿನ ಹೊರಗಿನ ನಗರಗಳಲ್ಲಿಯೂ ಕೊಡವ ಸಮಾಜಗಳ ರಚನೆಯಾಯಿತು. ಬೆಂಗಳೂರು ನಗರ ಒಂದರಲ್ಲಿಯೇ ಪ್ರಧಾನ ಸಮಾಜವಲ್ಲದೆ ಮೂವತ್ತೆರಡು ಸಂಘಗಳಿವೆ. ಕೊಡವ ಸಮುದಾಯದ ಸಂಸ್ಥೆಗಳು ಅನೇಕ ಶಾಲಾ ಕಾಲೇಜುಗಳ ಹುಟ್ಟಿಗೆ ಕಾರಣವಾದವು. ಇದರ ವಿವರಗಳನ್ನು ಈಗಾಗಲೇ ಸಾಮಾಜಿಕ ಸಂರಚನೆಯ ಅಧ್ಯಾಯದಲ್ಲಿ ನೋಡಿದ್ದೇವೆ. ಬಹುಸಂಖ್ಯಾತರು, ಆರ್ಥಿಕವಾಗಿ ಪ್ರಬಲರಾಗಿರುವವರೂ, ವಸಾಹತು ಕಾಲಘಟ್ಟದವರೆಗೆ ರಾಜಕಾರಣ ಮತ್ತು ಅಧಿಕಾರವನ್ನು ನಿಭಾಯಿಸಿದ ಹಿನ್ನೆಲೆಯಿರುವವರೂ ಆದ ಕೊಡವ ಸಮುದಾಯ ಸಹಜವಾಗಿಯೇ ಕೊಡಗಿನ ನಾಡು, ಸಂಸ್ಕೃತಿ, ಭಾಷೆ ಮೊದಲಾದ ವಿಚಾರಗಳ ಬಗ್ಗೆ ಹತೋಟಿ ಸಾಧಿಸುತ್ತದೆ ಎಂದರೆ ತಪ್ಪಾಗುವುದಿಲ್ಲ.

ಈ ಮೇಲಿನ ಎಲ್ಲ ಅಂಶಗಳೂ ಬೇರೆ ಬೇರೆ ಕಾಲಘಟ್ಟಗಳಲ್ಲಿ ಭಿನ್ನ ನೆಲೆಗಳಲ್ಲಿ ಕೊಡವ ಸಮುದಾಯದ ಉನ್ನತಿಗೆ ಕೆಲಸ ಮಾಡಿದವು. ಉಳಿದ ಸಮುದಾಯಗಳು ಈ ಪ್ರಕ್ರಿಯೆಗೆ ಸಾಕ್ಷಿಯಾಗಿದ್ದರೂ ಕೊಡವ ಸಮುದಾಯ ಈ ಅವಕಾಶಗಳನ್ನು ಬಳಸಿಕೊಂಡಷ್ಟು ಉಳಿದ ಸಮುದಾಯಗಳು ಬಳಸಿಕೊಳ್ಳಲಾಗದ್ದಕ್ಕೆ ಅವರದೇ ಆದ ಮಿತಿಗಳಿದ್ದವು. ಮುಖ್ಯವಾಗಿ ಲಿಂಗಾಯಿತ ಅರಸರ ಆಡಳಿತಾವಧಿ(೧೬೦೦-೧೮೩೪), ಬ್ರಿಟಿಷ್ ಆಡಳಿತ(೧೮೩೪-೧೯೪೭), 'ಸಿ' ರಾಜ್ಯವ್ಯವಸ್ಥೆ (೧೯೫೨-೫೬), ಏಕೀಕರಣೋತ್ತರ ಕಾಲಘಟ್ಟ(೧೯೫೬-೧೯೯೦), ಜಾಗತೀಕರಣೋತ್ತರ ಕಾಲಘಟ್ಟ ಎಂದು ಐದು ಕಾಲಘಟ್ಟಗಳಲ್ಲಿ ಈ ಮೇಲಿನ ಅಂಶಗಳು ಕೊಡವ ಸಮುದಾಯದ ಔನತ್ಯಕ್ಕೆ ಹೇಗೆ ಪೂರಕವಾದವು ಎಂಬುದನ್ನು ಮುಂದೆ ಚರ್ಚಿಸಲಾಗುವುದು. ಹಾಗೆಯೇ ಕೊಡಗಿನ ಉಳಿದ ಸಮುದಾಯಗಳು ವಸಾಹತು ಪೂರ್ವದಲ್ಲಿ ಇದ್ದಂತೆ, ಪ್ರಸ್ತುತ ಇಲ್ಲದೆ ಮುಖ್ಯವಾಹಿನಿ ಯಿಂದ ಹಿಂದೆ ಸರಿಯಲು ಕಾರಣಗಳೇನು ಮತ್ತು ಹಾಗಾಗಿ ಕೊಡಗಿನ ಸಾಮಾಜಿಕ ಸಂರಚನೆಯಲ್ಲಿ ಒಂದು ಕಾಲದಲ್ಲಿ ಮುಖ್ಯ ಪಾತ್ರ ವಹಿಸಿದ್ದ ಅಲ್ಪ ಸಂಖ್ಯಾತ ಕೃಷಿಕೇಂದ್ರಿತ, ಕೃಷಿ ಕಾರ್ಮಿಕ ಮತ್ತು ಕುಶಲಕರ್ಮಿ ಸಮುದಾಯಗಳ ಅಸ್ತಿತ್ವದ ಮೇಲಿನ ಪರಿಣಾಮಗಳೇನು ಎಂಬುದು ಮಹತ್ವದ ವಿಷಯಗಳಾಗುತ್ತದೆ.

ಕೊಡಗು ಭಾಷೆ ಅಥವಾ ಕೊಡವ ಭಾಷೆ ಬ್ರಿಟೀಷ್ ವಿದ್ವಾಂಸರ ಗಮನವನ್ನು ಮೊದಲ ಬಾರಿಗೆ ಸೆಳೆಯಿತು. ಅದಕ್ಕೆ ಕಾರಣಗಳು ಇಲ್ಲದಿಲ್ಲ. ಕೊಡಗು ಬ್ರಿಟೀಷ್ ಆಡಳಿತಕ್ಕೆ ಒಳಪಡುವುದಕ್ಕೆ ಮುನ್ನ ಲಿಂಗಾಯಿತ ಅರಸರ ಕಾಲಘಟ್ಟದಲ್ಲಿ ಅರಸರ ಆಡಳಿತ ಇದ್ದರೂ ಅಧಿಕಾರ ಇದ್ದದ್ದು ಸ್ಥಳೀಯ ದಿವಾನರ ಕೈಯಲ್ಲಿ ಎನ್ನುವುದು ಜನಜನಿತ ವಿಚಾರ. ಅದರಲ್ಲೂ ಕೊಡವ ದಿವಾನರು ಮತ್ತು ಕಾರ್ಯಕಾರರು ತಮ್ಮ ವರ್ಚಸ್ಸಿನಿಂದ ಅಧಿಕಾರಶಾಹಿಗಳಂತಿದ್ದರು. ಹಾಗಾಗಿ ಯಾವುದೇ ನಿರ್ಧಾರಕ್ಕೂ ರಾಜತ್ವದ ಅಭಿಪ್ರಾಯಕ್ಕಿಂತ ಕೃಷಿಕೇಂದ್ರಿತ ಸಮುದಾಯಗಳಲ್ಲಿ ಒಂದಾದ ಕೊಡವರ ಅಭಿಪ್ರಾಯ ಮುಖ್ಯವಾಗಿತ್ತು.

ಆ ಸಂದರ್ಭದಲ್ಲಿ ಸಾಂಸ್ಕೃತಿಕವಾಗಿ ನೋಡಿದರೆ ಗ್ರಾಮ ರಚನೆಗಳಲ್ಲಿ ಮೇಲೆ ಹೆಸರಿಸಿದ ಕೃಷಿಕೇಂದ್ರಿತ, ಕೃಷಿ ಕಾರ್ಮಿಕ ಮತ್ತು ಕುಶಲಕರ್ಮಿವರ್ಗಗಳು ಬಹಳ ಮುಖ್ಯ ಪಾತ್ರ ವಹಿಸುತ್ತಿದ್ದವು ಎನ್ನುವುದು ಗಮನಾರ್ಹ. 'ವಿರಾಜಪೇಟೆ ತಾಲೂಕಿನ ಸ್ಥಳನಾಮಗಳ ಅಧ್ಯಯನ' ಎನ್ನುವ ಕೃತಿಯಲ್ಲಿ "ದಲಿತ ವರ್ಗದವರ ದೇಗುಲ ಆಚರಣೆಗೆ 'ಭಟ್ಟಿಯತಕ್ಕರ' ಭಟ್ಟತಕ್ಕಾಮೆ ವ್ಯವಸ್ಥೆ ಕೂಡ ಇದೆ. ಈ ತಕ್ಕಾಮೆಗಳಿಗೆ ಈ ತಾಲೂಕಿನಲ್ಲಿರುವ ಕೊಡವ ಭಾಷೆಯನ್ನಾಡುವ ಎಲ್ಲ ಪಂಗಡಗಳಲ್ಲಿಯೂ ಆಯ್ಕೆ ಪ್ರಕ್ರಿಯೆ ನಡೆಯುತ್ತದೆ. ಏಕೆಂದರೆ ದೇವತಕ್ಕರು, ಭಂಡಾರ ತಕ್ಕಾಮೆ ಕೆಲವು ಊರುಗಳಲ್ಲಿ ಕೊಡವ ಸಮುದಾಯಕ್ಕೆ ಸೇರಲು ವರ್ಗಗಳಲ್ಲಿಯೂ ಕಂಡು ಬರುತ್ತದೆ"(ಲಲಿತ, ೨೦೧೫:೧೮೫) ಎಂಬ ವಿವರಗಳು ಮುಖ್ಯವಾಗುತ್ತದೆ. ಉದಾಹರಣೆಗೆ ಪಾಲಂಗಾಲ ಗ್ರಾಮದಲ್ಲಿ ಕ್ಮಣಿ ಅಯ್ಯಪ್ಪ ದೇವಾಲಯದ ದೇವತಕ್ಕರ ಮತ್ತು ಭಂಡಾರ

ತಕ್ಕರು ಕೋಯವ ಸಮುದಾಯದ ಚೇಪಂಡ ಒಕ್ಕದವರದಾಗಿರುತ್ತದೆ. ಇಲ್ಲಿ ಪ್ರಾಬಲ್ಯದಲ್ಲಿರುವ ಕೊಡವ ಒಕ್ಕಗಳಿದ್ದರೂ ತಕ್ಕಾಮೆ ಚೇಪಂಡ ಒಕ್ಕಕ್ಕೆ ಸಂದಿರುವುದು ಗಮನಾರ್ಹ. ಆ ಕಾಲಘಟ್ಟದ ಜಾತಿ ಕಟ್ಟುಪಾಡುಗಳಿಗೆ ಅಷ್ಟಾಗಿ ಒತ್ತುಕೊಟ್ಟಿರಲಿಕ್ಕಿಲ್ಲ, ಅಥವಾ ಎಲ್ಲ ಸಮುದಾಯಗಳಿಗೂ ಸಾಕಷ್ಟು ಅವಕಾಶಗಳನ್ನು ಕಲ್ಪಿಸಲಾಗಿತ್ತು. ಪನ್ನಂಗಾಲ ದೇವಾಲಯದ ಆಚರಣೆಗಳಲ್ಲಿ ಕೆಂಬಟ್ಟಿಯವರದೇ ಮೇಲುಗೈ ಇದ್ದರೂ ಮೇಲ್ವರ್ಗದ ಕೊಡವ ಸಮುದಾಯದ ೪ ಒಕ್ಕಗಳು ತಕ್ಕರಾಗಿದ್ದು, ಕುಶಲಕರ್ಮಿ ಸಮುದಾಯವಾದ 'ಐರಿ' ಒಕ್ಕಕ್ಕೂ ಕೂಡ ಅಲ್ಲಿ ತಕ್ಕಾಮೆ ಇರುವುದು ಗಮನಾರ್ಹ ವಿಚಾರ. ಹಾಗೆಯೇ ಅರಪಟ್ಟು ಗ್ರಾಮದ ಮೇಧರ ಚಾಮುಂಡಿ ದೇವಾಲಯದಲ್ಲಿ ಗ್ರಾಮದ ಎಲ್ಲ ಸಮುದಾಯದ ಒಕ್ಕದವರೂ ಸೇರಿ ಹಬ್ಬವನ್ನು ಸಂಭ್ರಮದಿಂದ ಆಚರಿಸಿದರೂ, ಹಬ್ಬದ ಆಚರಣೆಯಲ್ಲಿ ಕೃಷಿ ಕಾರ್ಮಿಕ ಸಮುದಾಯದ 'ಮೇದ'ರದೇ ಮೇಲುಗೈ. ಇಷ್ಟೇ ಅಲ್ಲದೆ ಕೊಡಗಿನ ನ್ಯಾಯವ್ಯವಸ್ಥೆಯಲ್ಲಿ ಕಾಣುವ ಊರು, ನಾಡು, ಅಂಬಲ, ಮಂದ್‌ಗಳು ಮತ್ತು ತಕ್ಕರುಗಳು ಅರಸರ ಕಾಲದಲ್ಲಿ ನ್ಯಾಯ ತೀರ್ಮಾನಗಳನ್ನು ನಿಷ್ಪಕ್ಷಪಾತದಿಂದ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಈ ಎಲ್ಲ ಸಂಪ್ರದಾಯಗಳನ್ನು ಗಮನಿಸವಾಗ ಲಿಂಗಾಯಿತ ಅರಸರ ಕಾಲಘಟ್ಟದಲ್ಲಿ ಜಾತಿ ವರ್ಗೀಕರಣ ಇದ್ದರೂ ಅದು ವೃತ್ತಿಯಾಧಾರದ ಮೇಲೆ ಇತ್ತೇ ವಿನಹ ಶ್ರೇಣೀಕೃತ ವ್ಯವಸ್ಥೆಯಲ್ಲಿ ಕಠಿಣತೆ ಇದ್ದಿರಲಿಲ್ಲ ಎಂಬುದನ್ನು ಗಮನಿಸಬಹುದು.

ಬ್ರಿಟಿಷ್ ಆಡಳಿತದಲ್ಲಿ ಅಧಿಕಾರಿಯಾಗಿದ್ದ ನಡಿಕೇರಿ ಚೆಣ್ಣಪ್ಪನವರು 'ಪಟ್ಟೋಲೆಪಳಮೆ'ಯಲ್ಲಿ ಏನೇ ಜಾತಿ ಪದ್ದತಿಯ ಕಟ್ಟು ಕಟ್ಟಳೆಗಳನ್ನು ಉಲ್ಲೇಖಿಸಿದರೂ, "ಎಲ್ಲಾ ತರದ ಶೂದ್ರರೂ ಕೊನೆಗೆ ಮ್ಲೇಂಛರೂ ಸಹ ಕೊಡಗರಂತೆ ಕುಪ್ಪಸ ಧರಿಸಿದರೆ ಕೊಡಗರೊಡನೆ ಮಿಶ್ರವಾಗಿ ಮಂದು ಮಾನಿಗಳಲ್ಲಿ ಕುಣಿಯಬಹುದು"(ಚೆಣ್ಣಪ್ಪ, ೧೯೨೪: ೫೩೮) ಎಂಬ ವಿಚಾರವನ್ನು ಅನಾವರಣಗೊಳಿಸುವುದು ಮುಖ್ಯವಾಗುತ್ತದೆ. ಚೆಣ್ಣಪ್ಪನವರ ಅಭಿಪ್ರಾಯಗಳ ಮೇಲೆ ವಿಜಯ್ ಪೂಣಚ್ಚ ತಂಬಂಡ ಅವರು ಹೇಳುವಂತೆ ೨೦ನೇ ಶತಮಾನದ ಆರಂಭದಲ್ಲಿ ಪುನಶ್ಚೇತನಗೊಂಡ ಬ್ರಾಹ್ಮಣೀಕೃತ ಮೌಲ್ಯಗಳ(ತಂಬಂಡ, ೨೦೦೪:೪೭) ಪ್ರಭಾವಗಳು ಆಗಿದ್ದರೂ, ಆ ಕಾಲಕ್ಕಾಗಲೇ ಸಮಾಜದಲ್ಲಿ ಪ್ರತಿಷ್ಠಾಪಿತವಾಗಿದ್ದ ಕೆಲವು ಸಂಪ್ರದಾಯಗಳು ಜಾತಿವಾದವನ್ನು ಆ ಕಾಲಘಟ್ಟದಲ್ಲಿ ಅಷ್ಟಾಗಿ ಪುಷ್ಟೀಕರಿಸುತ್ತಿರಲಿಲ್ಲವೆಂದಾಯಿತು. ನಾಡ ಹಬ್ಬಗಳಾದ ಹುತ್ತರಿ, ಕೈಲ್‌ಮೂಹೂರ್ತ ಮೊದಲಾದವುಗಳಲ್ಲಿ ಎಲ್ಲ ಸಮುದಾಯದವರೂ ಸಾಂಸ್ಕೃತಿಕ ನೆಲೆಯಲ್ಲಿ ಸಮಾನರಾಗಿದ್ದರು. ಕೌಟುಂಬಿಕ ಸಂಬಂಧಗಳು ಏರ್ಪಟ್ಟರೆ ಮಾತ್ರ ಸಾಮಾಜಿಕ ಸಮಾನತೆ ಸಾಧಿಸಬಹುದು ಎನ್ನುವುದನ್ನು ಅನೇಕರು ೨೧ನೇ ಶತಮಾನದಲ್ಲಿಯೇ ಒಪ್ಪದಿರುವಾಗ ೧೮-೧೯ನೇ ಶತಮಾನದಲ್ಲಿ ಸಾಮಾಜಿಕ ಕಟ್ಟುಪಾಡುಗಳು ಬಲವಾಗಿದ್ದಾಗ ನಿರೀಕ್ಷಿಸುವುದು ಕಷ್ಟ. ಆ ಸಂದರ್ಭದಲ್ಲಿ ಬ್ರಿಟಿಷ್ ಸರಕಾರದಲ್ಲಿ ಅಧಿಕಾರಿಯಾಗಿದ್ದ ಇ. ಮಾರ್ಸ್ಡೆನ್ ಅವರ ಅಭಿಪ್ರಾಯವೂ ಮುಖ್ಯವಾಗುತ್ತವೆ. ಅವರ ಕೃತಿ 'ಕೊಡಗು ವಿವರಣೆ'ಯಲ್ಲಿ –

> ಪೂರ್ವಕಾಲದಲ್ಲಿ ಕೊಡಗಿನಲ್ಲಿ ದೇಶಾಧಿಪತಿಗಳಾಗಿ
> ತಮ್ಮ ಜಮ್ಮದ ಭೂಮಿಗಳನ್ನು ಸಾಗು ಮಾಡಿ
> ಅನುಭವಿಸಿಕೊಂಡು ಬಂದ ಕೊಡಗರೂ ಇವರ
> ಚೌಕರರಾದ ಕೀಳು ಜಾತಿಯವರೂ, ಈ ಎರಡು
> ಬಗೆಯ ಜನರು ಮಾತ್ರ ಇದ್ದರೆಂದು ಹೇಳುತ್ತಾರೆ.
> ಆ ಕಾಲದಲ್ಲಿ ಈ ಆಳುಗಳಿಗೆ ಯಾವ ಸ್ವತಂತ್ರವೂ
> ಇರಲಿಲ್ಲ, ಆದರೆ ಈಗ ಇಂಗ್ಲೀಷರ ರಾಜ್ಯಭಾರದಲ್ಲಿ
> ಇರಲಿಲ್ಲ ಪ್ರಜೆಗಳ ಹಾಗೆಯೇ ಇವರೂ ಸ್ವತಂತ್ರಗಳಾಗಿರುತ್ತಾರೆ

ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ(ತಂಬಂಡ, ೨೦೦೫:VIII/IX). ಆದರೆ "ಭೂಮಿ ಇಲ್ಲದಿರುವವರೆಲ್ಲಾ ಕೀಳು ಜಾತಿಯವರು ಎಂಬ ರೀತಿಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ ಬಗೆಗಳು ಅವರ ಬರವಣಿಗೆಯ ಮಿತಿಯಾಗಿದೆ. ಕೊಡಗಿನ ಸಮಾಜದ ಸಂಕೀರ್ಣತೆಗಳನ್ನು ಸರಿಯಾಗಿ ಗಮನಿಸದೆ ಇದ್ದುದನ್ನು ಅವರ ಬರವಣಿಗೆಗಳನ್ನು ಗಮನಿಸಬಹುದು" ಎಂದು ವಿಜಯ್ ಪೂಣಚ್ಚ ತಂಬಂಡರವರು ಅಭಿಪ್ರಾಯ ಪಡುತ್ತಾರೆ(ತಂಬಂಡ, ೨೦೦೫:IX). ಆ ಕಾಲಘಟ್ಟದ ಮೇಲ್ವರ್ಗದ ಕೃಷಿ ಕೇಂದ್ರಿತ ಸಮುದಾಯಗಳವರು ತಳವರ್ಗದ ಕೆಂಬಟ್ಟಿಯವರಲ್ಲಿ ಸಾಕಷ್ಟು ಭಾವನಾತ್ಮಕ ಸಂಬಂಧ ಹೊಂದಿದ್ದರು ಎನ್ನುವುದಕ್ಕೆ ಕೊಡವ ಭಾಷೆಯಲ್ಲಿನ "ಪೋಲೆ ಮೋವನೇ ತಲೆ ಮೋವನ್"(ಹೊಲೆ ಮಗನೇ ಒಕ್ಕದ ದೊಡ್ಡ ಮಗ) ಎಂಬ ಅಭಿಪ್ರಾಯವನ್ನು ಅಂದಿನ ಸಮಾಜ ಒಪ್ಪಿಕೊಂಡಿತ್ತು. ಹಾಗಾಗಿ ನಾಡು ರೂಪುಗೊಳ್ಳುವ ಸಂದರ್ಭದಲ್ಲಿ ಸಮಾಜದ ಅತ್ಯಂತ ಕಟ್ಟ ಕಡೆಯ ವ್ಯಕ್ತಿಯೂ ಬಹಳ ಮುಖ್ಯ ಎನ್ನುವುದು ಅಂದಿನ ಮುಖ್ಯಸ್ಥರಿಗೆ ಅರಿವಾಗಿತ್ತು, ಇದನ್ನು ಆದರ್ಶ ಎನ್ನಲಾಗದಿದ್ದರೂ ಅದು ವಾಸ್ತವವಾಗಿತ್ತು ಎನ್ನಬಹುದು.

ಮುಂದೆ ೧೮೩೪ರಲ್ಲಿ ಕೊಡಗು ಬ್ರಿಟಿಷರ ವಶವಾಗುವ ಸಂದರ್ಭ ಬಂದಾಗ ಕೊಡವ ದಿವಾನರು ಬ್ರಿಟಿಷರನ್ನು ಸ್ವಾಗತಿಸಿ ಸ್ನೇಹ ಬೆಳೆಸಿರುವುದು ಸರಿಯಷ್ಟೆ. ಬ್ರಿಟಿಷರಿಗೆ ಕೊಡಗಿನ ಜನರೊಡನೆ ಅದರಲ್ಲೂ ಪ್ರಭಾವಿಗಳೊಡನೆ ಸಂಪರ್ಕ ಸಿಕ್ಕಿದ್ದು ತುಂಬ ಅನುಕೂಲವಾಯಿತು. ಕೃಷಿ ಕೇಂದ್ರಿತ ಸಮುದಾಯಗಳು 'ಅರಮನೆ ಚಾಕ್ರಿ' ಮಾಡುವುದು ಬ್ರಿಟಿಷ್ ಸರಕಾರದಲ್ಲಿಯೂ ಮುಂದುವರಿಯಿತು. ಅಮರಸುಳ್ಯ ದಂಗೆಯನ್ನು ಅಡಗಿಸಲು ಕೊಡವರು ಮತ್ತು ಇತರ ಪ್ರಬಲ ವರ್ಗಗಳು ಬ್ರಿಟಿಷರಿಗೆ ಮಾಡಿದ ಸಹಾಯವು ಮುಖ್ಯವಾಗಿ ಕೊಡವರನ್ನು ಬ್ರಿಟಿಷ್ ಅಧಿಕಾರಶಾಹಿ ಜೊತೆಗೆ ಸಂಪರ್ಕವನ್ನು ಹೆಚ್ಚಿಸಿತು. ಆ ಮೂಲಕ ಕೊಡವ ಸಮುದಾಯದ ಮುಖ್ಯಸ್ಥರು ಪ್ರಭಾವ ಶಾಲಿಗಳಾದರು.

ಬ್ರಿಟಿಷ ಆಡಳಿತದಿಂದ ೧೮೮೦ ರಿಂದ ೧೮೫೮ರವರೆಗೆ ಆಸ್ತಿ ವಿಭಜನೆಯ ವಿಚಾರಣೆ ಸಂಬಂಧಪಟ್ಟಂತೆ ನ್ಯಾಯ ವಿಲೇವಾರಿಗಳಾದವು ಎಂಬುದನ್ನು ಈಗಾಗಲೇ ಸ್ವರೂಪ ವಿವರಣೆ

ಅಧ್ಯಾಯದಲ್ಲಿ ಗಮನಿಸಿದ್ದೇವೆ. ಅಂದರೆ ಹಳೆಯ ನಾಡು-ಊರು-ಮಂದ್-ಪಟ್ಟಿ-ತಕ್ಕರು ಮೊದಲಾದ ಸಾಂಪ್ರದಾಯಿಕ ನ್ಯಾಯ ವ್ಯವಸ್ಥೆಯನ್ನು ಬದಲಾಯಿಸಿ ಬ್ರಿಟೀಷ್ ನ್ಯಾಯಾಲಯಗಳು ಮತ್ತು ನ್ಯಾಯಾಧೀಶರು ನ್ಯಾಯ ವಿಲೇವಾರಿ ಮಾಡಲು ಪ್ರಾರಂಭಿಸಿದರು. ೧೮೩೪ ಆಗಸ್ಟ್ ೩೦ರಲ್ಲಿ "ರೂಲ್ಸ್ ಆಫ್‌ದಿ ಕಂಡಕ್ಟ್ ಆಫ್ ದಿ ಡಿಸ್ಟ್ರಿಕ್ಟ್ ಫಂಕ್ಷನರಿಸ್ ಇನ್ ಕೂರ್ಗ್" ಎನ್ನುವ ರೂಲ್ ಬುಕ್‌ನಲ್ಲಿ ಬ್ರಿಟಿಷ್ ನ್ಯಾಯಾಂಗ ಮತ್ತು ಕಾರ್ಯಾಂಗ ವ್ಯವಸ್ಥೆಯ ಬಗ್ಗೆ ಬೆಳಕು ಚೆಲ್ಲುತ್ತದೆ(ರಿಕ್ತರ್, ೧೮೭೦:೩೮೬). ಹಾಗೆಯೇ ೧೮೬೮ ಡಿಸೆಂಬರ್ ಒಂದರಲ್ಲಿ ಸಿವಿಲ್ ಮತ್ತು ಕ್ರಿಮಿನಲ್ ಕೋರ್ಟ್‌ಗಳ ವ್ಯವಸ್ಥೆಗಳ ಬಗ್ಗೆ ಮ್ಯಾನ್ಯುಯಲ್‌ನ್ನು ಹೊರಡಿಸುತ್ತಾರೆ(ರಿಕ್ತರ್, ೧೮೭೦:೩೯೭). ಹಾಗಾಗಿ ಸಾಂಪ್ರದಾಯಿಕ ನ್ಯಾಯ ವ್ಯವಸ್ಥೆ ಕುಸಿಯಿತು. ಈ ಪ್ರಕ್ರಿಯೆಯಲ್ಲಿ ಬ್ರಿಟಿಷ್ ಅಧಿಕಾರಕ್ಕೆ ಹೆಚ್ಚು ಹತ್ತಿರವಿದ್ದ ಮತ್ತು ಪ್ರಭಾವಶಾಲಿಗಳಾಗಿ ಕೊಡವ ಸಮುದಾಯ ಮತ್ತು ಇತರ ಕೃಷಿ ಕೇಂದ್ರಿತ ಸಮುದಾಯಗಳಿಗೆ ಬಹಳಷ್ಟು ಉಪಯೋಗಗಳಾದವು ಎಂಬುದಕ್ಕೆ ಈ ಕೆಳಗಿನ ಉಲ್ಲೇಖಗಳು ಪುಷ್ಟೀಕರಿಸುತ್ತದೆ.

> ರಾಜರ ಕಾಲದಲ್ಲಿ ಅರಮನೆಯಲ್ಲಿ ಚಾಕ್ರಿ ಮಾಡುತ್ತಿದ್ದ ಜಮ್ಮ ರೈತರನ್ನು ಈಗ ಅರಮನೆಯ ಹೊರಗೆ ಅದರಲ್ಲೂ ನಾಡುಗಳಲ್ಲೇ ಕೆಲಸದಲ್ಲಿ ತೊಡಗಿಸಿರುವದು ವಸಾಹತುಶಾಹಿ ಸರಕಾರದ ಬುದ್ಧಿವಂತಿಕೆಗೆ ಸಾಕ್ಷಿಯಾಗಿವೆ. ಈ ರೀತಿಯಲ್ಲಿ ಕೇಂದ್ರೀಕೃತ ಗೊಂಡಿದ್ದ ಅರಮನೆ ಚಾಕ್ರಿ ವ್ಯವಸ್ಥೆ ಬ್ರಿಟಿಷರ ಕಾಲದಲ್ಲಿ ವಿಕೇಂದ್ರೀಕೃತಗೊಂಡು ಹಳ್ಳಿಗಳಲ್ಲೆಲ್ಲಾ ಹರಡಿತು. ಸರಕಾರದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಜನ್ಮ ರೈತರನ್ನು ಹಳ್ಳಿಗಳಲ್ಲೇ ಹಿಟ್ಟಿ ಬಿಟ್ಟಿ ಚಾಕ್ರಿ ಮಾಡಲು ವ್ಯವಸ್ಥೆಮಾಡಿರುವುದು ಗಮನಾರ್ಹವಾಗಿದೆ. ಸಾಮ್ರಾಜ್ಯಶಾಹಿ ಆಡಳಿತ ವ್ಯವಸ್ಥೆ ಜಮ್ಮ ರೈತರನ್ನು "ರೂರಲ್ ಪೋಲೀಸ್" ಎನ್ನುವ ಸ್ಥಾನಕ್ಕೇರಿಸಿ ಅವರಿಗೆ ಹೊಸತೊಂದು ಸ್ಥಾನಮಾನವನ್ನು ನೀಡಿ ಬಿಟ್ಟಿ ಕೆಲಸಕ್ಕೆ ಒಂದು ಹೊಸ ಆಯಾಮವನ್ನೇ ನೀಡಿತು.
>
> ಇಷ್ಟೆಲ್ಲಾ ಆದರೂ, ೧೮೬೦ರ ದಶಕದಲ್ಲಿ ಬಿಟ್ಟಿ ಚಾಕ್ರಿಯಿಂದ ತಪ್ಪಿಸಿಕೊಳ್ಳಲು ಹಲವು ಜಮ್ಮ ರೈತರು ತಮ್ಮ ಜಮ್ಮ ಹಕ್ಕನ್ನು ಬಿಟ್ಟು ಕೊಡಲು ತಯಾರಿ ನಡೆಸುತ್ತಿದ್ದದ್ದು ತಿಳಿದುಬರುತ್ತದೆ. ೧೮೬೫ರಲ್ಲಿ ಈ ಅಂಶವನ್ನು ಅಂದಿನ ಚೀಫ್ ಕಮೀಷನರ್ ಎಲ್. ಬೌರಿಂಗ್ ಒತ್ತಿ ಹೇಳಿ, ಅದನ್ನು ತಡೆಗಟ್ಟಲು ಮಾರ್ಗಗಳನ್ನೂ ಸೂಚಿಸುತ್ತಾನೆ. ಬೌರಿಂಗ್ ಹೇಳುವಂತೆ ಜಮ್ಮ ರೈತರು 'ಸೇವೆ'ಯೇ ಮುಖ್ಯ ಲಕ್ಷಣವಾಗಿರುವ ಜಮ್ಮ ಭೂ ಒಡೆತನವನ್ನು ಮೈಸೂರಿಗರಿಗೆ ಮತ್ತು ಯುರೋಪಿಯನ್ನರಿಗೆ ಬಿಟ್ಟುಕೊಡುವುದು ಕೊಡವ ರಾಷ್ಟ್ರೀಯತೆಗೆ ಮಾರಕವಾಗುತ್ತದೆ. ಏಕೆಂದರೆ, ಒಂದು ವೇಳೆ ಜಮ್ಮ ಭೂ ಒಡೆತನ 'ಹೊರಗಿನವರ' ಪಾಲಾದರೆ ಅವರಿಂದ ಅಂತಹ ಸೇವೆಯನ್ನು ಪಡೆಯಲು ಸಾಧ್ಯವಿಲ್ಲ. ಭಾರತದ ಗರ್ವನರ್ ಜನರಲ್‌ನು ಬೌರಿಂಗ್‌ನ ಸಲಹೆಗಳನ್ನು ಅಂಗೀಕರಿಸಿ ಅವುಗಳನ್ನು ಕಾರ್ಯಗತಗೊಳಿಸಲು ಆಜ್ಞೆ ಹೊರಡಿಸಿದನು. ಬೌರಿಂಗ್‌ನ ಈ ಮೇಲಿನ ಅಭಿಪ್ರಾಯ ಒಂದೆಡೆಯಾದರೆ, ಇನ್ನೊಂದೆಡೆ "ಈ ಪುಟ್ಟ ರಾಷ್ಟ್ರದ ಯೋಧರ ಉಜ್ವಲ ಗೌರವ, ಸ್ವಾಮಿನಿಷ್ಠೆ ನಿರ್ಭೀತ ಗುಣಲಕ್ಷಣಗಳನ್ನು ಪರಿಗಣಿಸಿ ಅವರನ್ನು ಮಾರ್ಕ್ ಕಬ್ಬನ್‌ನ ೧೮೬೧ರ ಸಶಸ್ತ್ರ ಕಾಯಿದೆಯಿಂದ ವಿನಾಯಿತಿಗೊಳಿಸುವ ವಸಾಹತು ಸರಕಾರದ

> ನೀತಿ ವಿರೋಧಾಭಾಸವನ್ನು ಹೊರಸೂಸುತ್ತದೆ. ಬೇರೆ ಪ್ರಾಂತ್ಯಗಳಿಂದ ವಲಸೆ ಬಂದವರಿಂದ ಬಿಟ್ಟಿ ಚಾಕ್ರಿ ಮಾಡಿಸಲು ಸಾಧ್ಯವಿಲ್ಲದ್ದರಿಂದ ಜಮ್ಮ ಭೂಮಿಯನ್ನು ರಾಜರ ಕಾಲದಿಂದಲೇ 'ಪರಭಾರೆ ಮಾಡಲು ಸಾಧ್ಯವಿರಲಿಲ್ಲ' ಎನ್ನುವ ವಿಷಯವನ್ನು ಒತ್ತಿ ಹೇಳುತ್ತಾ, ಜಮ್ಮ ಭೂಮಿ ಬೇರೆ ಪ್ರಾಂತ್ಯಗಳಿಂದ ವಲಸೆ ಬಂದವರ ಪಾಲಾಗದಂತೆ ಬ್ರಿಟೀಷ್ ಸರಕಾರ ಕ್ರಮ ತೆಗೆದುಕೊಂಡಿದ್ದು ಕಂಡುಬರುತ್ತದೆ. ೧೮೭೮ರಲ್ಲಿ ಲೀವಿಸ್ ರೈಸ್ ಹೇಳಿದಂತೆ ಕೊಡಗರನ್ನೊಂದು ರಾಷ್ಟ್ರವನ್ನಾಗಿ ಪರಿಗಣಿಸಿದಾಗ ಅವರದಾದ ಭೂಮಿಯ ನೈತಿಕ ಒಡೆತನವನ್ನು ಅವರಿಂದ ಕಸಿದುಕೊಂಡದ್ದೇಯಾದರೆ ಉನ್ನತ ಜನಾಂಗವೊಂದರ ಆತ್ಮಗೌರವ ಮತ್ತು ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದೇ ಅಲ್ಲದೆ ಭಾರತದ ಮತ್ತಾವ ಜನಾಂಗ ಅಥವಾ ವರ್ಗಕ್ಕೆ ಕಡಿಮೆಯಿಲ್ಲದಂತೆ ಬ್ರಿಟಿಷರಿಗೆ ನಿಷ್ಠವಾಗಿರುವ ಒಂದು ರಣಕಲಿಗಳ ರಾಷ್ಟ್ರವಾದ ಕೊಡಗರ ಸೇವೆಯಿಂದ ಬ್ರಿಟಿಷರು ವಂಚಿತರಾಗ ಬೇಕಾಗುತ್ತದೆ (ತಂಬಂಡ, ೨೦೦೦:೭೩-೭೪).

ಎನ್ನುವ ವಿವರಗಳಲ್ಲಿ ಬ್ರಿಟಿಷ್ ಆಡಳಿತದ ಕಾನೂನು ಮತ್ತು ನಿಯಮಗಳನ್ನು ಕೃಷಿಕೇಂದ್ರಿತ ಸಮುದಾಯಗಳು, ಅದರಲ್ಲೂ ಮುಖ್ಯವಾಗಿ ಕೊಡವ ಸಮುದಾಯವು ಪ್ರಭಾವ ಬೀರಿ ತಮ್ಮ ಅನುಕೂಲಕ್ಕೆ ಬಳಸಿಕೊಂಡದ್ದನ್ನು ಗಮನಿಸಬಹುದು. ಹಾಗಾಗಿ ಈ ಎಲ್ಲ ಅಧಿಕಾರಿವರ್ಗದವರೂ ಅಂದಿನ ಕಾಲಘಟ್ಟದಲ್ಲಿ 'ಎಲೈಟ್' ವರ್ಗವಾಗಿ ಮಾರ್ಪಟ್ಟಿತು. ಅದೇ ಸಮಯದಲ್ಲಿ ಕೊಡವ ಸಮುದಾಯವು ಪ್ರಬಲವಾಗಿ ಬೆಳೆದದ್ದು ಚಾರಿತ್ರಿಕವಾಗಿ ಮುಖ್ಯವಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಹಂತಹಂತವಾಗಿ ಮೂಲೆಗುಂಪಾಗಿದ್ದು ಅಲ್ಪ ಸಂಖ್ಯಾತರಾದ ಕುಶಲಕರ್ಮಿ ಮತ್ತು ಕಾರ್ಮಿಕ ಸಮುದಾಯಗಳು ಎನ್ನುವುದು ಮುಖ್ಯವಾಗುತ್ತದೆ.

೧೯೪೭-೧೯೫೬ರ ಅವಧಿಯಲ್ಲಿ ದೇಶಕ್ಕೆ ಬಂದ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ ಆಡಳಿತದ ಫಲವಾಗಿ ಕೊಡಗಿನ ಸೂತ್ರವು ನೇರವಾಗಿ ಕೊಡವ ಸಮುದಾಯದ ಕೈಗೆ ಬಂತು ಎನ್ನುವುದು ಮುಖ್ಯವಾಗುತ್ತದೆ. ೧೯೫೨ರಲ್ಲಿ ರಚನೆಗೊಂಡ ಕೊಡಗಿನ 'ಸಿ' ರಾಜ್ಯ ವ್ಯವಸ್ಥೆಯಲ್ಲಿ ಮುಖ್ಯಮಂತ್ರಿಯಾಗಿದ್ದವರು ಕೊಡವ ಸಮುದಾಯದ ಸಿ.ಎಂ. ಪೂಣಚ್ಚನವರು. ವಿರೋದಪಕ್ಷದ ನಾಯಕರೂ ಕೊಡವ ಸಮುದಾಯದ ಪಂದ್ಯಂಡ ಬೆಳ್ಳಪ್ಪನವರು ಆಗಿದ್ದರು. ಕೂರ್ಗ್ ಲೆಜಿಸ್ಲೇಟಿವ್ ಕೌನ್ಸಿಲ್ ೧೯೨೪-೧೯೫೨ ನಲ್ಲಾಗಲಿ, ಕೂರ್ಗ್ ಲೆಜಿಸ್ಲೇಟಿವ್ ಅಸೆಂಬ್ಲಿ(೧೯೪೭-೧೯೫೨) ನಲ್ಲಾಗಲಿ ಕೊಡವ ಸಮುದಾಯಗಳಿಗೆ ಮಾತ್ರ ಹೆಚ್ಚಿನ ಪ್ರಾತಿನಿಧ್ಯವಿತ್ತು, ಕೊಡವೇತರರಿಗೆ ಅನ್ಯಾಯವಾಯಿತು ಎನ್ನುವ ವಿಜಯ್ ಪೂಣಚ್ಚ ತಂಬಂಡ ಅವರ ಅಭಿಪ್ರಾಯಗಳು(ತಂಬಂಡ ೧೯೯೮:೧೩) ವಾಸ್ತವಾಗಿದ್ದು ಈ ಪ್ರಕ್ರಿಯೆ ಕೊಡಗಿನ ಸಾಂಪ್ರದಾಯಿಕ ನಾಡು-ನುಡಿ-ಸಾಮಾಜಿಕ ಸಂರಚನೆಯನ್ನು ಶಿಥಿಲಗೊಳಿಸಲು ಮತ್ತು ಶತಮಾನಗಳಿಂದ ಭದ್ರವಾಗಿದ್ದ ಸಾಮಾಜಿಕ ಸಂಬಂಧವೊಂದು ಧ್ರುವೀಕರಣಕ್ಕೆ ಒಳಗಾಯಿತು ಎನ್ನಬಹುದು.

೧೯೯೦ರ ದಶಕದ ಮೊದಲಾರ್ಧದಲ್ಲಿ ಕೊಡವ ಸಾಹಿತ್ಯ ಅಕಾಡೆಮಿಯು ಅಸ್ತಿತ್ವಕ್ಕೆ ಬಂದಿತು ಕೊಡವ ಸಾಹಿತ್ಯ ಅಕಾಡೆಮಿ ಮುಖ್ಯ ಉದ್ದೇಶವೇ ನಾಡು-ನುಡಿಯ ಅಂದರೆ ಕೊಡವ ಭಾಷೆ ಮತ್ತು ಸಂಸ್ಕೃತಿಯ ಬೆಳವಣಿಗೆಯಾಗಿತ್ತು. ಕೊಡವ ಭಾಷೆ ಎಂದರೆ ಒಂದು

ಸಮುದಾಯದ ಭಾಷೆ ಅಲ್ಲ ಅದು ಕೊಡಗಿನ ಕೊಡಗು ಭಾಷಿಕ ಕೃಷಿ ಕೇಂದ್ರಿತ, ಕುಶಲಕರ್ಮಿ ಮತ್ತು ಕೃಷಿ ಕಾರ್ಮಿಕ ಸಮುದಾಯಗಳ ಭಾಷೆ. ಅದರ ಔನತ್ಯ ಎಲ್ಲರದೂ ಜವಾಬ್ದಾರಿ. ಕೊಡವ ಸಾಹಿತ್ಯ ಅಕಾಡೆಮಿಯಲ್ಲಿ ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಪ್ರಭಾವವಿದ್ದರೂ, ಕೊಡಗಿನ ಕೊಡಗು ಭಾಷಿಕ ಕೊಡವೇತರ ಸಮುದಾಯಗಳಿಗೂ ಪ್ರಾತಿನಿಧ್ಯ ಸಿಕ್ಕಿರುವುದು ಒಳ್ಳೆಯ ಬೆಳವಣಿಗೆಯಾಗಿದೆ. ಆದರೆ ಇದುವರೆಗೆ ಕೊಡವರಲ್ಲದೆ ಉಳಿದ ಯಾವ ಸಮುದಾಯದಿಂದಲೂ ಕೊಡವ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರ ಆಯ್ಕೆ ಆಗಲಿಲ್ಲ ಎಂಬ ಅಸಮಾಧಾನವಿದೆ. ಕೊಡವ ಭಾಷೆ ಎಂದಾಗ ಅದು ಸಂಕುಚಿತ ಅರ್ಥದಲ್ಲಿ ಬಳಸಲಾಗುತ್ತಿರುವ ಬಗ್ಗೆ ಅನೇಕ ಬರಹಗಾರರು ಅತಂಕ ವ್ಯಕ್ತಪಡಿಸಿದ್ದಾರೆ. ಇತ್ತೀಚಿನ ಸಂಶೋಧನಾ ಪ್ರಬಂಧವೊಂದರಲ್ಲಿ ಕೆ.ಪಿ. ಲಲಿತ ಅವರು ಈ ಕೆಳಗಿನಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

> ಕೊಡವ ಎಂಬ ಶಬ್ದವನ್ನು ಭಾಷೆಯಾಗಿ ಪರಿಗಣಿಸಿ ಆ ಭಾಷೆಯನ್ನು ಮಾತನಾಡುವ ಈ ತಾಲೂಕಿನ ವಿವಿಧ ಸಮುದಾಯಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ತಾಲೂಕಿನ ಗ್ರಾಮ ಸಂರಚನೆಯನ್ನು ಅಧ್ಯಯನ ಮಾಡಲಾಗಿದೆ. ಏಕೆಂದರೆ ಈ ತಾಲೂಕಿನ ಪ್ರಮುಖ ಭಾಷೆಯಾದ ಕೊಡವ ಭಾಷೆಯನ್ನು ಮಾತನಾಡುವ ಅನೇಕ ಸಮುದಾಯಗಳು ಇಲ್ಲಿವೆ. ಅವುಗಳಲ್ಲಿ ಒಂದೊಂದಕ್ಕೂ ಯಾವುದೇ ವೈವಾಹಿಕ ಸಂಬಂಧಗಳಿಲ್ಲದ ಬುಡಕಟ್ಟುಗಳು ಬಹಳ ಮುಖ್ಯವಾದವು. ಅವುಗಳಲ್ಲಿ ಅಮ್ಮಕೊಡವ, ಹೆಗ್ಗಡೆ, ಐರಿ, ಕೋಯವ, ಬಣ್ಣ, ಪಣಿಕ್ಕ, ಕಣಿಯ ನಾಯಿಂದ ಮುಂತಾದ ಸ್ಥಳೀಯ ಸಮುದಾಯಗಳು ಮಾತನಾಡುವ ಭಾಷೆ, ಅವುಗಳು ಆಚರಣೆಯಲ್ಲಿ ಇಟ್ಟುಕೊಂಡಿರುವ ಪದ್ಧತಿಗಳು, ಉಡುಗೆ, ತೊಡುಗೆ, ಸಂಪ್ರದಾಯಗಳೆಲ್ಲವೂ ಒಂದೇ. ಇದಕ್ಕೂ ಹೆಚ್ಚಾಗಿ ಈ ಪ್ರದೇಶದ ಮೂಲ ನಿವಾಸಿಗಳಾದರೂ ದಲಿತ ವರ್ಗಕ್ಕೆ ಸೇರಿದೆ, 'ಕೆಂಬಟ್ಟಿ' ಸಮುದಾಯದವರೂ ಮಾತನಾಡುವ ಭಾಷೆ ರೀತಿ, ನೀತಿ, ಸಂಸ್ಕೃತಿ, ಆಚಾರ ವಿಚಾರ ಉಡುಗೆ ತೊಡಿಗೆ ಇವೆಲ್ಲವೂ ಕೊಡವ ಸಮುದಾಯದವರಂತೆಯೇ ಇದೆ. ಇದರಿಂದಾಗಿ ಈ ಸ್ಥಳೀಯ ಸಂಸ್ಕೃತಿಯೆಂದರೆ ಕೊಡವ ಸಂಸ್ಕೃತಿ, ಕೊಡವ ಸಮುದಾಯದ ಸಂಸ್ಕೃತಿಯೆಂಬ ತಪ್ಪು ಕಲ್ಪನೆಯನ್ನು ಹೋಗಲಾಡಿಸುವ ಉದ್ದೇಶದಿಂದ ಕೊಡವ ಭಾಷೆಯನ್ನಾಡುವ ಜನಗಳ ಸಂಸ್ಕೃತಿ ಎಂಬ ಮೂಲ ನಿಲುವಿಗೆ ಬದ್ಧವಾಗಿ ಇಲ್ಲಿ ವಿಷಯ ಮಂಡನೆಯನ್ನು ಮಾಡಲಾಗಿದೆ. ಕೊಡವ ಸಂಸ್ಕೃತಿ ಎಂದರೆ ಅದೊಂದು ಸಮುದಾಯದ ಸಂಸ್ಕೃತಿ ಎನ್ನುವ ಸಂಕುಚಿತ ಅರ್ಥದಲ್ಲಿ ನೋಡಿದರೆ ಕೊಡವ ಭಾಷೆಯನ್ನು ಮಾತನಾಡುವ, ಅದೇ ಸಂಸ್ಕೃತಿಯನ್ನು ತಲೆತಲಾಂತರಗಳಿಂದ ಆಚರಣೆಯಲ್ಲಿಟ್ಟುಕೊಂಡು ಪೋಷಿಸಿ ಬೆಳೆಸುತ್ತಿರುವ ಇನ್ನುಳಿದ ಬುಡಕಟ್ಟುಗಳನ್ನು ಈ ಸಂಸ್ಕೃತಿಯಿಂದ ಹೊರಗಿಟ್ಟಂತಾಗುತ್ತದೆ. ಈ ತಾಲೂಕಿನ ಹಲವು ಬುಡಕಟ್ಟುಗಳಲ್ಲಿ ಒಂದಾದ ಕೊಡವರ ಸಂಸ್ಕೃತಿಯೇ ಕೊಡವ ಸಂಸ್ಕೃತಿ ಎಂಬುದು ತಪ್ಪು ಕಲ್ಪನೆ. ಕೊಡವ ಸಂಸ್ಕೃತಿ ಎಂದರೆ ಕೊಡವ ಭಾಷೆಯ ನ್ನಾಡುವವರ ಸಂಸ್ಕೃತಿಯಾಗಿದೆ. ಇದೇ ಅಲ್ಲದೆ ಕೊಡವ ಭಾಷೆಯನ್ನಾಡುವ ಕೊಡವ ಸಂಸ್ಕೃತಿಯನ್ನು ಅನುಸರಿಸದ, ಆದರೆ ಈ ಸ್ಥಳೀಯ ಮಣ್ಣಿನ ಭಾಷೆಯಾದ ಎರವ, ಕುರುಬ, ಕುಡಿಯ, ಮೊದಲಾದ ಭಾಷೆಗಳನ್ನಾಡುವ ಹಾಗೂ ಅವರದೇ ಆದಂಥ

ಆಚಾರ ವಿಚಾರಗಳನ್ನು ಹೊಂದಿರುವ ಬುಡಕಟ್ಟು ಪಂಗಡಗಳೂ ಈ ತಾಲೂಕಿನಲ್ಲಿವೆ. ಆದರೆ ಕೊಡವ ಸಂಸ್ಕೃತಿ ಕೊಡವ ಭಾಷೆಯನ್ನಾಡುವವರ ಸಂಸ್ಕೃತಿ ಎನ್ನುವ ಸಮೀಕರಣ ದಲ್ಲಿ ಇವರೆಲ್ಲಾ ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕ ವಾಗಿ ದುರ್ಬಲಗೊಂಡಿದ್ದಾರೆ ಎನ್ನಬಹುದು(ಲಲಿತ, ೨೦೧೫:೧೮೭-೮೮).

ಹಾಗಾಗಿ ಕೊಡವಭಾಷೆ ಮತ್ತು ಸಂಸ್ಕೃತಿಯ ಬೆಳವಣಿಗೆಯ ದೃಷ್ಟಿಯಿಂದ ಶತಮಾನಗಳಿಂದ ಕೊಡಗಿನ ಸಂಸ್ಕೃತಿಯ ಬೇರುಗಳಾದ ಕುಶಲ ಕರ್ಮಿ, ಕೃಷಿಕಾರ್ಮಿಕ ಮತ್ತು ಎಲ್ಲ ಕೃಷಿಕೇಂದ್ರಿತ ಸಮುದಾಯಗಳು ನಾಡು ನುಡಿಯ ಬೆಳವಣಿಗೆಗೆ ಮುಖ್ಯವಾಗುತ್ತಾರೆ.

ಸಾಂಪ್ರದಾಯಿಕ ನಾಡಿನ ಚೌಕಟ್ಟಿನೊಳಗೆ ಕೃಷಿಕೇಂದ್ರಿತ ಸಮುದಾಯಗಳು, ಕುಶಲಕರ್ಮಿ ಸಮುದಾಯಗಳು ಮತ್ತು ಕೃಷಿಕಾರ್ಮಿಕ ಸಮುದಾಯಗಳೂ ಪ್ರಧಾನ ಪಾತ್ರ ವಹಿಸಿತ್ತು. ಪ್ರಬಲ ವರ್ಗವಾದ ಕೊಡವರು ಮೇಲೆ ಹೆಸರಿಸಿದ ಐದು ನೆಲೆಗಳಲ್ಲಿ ಪ್ರಾಬಲ್ಯ ಸಾಧಿಸಿದರೂ ನಾಡಿನ ವಿಷಯ ಬಂದಾಗ ಸಮತೋಲನ ನಿಲುವನ್ನು ಹೊಂದಿತ್ತು. ಕೃಷಿ ಕೇಂದ್ರಿತ ಸಮುದಾಯ ಗಳ ಐನ್‌ಮನೆಗಳನ್ನು ರೂಪಿಸಲು ಕುಶಲಕರ್ಮಿ ಸಮುದಾಯದ ಐರಿಗಳು ಪ್ರಧಾನ ಪಾತ್ರ ವಹಿಸುತ್ತಿದ್ದರು. ಐರಿಗಳು ಮರಗೆಲಸ ಮೊದಲಾದ ಕೆಲಸಗಳಲ್ಲಿ ಪರಿಣತಿ ಇದ್ದುದರಿಂದ, ಇಂದು ನಾವು ಕಾಣುವ ಇಂಜಿನಿಯರ್‌ಗಳ ಪಾತ್ರ ವಹಿಸಿದ್ದರು. ಹಾಗೆಯೇ ಕೊಡಗಿನ ಸಾಂಪ್ರದಾಯಿಕ ಉಡುಪು ಗಂಡಸರ ಆಭರಣಗಳಾದ ಪೀಚೆಕತ್ತಿ, ಒಡಿಕತ್ತಿ ಮತ್ತು ಮಹಿಳೆಯರ ಆಭರಣಗಳಾದ ಪತ್ತಾಕ್, ಕೊಕ್ಕೆತಾತಿ, ಬಳೆ ಮೊದಲಾದವುಗಳನ್ನು ತಯಾರಿಸುವಲ್ಲಿ ಪರಿಣತ ರಾಗಿದ್ದರು. ಕೃಷಿಕೇಂದ್ರಿತ ಸಮುದಾಯಗಳು ತಮ್ಮ ಜೀವಕ್ರಮ ಮತ್ತು ಆಡಂಬರಗಳಿಗೆ ಐರಿಸಮುದಾಯವನ್ನು ಸಾಂಪ್ರದಾಯಿಕ ನಾಡು ವ್ಯವಸ್ಥೆಯಲ್ಲಿ ಅವಲಂಬಿಸಬೇಕಾದದ್ದು ಅನಿವಾರ್ಯವಾಗಿತ್ತು. ಹಾಗೆಯೇ ಕೋಯವರು ಎಲ್ಲ ಸಮುದಾಯಗಳ ಮನೆ ಬಳಕೆಯ ಕುಡಿಕೆ–ಮಡಕೆ ಅಗತ್ಯತೆಗಳಿಗೆ ಅನಿವಾರ್ಯವಾಗಿದ್ದರು. ಇವರ ಕರಕುಶಲತೆಯ ಅಡಿಗೆ ಪಾತ್ರೆಗಳಿಲ್ಲದಿದ್ದರೆ ಅಂದಿನ ಎಲ್ಲ ಸಮುದಾಯಗಳ ಮನೆಗಳಲ್ಲಿ 'ಅನ್ನ' ಬೇಯುತ್ತಿರಲಿಲ್ಲ. ಮಡಿವಾಳ ಸಮುದಾಯಗಳ ಮದುವೆ ಮುಂತಾದ ಸಮಾರಂಭಗಳಲ್ಲಿ 'ಮಡಿ' ಮಾಡಿ ಶುದ್ಧೀಕರಿಸುವ ಪ್ರಧಾನ ಪಾತ್ರ ವಹಿಸುತ್ತಿದ್ದರು. ಮಡಿವಾಳರಿಲ್ಲದೆ ಸಾಂಪ್ರದಾಯಿಕ ನಾಡು ವ್ಯವಸ್ಥೆಯಲ್ಲಿ ಮದುವೆಗಳು ನಡೆಯುತ್ತಿರಲಿಲ್ಲ. ಹಾಗೆಯೇ ಬಣ್ಣ, ಮಲೆಯ, ಪಣಿಕ ಮೊದಲಾದ ಸಮುದಾಯಗಳು ಹಬ್ಬ ಹರಿದಿನ ಮೊದಲಾದ ಸಂದರ್ಭಗಳಲ್ಲಿ ಸಾಂಸ್ಕೃತಿಕ ಆಚರಣೆಗಳಲ್ಲಿ ಪ್ರಧಾನ ಪಾತ್ರ ವಹಿಸಿದ್ದರು. ಎಲ್ಲ ಸಮುದಾಯಗಳ ಅಲೌಕಿಕ ಸಮಸ್ಯೆಗಳಿಗೆ ಇವರೇ ಪರಿಹಾರ ಸೂಚಿಸುತ್ತಿದ್ದರು. ಸಣ್ಣ ಪ್ರಮಾಣದ ವೈದ್ಯವೃತ್ತಿ, ಯಂತ್ರ ಮಾಡುವುದು, ಹೆರಿಗೆ ಮಾಡಿಸುವುದು ಮೊದಲಾದ ಕಾರ್ಯಗಳಲ್ಲಿ ಇವರು ಪರಿಣತಿ ಹೊಂದಿದ್ದರು. ಇವರು ಮುಖ್ಯವಾಗಿ ಕೃಷಿ ಕೇಂದ್ರಿತ ಸಮುದಾಯಗಳ ಕಷ್ಟಸುಖಗಳಿಗೆ ಸ್ಪಂದಿಸುತ್ತಿದ್ದರು. ಕುಡಿಯರ 'ಕಳ್ಳು' ಇಲ್ಲದೆ ಸಾಂಪ್ರದಾಯಿಕ ಆಚರಣೆಗಳಾದ 'ಕಾರಣತೆರೆ' ಮೊದಲಾದವುಗಳಿಗೆ ಚಾಲನೆ ಸಿಗುತ್ತಿರಲಿಲ್ಲ.

ಕೈಲ್‌ಪೊಳ್ದ್, ಹುತ್ತರಿ ಹಬ್ಬಗಳಲ್ಲಿ ಕೃಷಿಕಾರ್ಮಿಕ ಸಮುದಾಯಗಳು ಬಹಳ ಮುಖ್ಯ ಪಾತ್ರ ವಹಿಸುತ್ತಿದ್ದವು. ಎಲ್ಲ ಸಮುದಾಯಗಳೂ ಮಂದ್ ಮಾನಗಳಲ್ಲಿ ಕುಣಿಯಬಹುದಿತ್ತು ಎಂಬುದನ್ನು ಪಟ್ಟೋಲೆ ಪಳಮೆಯಲ್ಲಿ ನಡಿಕೇರಿಯಂಡ ಚಿಣ್ಣಪ್ಪನವರು ಉಲ್ಲೇಖಿಸಿರುವುದನ್ನು ಈಗಾಗಲೇ ಗಮನಿಸಿದ್ದೇವೆ. ಸಾಂಪ್ರದಾಯಿಕ ಗ್ರಾಮರಚನೆಯಲ್ಲಿ ಮದುವೆ ಸಮಾರಂಭಗಳಲ್ಲಿ 'ಊರ್‌ಪತ್ತಿ' ಎಂದು ಎಲ್ಲ ಸಮುದಾಯದವರಿಗೂ ಪ್ರತ್ಯೇಕ ಗೌರವಪೂರ್ವಕವಾದ ಊಟದ ವ್ಯವಸ್ಥೆ ಇತ್ತು. ಕೃಷಿ ಕೇಂದ್ರಿತ ಸಮುದಾಯಗಳು ಸಾಮಾಜಿಕ ಸ್ತರವಿನ್ಯಾಸದಲ್ಲಿ ಮೇಲ್ವರ್ಗದಲ್ಲಿದ್ದರೂ ಉಳಿದ ಸಮುದಾಯಗಳೊಡನೆ ಗೌರವಯುತ ಸಮತೋಲನ ಸಂಬಂಧವನ್ನು ಹೊಂದಿದ್ದರು. ಸಾವು ನೋವುಗಳ ಸಂದರ್ಭದಲ್ಲಿಯೂ ಎಲ್ಲ ಸಮುದಾಯಗಳು ಪರಸ್ಪರ ಸಹಕರಿಸುತ್ತಿದ್ದರು. ಈ ಎಲ್ಲ ವಿದ್ಯಾಮಾನಗಳೂ ವಸಾಹತು ಕಾಲಘಟ್ಟದಲ್ಲಿ ನಡೆಯುತ್ತಿತ್ತು.

೧೯೪೭ರ ನಂತರದಲ್ಲಿ ಪ್ರಜಾಸತ್ತಾತ್ಮಕ ಸರಕಾರ ದೇಶದಲ್ಲಿ ನೆಲೆಯಾದ ಕಾರಣ ಮತ್ತು ವ್ಯಕ್ತಿ ಸ್ವಾತಂತ್ರ್ಯ ಬಹಳ ಮುಖ್ಯವಾದ ಸಂವಿಧಾನಿಕ ಅಂಶವಾಗಿದ್ದುದರಿಂದ ಮೇಲಿನ ಎಲ್ಲ ಸಮುದಾಯಗಳೂ ಕ್ರಮೇಣ ತಮ್ಮ ವೃತ್ತಿಗಳನ್ನು ತೊರೆದು ಬೇರೆ ವೃತ್ತಿಗಳು, ನೌಕರಿಗಳು ಮೊದಲಾದ ಆಯ್ಕೆಗಳನ್ನು ಮಾಡಿಕೊಂಡರು. ಕಾಫಿ ಬೆಳೆಗೆ ಬೆಲೆ ಕಾಣುವವರೆಗೂ ನಗರಗಳಿಗೆ ಅವಕಾಶಗಳನ್ನು ಅರಸಿಕೊಂಡು ಎಲ್ಲ ಸಮುದಾಯದವರೂ ಹೋಗಲಾರಂಭಿಸಿದುದು ನಾಡಿನ ಮತ್ತು ನುಡಿಯ ಚೌಕಟ್ಟನ್ನು ಅಭದ್ರಗೊಳಿಸಿತು. ನಾಡು-ನುಡಿಗಳ ಸಾಂಪ್ರದಾಯಿಕ ವ್ಯವಸ್ಥೆ ಶಿಥಿಲಗೊಂಡಿತು. ಕುಶಲಕರ್ಮಿ ಸಮುದಾಯಗಳು ಶತಮಾನಗಳಿಂದ ಉಳಿಸಿಕೊಂಡು ಬೆಳೆಸಿಕೊಂಡು ಬರುತ್ತಿದ್ದ ಎಲ್ಲ ಸಮುದಾಯಗಳೂ ಸಾಂಪ್ರದಾಯಿಕ ವಿದ್ಯೆಗಳನ್ನು ಮುಂದುವರಿಸಲು ಇಚ್ಚಿಸಲಿಲ್ಲ. ಈ ಸಮುದಾಯಗಳ ಯುವಕರು ತಮ್ಮ ಹಿರಿಯರ ಸಾಂಪ್ರದಾಯಿಕ ವ್ಯಕ್ತಿಗಳ ಬಗ್ಗೆ ಕೀಳರಿಮೆ ಬೆಳೆಸಿಕೊಂಡಿದ್ದು ಇನ್ನೊಂದು ಮಹತ್ವದ ಸಂಗತಿ. ಹಾಗಾಗಿ ವಸಾಹತುಪೂರ್ವ, ವಸಾಹತು ಕಾಲಘಟ್ಟ ಮತ್ತು ಸ್ವಾತಂತ್ರ್ಯಾ ನಂತರದ ಕಾಲಘಟ್ಟದವರೆಗೂ ಅಂದರೆ ೧೯೭೦ರವರೆಗೂ ಸಾಂಪ್ರದಾಯಿಕ ನಾಡು-ನುಡಿಗಳ ಸಂಬಂಧಗಳು ಕ್ರಮೇಣ ಸಡಿಲಗೊಂಡವು. ೧೯೮೦ರ ನಂತರದಲ್ಲಿ ಕೊಡಗಿನಲ್ಲಿ ಕಾಣಿಸಿಕೊಂಡ ಚಳುವಳಿಗಳ ಫಲಿತಾಂಶಗಳನ್ನು ಈ ಹಿಂದೆ ನೋಡಿದ್ದೇವೆ. ಮುಖ್ಯವಾಗಿ ಪ್ರತ್ಯೇಕ ರಾಜ್ಯ ಚಳುವಳಿ ಸಂದರ್ಭದಲ್ಲಿ ಕೊಡಗಿನ ಮುಖಂಡರ ತಾತ್ವಿಕ ನಿಲುವುಗಳು ಏಕಪಕ್ಷಿಯವಾಗಿದ್ದು, ಸಾಂಪ್ರದಾಯಿಕವಾಗಿ ಸಂಬಂಧ ಹೊಂದಿದ್ದ ಉಳಿದ ಸಮುದಾಯಗಳನ್ನು ನಿರ್ಲಕ್ಷಿಸಲಾರಂಭಿಸಿದ್ದು, ನಾಡು ನುಡಿಗಳ ಸಾಂಪ್ರದಾಯಿಕ ಸಂಬಂಧಗಳನ್ನು ಸಡಿಲಗೊಳಿಸಿತು. ಕೊಡವ ಸಮುದಾಯದ ಪ್ರಾಬಲ್ಯ ಉಳಿದ ಸಮುದಾಯಗಳ ದೌರ್ಬಲ್ಯಗಳೂ ಆಗಿದ್ದವು. ಕೃಷಿಕೇಂದ್ರಿತ ಸಮುದಾಯಗಳಲ್ಲಿ ಒಂದಾದ ಕೊಡವರಿಗೆ ಉಳಿದ ಸಮುದಾಯಗಳ ಅವಶ್ಯಕತೆಗಳು ಆಧುನಿಕ ಕಾಲಘಟ್ಟದ ತಾಂತ್ರಿಕ ಒಲವುಗಳಿಂದ ಕಡಿಮೆಯಾಯಿತು. ಹಾಗಾಗಿ ಹಳೇ ಸಾಮಾಜಿಕ ಮೌಲ್ಯಗಳು ಮೂಲೆಗೊತ್ತಲ್ಪಟ್ಟು ಎಲ್ಲ ಸಮುದಾಯಗಳೂ ತಮ್ಮ ತಮ್ಮ

ಸಮುದಾಯಗಳ ಸಂಘಟನೆಗಳನ್ನು ಕಟ್ಟಿಕೊಳ್ಳಲಾರಂಭಿಸಿದುದು ಜಾಗತೀಕರಣದ ಸಂದರ್ಭದಲ್ಲಿ ಅನನ್ಯತೆಯ ಪ್ರಶ್ನೆಯಾಗಿದೆ.

೧೯೯೦ರ ನಂತರ ಜಾಗತೀಕರಣದ ಸಂದರ್ಭದಲ್ಲಿ ಪ್ರತೀ ಸಮುದಾಯಗಳಲ್ಲೂ ಅನನ್ಯತೆಯ ಪ್ರಶ್ನೆ ಜಾಗೃತವಾಯಿತು. ೧೯೯೭ರಲ್ಲಿ ಕೊಡವ ಹಾಕಿ ನಮ್ಮೆ(ಹಬ್ಬ) ಪ್ರಾರಂಭವಾಯಿತು. ಪ್ರತೀವರ್ಷ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಈ ಹಬ್ಬದಲ್ಲಿ ನೂರಾರು ಕೊಡವ ಒಕ್ಕಗಳು ಭಾಗವಹಿಸುತ್ತಾರೆ. ಕೊಡವರಂತೆಯೇ ಇತರ ಸಮುದಾಯಗಳಲ್ಲಿಯೂ ಪ್ರತೀ ಒಕ್ಕಗಳಿಗೆ ಅನನ್ಯತೆಯ ಪ್ರಶ್ನೆ ತಲೆ ಎತ್ತಿರುವುದು ಸ್ವಾರಸ್ವಕರ ಸಂಗತಿ. ಪ್ರಬಲವರ್ಗವಾದ ಕೊಡವರ ಸಮಾಜಗಳು, ಸಂಘಸಂಸ್ಥೆಗಳು ಫೆಡರೇಷನ್ ಆಫ್ ಕೊಡವ ಸಮಾಜಗಳ ಅಡಿಯಲ್ಲಿ ಒಂದು ಸ್ಟ್ರಕ್ಚರ್‌ಡ್ ವ್ಯವಸ್ಥೆಯಲ್ಲಿ ರೂಪುಗೊಂಡಿರುವುದನ್ನು ಗಮನಿಸಲಾಗಿದೆ. ಉಳಿದ ಅಲ್ಪಸಂಖ್ಯಾತ ಕೊಡವ ಭಾಷಿಕ ಹಾಗೂ ಉಳಿದ ಭಾಷಿಕ ಸಮುದಾಯಗಳೂ ಸಂಘಸಂಸ್ಥೆ ಮತ್ತು ಹಾಕಿ ಕ್ರಿಕೆಟ್ ಹಬ್ಬಗಳನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

ಜಾಗತೀಕರಣ ಪೂರ್ವದ ಸಂದರ್ಭದಲ್ಲಿ ನಾಡು-ನುಡಿ ಎನ್ನುವ ಅಂಶಗಳು ಪರಸ್ಪರರು ಕೂಡಿ ಇರುವ ಒಂದು ವ್ಯವಸ್ಥೆಯಾಗಿತ್ತು. ವಸಾಹತುಪೂರ್ವ ಕಾಲದಿಂದ ಏಕೀಕರಣದ ಹಂತದವರೆಗೆಯೂ ಇಂತಹ ವ್ಯವಸ್ಥೆಯನ್ನು ನಾವು ನೋಡಬಹುದಾಗಿದೆ. ಜಾಗತೀಕರಣದ ಲಾಭದಿಂದ ಈಗಾಗಲೇ ಬಲಾಢ್ಯವಾಗಿದ್ದ ಕೊಡವ ಮತ್ತಿತರ ಕೃಷಿ ಕೇಂದ್ರಿತ ಸಮುದಾಯಗಳು ಭಿನ್ನ ಭಿನ್ನ ಅನನ್ಯತೆಗಳಿಂದ ತಮ್ಮನ್ನು ಗುರುತಿಸಿಕೊಳ್ಳಲಾರಂಭಿಸಿದ್ದಾರೆ. ಕೊಡಗು, ನಾಡು ಎನ್ನುವ ಕಲ್ಪನೆಗಿಂತ ತಮ್ಮ ತಮ್ಮ ಸಮುದಾಯ ಕೇಂದ್ರಿತ ಗುರುತುಗಳು ಇಲ್ಲಿ ಪ್ರಧಾನ ವಾಗಿರುವುದನ್ನು ಗಮನಿಸಬಹುದು. ಇದಕ್ಕೆ ಕುಶಲಕರ್ಮಿ ಸಮುದಾಯಗಳೂ ಹೊರತಾಗಿಲ್ಲ. ನಾಡು-ನುಡಿ ಎನ್ನುವ ಪ್ರಶ್ನೆ ಈ ಸಂದರ್ಭದಲ್ಲಿ ಸಂಕೀರ್ಣವಾಗಿರುವುದನ್ನು ಗುರುತಿಸಬಹುದಾಗಿದೆ. ಕೃಷಿ ಕೇಂದ್ರಿತ ಹಾಗೂ ಕುಶಲಕರ್ಮಿ ಸಮುದಾಯಗಳ ಚಾಕರಿಯಲ್ಲಿದ್ದ, ಆದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಮಾನ ಸ್ಥಾನಮಾನವನ್ನು ಪಡೆಯುವಲ್ಲಿ ಅಲ್ಲಲ್ಲಿ ಸಫಲರಾದ ಕೃಷಿ ಕೂಲಿಕಾರ್ಮಿಕ ಸಮುದಾಯಗಳಿಗೆ ಈ ಸಂದರ್ಭದಲ್ಲಿ ತಮ್ಮ ತಮ್ಮ ಗುರುತುಗಳಿಗೆ ನಡೆಸುವ ಹೋರಾಟಕ್ಕಿಂತ, ಬದುಕಿನ ಹೋರಾಟದ ಪ್ರಶ್ನೆಗಳೇ ಮುಖ್ಯವಾಗಿರುವುದನ್ನು ಗಮನಿಸಬಹುದು.

**ಕೊನೆ ಟಿಪ್ಪಣಿಗಳು**

೧. ವಸಾಹತುಪೂರ್ವದ 'ನಾಡು ಕಲ್ಪನೆಯ ಕೊಡಗಿನಲ್ಲಿ ಕೃಷಿಕೇಂದ್ರಿತ ಸಮುದಾಯಗಳು, ಕುಶಲಕರ್ಮಿ ಮತ್ತು ಇತರ ವೃತ್ತಿಪರ ಸಮುದಾಯಗಳು ಹಾಗೂ ಕೃಷಿಕಾರ್ಮಿಕ ಸಮುದಾಯಗಳು ಒಟ್ಟಿಗೆ ಸೇರಿ ಸಮನ್ವಯತೆಯ ಬದುಕನ್ನು ರೂಪಿಸಿಕೊಂಡಿದ್ದರು. ಅಂದಿನ ನಾಡು ಸ್ವಾಯತ್ತತೆಯನ್ನು ಹೊಂದಿತ್ತು.

೨. ಕೊಂಬು – ವಸಾಹತುಪೂರ್ವದಲ್ಲಿ ದೇಶವನ್ನು ರೂಪಿಸುವ ಅಥವಾ ಕಟ್ಟುವ ಸಂದರ್ಭದಲ್ಲಿ ಕೊಡಗು ೧೨ ಕೊಂಬುಗಳನ್ನು, ೩೫ ನಾಡುಗಳನ್ನು ಹೊಂದಿದ್ದವು. ಇಲ್ಲಿ ಕೊಂಬುಗಳು ಎಂದರೆ – ಒಂದು ಬೆಟ್ಟದ ತುದಿಯಲ್ಲಿ ನಿಂತು ಕೊಂಬು ಕಹಳೆಯನ್ನು ಊದಿದರೆ ಎಲ್ಲಿಯವರೆಗೆ ಅದರ ಧ್ವನಿ ಕೇಳುತ್ತದೋ ಅಲ್ಲಿಯವರೆಗೆ ಒಂದು ಕೊಂಬು. ಅಂತಹ ೧೨ ಕೊಂಬುಗಳ ಒಳಗೆ ೩೫ ನಾಡುಗಳು ಸೇರಿದ್ದವು.

೩. ಅರೆಬಾಚೆಕಾರ – ಅರ್ಧ ಆಯುಷ್ಯದಲ್ಲಿ ಸತ್ತವರನ್ನು ಕೊಡಗಿನ ಹಳೇ ಭಾಷೆಯಲ್ಲಿ ಅರೆಬಾಚೆಕಾರರು ಎನ್ನುತ್ತಿದ್ದರು.



ಅಧ್ಯಾಯ : ಐದು

# ಕೊಡಗಿನ ಪರಿಸರದ ಕಡಂಗಗಳ ಸ್ವರೂಪ ಮತ್ತು ವಿವರಣೆ

೫.೧. ಕಡಂಗಗಳ ಅರ್ಥ ಮತ್ತು ವಿವರಣೆ

೫.೨. ಕಡಂಗಗಳ ಸ್ವರೂಪ, ರಚನೆ ಮತ್ತು ವಿನ್ಯಾಸ

೫.೩. ಐನ್‌ಮನೆ ಕಡಂಗಗಳು ಮತ್ತು ಜಮೀನು ಕಡಂಗಗಳು

೫.೪. ಅರಮನೆ/ನಾಡು ಕಡಂಗಗಳು ಮತ್ತು ರಕ್ಷಣಾತ್ಮಕ ಕಡಂಗಗಳು

೫.೫. ಊರು ಕಡಂಗಗಳು, ದೇವನೆಲೆ ಕಡಂಗಗಳು ಮತ್ತು ಸರಹದ್ದು ಕಡಂಗಗಳು

೫.೬. ಕಡಂಗಗಳ ಮಹತ್ವ

೫.೭. ಕಡಂಗಗಳ ರಾಜಕೀಯ ಮತ್ತು ಸಾಮಾಜಿಕ ಆಯಾಮಗಳು

ಅಧ್ಯಾಯ : ಐದು

# ಕೊಡಗಿನ ಪರಿಸರದ ಕಡಂಗಗಳ ಸ್ವರೂಪ ಮತ್ತು ವಿವರಣೆ

**ಕ**ಡಂಗಗಳ ರಚನೆ ಬಹುಶಃ ಕರ್ನಾಟಕದಲ್ಲಿ ಚರಿತ್ರೆಯಲ್ಲಿಯೇ ಬಹಳ ಅಪರೂಪವಾದುದು. ವಿಜಯನಗರೋತ್ತರ ವರ್ಷಗಳಲ್ಲಿ ಬಹಳ ಮುಖ್ಯವಾಗಿ ಕೊಡಗಿನ ಅನೇಕ ಕಡೆ ಕಂಡುಬರುವ ಕಡಂಗಗಳ ನಿರ್ಮಾಣ ಅಥವಾ ಸರಹದ್ದಿನ ನಿರ್ಮಾಣ ಸಂಶೋಧಕರಲ್ಲಿ ಆಸಕ್ತಿಯನ್ನು ಹುಟ್ಟಿಸಿದೆ. ಕಡಂಗ ಎಂದರೆ ಸರಹದ್ದು, ಗಡಿ, ರಸ್ತೆ ಮತ್ತು ಹಾಗೆಯೇ ರಕ್ಷಣಾ ಕವಚವೂ ಹೌದು. ಐನ್‌ಮನೆಗಳ ಸುತ್ತ, ಊರಿನ ಬಹುಮುಖ್ಯವಾದ ಪ್ರದೇಶಗಳಿಗೆ ಹೋಗುವ ಸ್ಥಳಗಳಲ್ಲಿ ಕಡಂಗಗಳನ್ನು ಕಾಣಬಹುದು. ಕುಟುಂಬದ ಸದಸ್ಯರು ಗ್ರಾಮದ ಕೆಲಸಕ್ಕಾಗಿ, ಸ್ವಂತ ಕೆಲಸಕ್ಕಾಗಿ ಹಾಗೂ ಬಹಳ ಮುಖ್ಯವಾಗಿ ಅರಮನೆ ಚಾಕ್ರಿಯ ಉದ್ದೇಶಕ್ಕಾಗಿ ರಚನೆಗೊಂಡಿತ್ತು ಎಂದು ಅಭಿಪ್ರಾಯಪಡಬಹುದಾಗಿದೆ. ಈಗಲೂ ಕೊಡಗಿನ ಅನೇಕ ಕಡೆ ಕಡಂಗಗಳ ಉಳಿದುಕೊಂಡಿದೆ. ಅನೇಕ ಕಡೆ ಅದು ಅಳಿಸಿ ಹೋಗಿದೆ. ಕೆಲವು ಕಡೆ ಕಾಫಿ ತೋಟಗಳಾಗಿವೆ. ಐನ್‌ಮನೆಗಳಿಗೆ, ಗ್ರಾಮವಳಿಗೆ ಸರಹದ್ದನ್ನು ನೀಡಿದ ಹಾಗೆ ನಾಡು ನಾಡುಗಳ ನಡುವಿನ ಸರಹದ್ದನ್ನು ಗುರುತಿಸುವುದ್ದಕ್ಕಾಗಿ. ಕಡಂಗಗಳನ್ನು ನಿರ್ಮಿಸಬಹುದಾಗಿತ್ತು ಎನ್ನಬಹುದಾಗಿದೆ. ವಸಾಹತುಪೂರ್ವ ಕಾಲದಲ್ಲಿ ಪ್ರಬಲವಾಗಿ ಕಂಡುಬರುವ ಕಡಂಗಗಳು ವಸಹತುಕಾಲದಲ್ಲಿಯೂ ಅನೇಕ ಕಡೆ ಉಳಿದುಕೊಂಡರೂ ವಸಾಹತೋತ್ತರ ಕಾಲಘಟ್ಟದ ಸ್ಥಿತಿಯಂತರಗಳಿಂದಾಗಿ ಅವುಗಳು ಶಿಥಿಲಾವಸ್ಥೆಗೆ ತಲುಪಿದೆ.

ಈಗಾಗಲೆ ಹಿಂದಿನ ಅಧ್ಯಾಯವಾದ 'ನಾಡು ನುಡಿಯ ಅಭಿವ್ಯಕ್ತಿಯಾಗಿ ಒಕ್ಕ'ದಲ್ಲಿ ನಾಡು ಎಂದರೇನು? ನುಡಿ ಎಂದರೇನು? ಮತ್ತು ಇವುಗಳೊಂದಿಗೆ ಒಕ್ಕಗಳ ಸಂಬಂಧವನ್ನು ವಿವರವಾಗಿ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ನಾಡು ನುಡಿಗಳನ್ನು ಬೆಸೆಯುವಲ್ಲಿ ಈ ಕಡಂಗಗಳು ಹೇಗೆ ಮಹತ್ವದ ಪಾತ್ರವಹಿಸಿತು ಎನ್ನುವುದನ್ನು ಅನುಲಕ್ಷಿಸಲಾಗಿದೆ. ನಾಡು ಕಟ್ಟುವ ಪ್ರಕ್ರಿಯೆ ಕೊಡಗಿನಲ್ಲಿ ನಿರಂತರವಾಗಿ ನಡೆದಿದೆ. ನಾಡು ಕಟ್ಟುವಲ್ಲಿ ನುಡಿ ಸಕ್ರಿಯ ಪಾತ್ರ ವಹಿಸಿದೆ. ಹಾಗಾಗಿಯೇ ನಾವು 'ದೇಶ ಕಟ್ಟ ಪಾಟ್'ನ್ನು ಹಿಂದಿನ ಅಧ್ಯಾಯದಲ್ಲಿ ವಿಶೇಷವಾಗಿ ಅಧ್ಯಯನ ಮಾಡಲಾಗಿದೆ. ದೇಶ ಕಟ್ಟಲು ಬೇಕಾದ ಪರಿಕರಗಳ ಬಗ್ಗೆ ಕೊಡಗರ ಬಾಳೋ ಪಾಟ್(ದೇಶಕಟ್ಟ್ ಪಾಟ್)ನಲ್ಲಿ ವಿವರಗಳೀವೆ, ದೇಶಕಟ್ಟ್ ಪಾಟ್ ನುಡಿಯೇ ಆಗಿದೆ.

ಕೊಡಗು ದೇಶವನ್ನು ರೂಪಿಸುವಲ್ಲಿ ಮತ್ತು ಸಂಪರ್ಕ ಕಲ್ಪಿಸುವಲ್ಲಿ ಕಡಂಗಗಳು ಮಹತ್ತರ ಪಾತ್ರವಹಿಸಿದವು. ಒಕ್ಕ ಒಕ್ಕಗಳ ಮಧ್ಯೆ, ಊರು ಊರುಗಳ ಮಧ್ಯೆ, ನಾಡು ನಾಡುಗಳ ಮಧ್ಯೆ ಜನಸಂಚಾರ ಮತ್ತು ವ್ಯಾಪಾರ ವಹಿವಾಟು ಮಾರ್ಗಗಳಾಗಿಯೂ ಕಡಂಗಗಳು ಬಳಕೆಯಾದವು. ಇಷ್ಟೆಲ್ಲ ವಿವಿಧ ಆಯಾಮಗಳನ್ನು ಹೊಂದಿದ ಕಡಂಗಗಳು ಅಧ್ಯಯನ ಯೋಗ್ಯ ವಿಶಯವಾಗಿದೆ. ಒಕ್ಕ, ನಾಡು, ನುಡಿ, ಕಡಂಗಗಳು ಕೊಡಗು ದೇಶದ ಸ್ಥಾಪನೆಯಲ್ಲಿ ವಹಿಸಿದ ಪಾತ್ರಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ನೆಲದ ಮೇಲೆ ನಿಂತ ಕೋಟೆ, ಕೊತ್ತಲಗಳು, ಗಡಿ ಬೇಲಿಗಳು, ಗೋಡೆಗಳು, ಕುಟುಂಬ, ಸಮಾಜ, ಸಮುದಾಯ, ಜಿಲ್ಲೆ, ರಾಜ್ಯ, ರಾಷ್ಟ್ರ, ಹೀಗೆಲ್ಲಾ ವಿಭಜಿಸುವಲ್ಲಿ ಸುಲಭದ ಪ್ರಯೋಗಗಳಾಗಿ ಕಂಡರೂ ಇವುಗಳ ಪಾತ್ರ ಕೇವಲ ವಿಭಜನೆ ಮಾತ್ರವಾಗಿ ಉಳಿಯದೆ ರಕ್ಷಣೆಯೂ ಅವುಗಳ ಆಶಯವಾದುದು ವಿಶೇಷವಾಗಿತ್ತು. ಕುಟುಂಬ – ಕುಟುಂಬಗಳೊಳಗಿಂದ ರಾಷ್ಟ್ರ–ರಾಷ್ಟ್ರಗಳವರೆಗೆ ಬೇರ್ಪಡಿಸಿಕೊಂಡು ಬದುಕುವ ರೀತಿಯಿಂದಾಗಿ ಕೋಟೆ ಕೊತ್ತಲಾದಿಗಳನ್ನು ಕಟ್ಟಲಾಗದ ಕಡೆಗಳಲ್ಲಿ ಕಡಂಗಗಳನ್ನು ತೋಡುವ ಪ್ರಕ್ರಿಯೆಗಳು ಹುಟ್ಟಿಕೊಂಡವು. ಪ್ರತ್ಯೇಕತೆಯ ಕಾರಣಗಳೇನೆ ಇದ್ದರೂ ಪ್ರತ್ಯೇಕತೆಗೆ ಬಳಸಿದ ಸಾಧನಗಳೂ ವಿಭಿನ್ನವೆಂಬುದನ್ನು ನಾವಿಲ್ಲಿ ಮನಗಾಣಬೇಕಾಗುತ್ತದೆ. 'ಗಡಿ' ಎಂಬುದು ಮಿತಿಯ ಮಾತೇ ಆದರೂ, ಅದು ಸುರಕ್ಷತೆಯನ್ನು ಕೂಡ ಸಂರಕ್ಷಿಸುವುದಾಗಿದೆ. ಹಾಗಾಗಿ ಕೊಡಗು ಸಮಗ್ರ ನಾಡಾಗಿ ರೂಪುಗೊಳ್ಳಲು ಕಡಂಗಗಳು ವಹಿಸಿದ ಪಾತ್ರವನ್ನು ಇಲ್ಲಿ ಅಧ್ಯಯನ ಮಾಡುವುದು ಸೂಕ್ತವಾಗಿದೆ.

೧೯೯೦ರ ದಶಕದಿಂದೀಚೆಗೆ ಅನೇಕ ಕಡಂಗಗಳನ್ನು ಕಾಫಿ ಬೆಳೆಯ ತ್ವರಿತ ಪ್ರಗತಿಯಿಂದಾಗಿ ಮುಚ್ಚಲಾಯಿತು. ಆದರೆ ಅದಕ್ಕೂ ಮುನ್ನ ಕಾಫಿ ಬೆಳೆಯುವ ತೋಟಗಳ ನಡುವೆ ಕಡಂಗಗಳಿದ್ದು, ಇನ್ನು ಕೆಲವು ಕಡಂಗಗಳು ಕಾಡುಗಳಲ್ಲಿ ಇದ್ದವು. ಇಂತಹ ಕಾಡುಗಳಲ್ಲಿ ಮತ್ತು ಆ ಹೊತ್ತಿಗಾಗಲೇ ಇದ್ದ ಕಾಫಿ ತೋಟಗಳಲ್ಲಿ ಹಾದು ಹೋಗುತ್ತಿದ್ದ ಬೃಹದಾಕಾರದ ಉದ್ದನೆಯ ಹಾವಿನ ರೂಪದ ಕಂದಕಗಳು ವಿಸ್ಮಯಕಾರಿಯಾಗಿದ್ದವು. ಅನೇಕ ಸಾಕುಪ್ರಾಣಿಗಳು ಉರುಳಿ ಈ ರೀತಿಯ ಹಳ್ಳಗಳಿಗೆ ಬೀಳುವುದು, ಆಡುವ ಎಳೆಯ ಪ್ರಾಯದ ಮಕ್ಕಳು ಜಾರಿ ಬೀಳುವುದು, ಬೇಟೆಗಾರರು ಎಡವುದು ಕಡಂಗಗಳಲ್ಲಿ ಸಾಮಾನ್ಯವಾಗಿತ್ತು. ಜಾಗತೀಕರಣ ಮತ್ತು ಉದಾರೀಕರಣದ ಕಾರಣದಿಂದ ಯಾವಾಗ ಕಾಫಿ ಬೆಳೆಗೆ ಪ್ರಾಮುಖ್ಯತೆ ಬಂದಿತೋ, ಅಂದಿನಿಂದ ಎಕ್ಸ್‌ಕವೇಟರ್‌ನಂತಹ ಭಾರಿ ಯಂತ್ರಗಳನ್ನು ಬಳಸಿ ಈ ಕಡಂಗಗಳನ್ನು ಮುಚ್ಚಿ ಸಮತಟ್ಟು ಮಾಡಿ ಕಾಫಿ ಬೆಳೆಯಲು ಪ್ರಾರಂಭಿಸಿದರು, ಹಾಗಾಗಿ ಕೊಡಗಿನ ಉದ್ದಗಲಕ್ಕೂ ನೂರಾರು ಎಕರೆ ಕಡಂಗಗಳ ಜಾಗಗಳು ಜಮೀನುದಾರರ ವಶವಾಯಿತು. ಈ ಕಡಂಗಗಳ ಹಿಂದಿನ ಚಾರಿತ್ರಿಕ ಸಂಗತಿಗಳು, ರಾಜಕೀಯ ಮತ್ತು ಸಾಮಾಜಿಕ ಆಯಾಮಗಳು, ಕಡಂಗಗಳ ಸ್ವರೂಪ ಮತ್ತು ವಿವರಣೆ, ಕಡಂಗಗಳ ಅರ್ಥವಿವರಣೆ, ರಚನಾವಿನ್ಯಾಸಗಳು ಮೊದಲಾದ ವಿವರಗಳನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಕೊಡಗಿನಲ್ಲಿ 'ಕಡಂಗ' ಸರಹದ್ದಿನ ಸಾಧನವಾಗಿ ವಿಶೇಷ ರೀತಿಯಲ್ಲಿ ಬಳಕೆಗೊಂಡಿರುವುದು ಶೋಧಕರಿಗೂ ಸಾಧನವಾಗಲು ಕಾರಣವಾಗಿದೆ. ಕೊಡಗಿನ ಜನ ಜೀವನದ ನಡುವೆ 'ಒಕ್ಕ' ವ್ಯವಸ್ಥೆ ವಿಶಿಷ್ಟವಾಗಿರುವಂತೆ ಕೊಡಗಿನಾದ್ಯಂತ ಪಸರಿಸಿರುವ ಕಡಂಗದ ನಿರ್ಮಿತಿಯೂ ವಿಶಿಷ್ಟ ವಾದುದಾಗಿದೆ. ಕಡಂಗಗಳಿಲ್ಲದ ಕೊಡಗಿನ ಕಲ್ಪನೆ ಸಾಧ್ಯವಿಲ್ಲವಾದರೂ, ಕೊಡಗಿನ ಚಾರಿತ್ರಿಕ ನಿಗೂಢಗಳನ್ನು ತನ್ನೊಳಗೆ ಹುದುಗಿಸಿಕೊಂಡಿದ್ದರೂ, ಕಡಂಗಗಳು ಅಧ್ಯಯನಕಾರರ ಅವಜ್ಞೆಗೆ ಈಡಾದುದು ವಿಷಾದನೀಯ. ಕೊಡಗಿನ ನೆಲದಾಳದ ಚಾರಿತ್ರಿಕ ನಿಧಿಯಂತಿರುವ ಕಡಂಗಗಳ ಮಹತ್ವವನ್ನರಿತು ನಿರೂಪಿಸಲು ಪಾಶ್ಚಾತ್ಯರೇ ಬರಬೇಕಾಯಿತೆಂಬುದಕ್ಕೆ ಕೆಳಗಿನ ಈ ಮಾತುಗಳು ಸಾಕ್ಷಿಯಾಗುತ್ತವೆ. ರಿಕ್ತರ್ ಹೇಳುವಂತೆ:

> ಕೊಡಗಿನ ಬೆಟ್ಟಗುಡ್ಡಗಳಲ್ಲಿ, ದೇಶದ ಉದ್ದಗಲಕ್ಕೂ ಕಾಣಬರುವ ಕಂದಕಗಳನ್ನು 'ಕಡಂಗಗಳೆಂದು ಕರೆಯುತ್ತಾರೆ. ತಮ್ಮ ಭೂಪ್ರದೇಶಗಳ ರಕ್ಷಣೆಗೋಷ್ಕರ ಈ ಕಡಂಗಗಳನ್ನು ತೆಗೆಯಲಾಗಿದೆ. ಈ ರೀತಿಯ ಕಡಂಗಗಳು ಶತಮಾನಗಳ ಹಿಂದೆಯೇ ಕೊಡಗಿನ ಪರಿಸರದಲ್ಲಿ ಕಂಡು ಬಂದಿದ್ದು, ಕೊಡಗನ್ನು ೪೯ ವರ್ಷಗಳ ಕಾಲ ಆಳಿದ ದೊಡ್ಡ ವೀರಪ್ಪ ಅರಸನ ಕಾಲಕ್ಕೂ ಮುನ್ನವೇ ಕಡಂಗಗಳಿದ್ದವೆಂಬುದಕ್ಕೆ ರಾಜೇಂದ್ರನಾಮೆಯಲ್ಲಿ ಉಲ್ಲೇಖವಿದೆ. ಮೊದಲು ಇದ್ದ ಕಡಂಗಗಳನ್ನು ದುರಸ್ತಿ ಮಾಡಿದಲ್ಲದೆ, ಕೊಡಗಿನಾದ್ಯಂತ ಹೊಸ ಕಡಂಗಗಳನ್ನು ಅಗೆಸಿ, ಹದ್ದು ಬಸ್ತು ಉಕ್ಕಡಗಳನ್ನು ಮಾಡಿ, ಕಾಳಗ ಕಡಂಗಗಳ ನಿರ್ಮಾಣ ಮಾಡಿ ದೇಶದ ಸುಭದ್ರತೆಯನ್ನು ಕಾಪಾಡುವ ವ್ಯವಸ್ಥೆ ಮಾಡಿದರು. ಬೆಟ್ಟಗಳ ಸುತ್ತಲೂ, ಬಯಲು ಪ್ರದೇಶಗಳಲ್ಲಿ ನೂರಾರು ಮೈಲಿಗಳವರೆಗೆ, ಬೇರೆ ಬೇರೆ ದಿಕ್ಕುಗಳಲ್ಲಿ, ವಿಭಿನ್ನ ಗಾತ್ರಗಳಲ್ಲಿ ಕಡಂಗಗಳು ಕಾಣಿಸಿಕೊಳ್ಳುತ್ತವೆ. ಮೇಂದಲೆ ನಾಡಿನ ಕಡಂಗಗಳು ದೊಡ್ಡ ಗಾತ್ರದವುಗಳಾಗಿದ್ದು, ಕಡಂಗಗಳು ಆಳವಾಗಿಯೂ, ಅಗಲವಾಗಿಯೂ ಇರುತ್ತದೆ, ಆದರೆ ಕ್ಗ್ಗಟ್ಟ್‌ನಾಡಿನಲ್ಲಿ ಕಡಂಗಗಳು ಸಣ್ಣ ಗಾತ್ರದವಾಗಿರುತ್ತದೆ. ಈಗಾಗಲೇ ಹೇಳಿದಂತೆ ಇವುಗಳು ಕಾಳಗ ಕಡಂಗಗಳಾಗಿದ್ದು, ಅನೇಕ ಬಾರಿ ನಾಡು ನಾಡುಗಳ ನಡುವಿನ ಸರಹದ್ದು ಕಡಂಗಗಳೂ ಆಗಿರುತ್ತದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನನೊಂದಿಗಿನ ಸಮರದ ಸಮಯದಲ್ಲಿ ಕೊಡಗಿನಾದ್ಯಂತ ಕಡಂಗಗಳನ್ನು ಜೀರ್ಣೋದ್ಧಾರ ಮಾಡಿ ಕಲ್ಲಿನ ಉಕ್ಕಡಗಳನ್ನು ನಿರ್ಮಿಸಲಾಯಿತು. ಈ ರೀತಿಯಲ್ಲಿ ಕಂಡು ಬರುವ ಕಡಂಗಗಳು ೧೮೩೪ರಲ್ಲಿ ಬ್ರಿಟಿಷರು ಕೊಡಗನ್ನು ವಶಕ್ಕೆ ತೆಗೆದುಕೊಳ್ಳುವಾಗಲು, ಅವರ ಸೈನ್ಯಕ್ಕೆ ಕೂಡ ದುರ್ಗಮವಾಯಿತು.

ಎಂಬ ರಿಕ್ತರ್‌ರವರ ಮಾತುಗಳಲ್ಲಿ ಕಡಂಗಗಳ ಉದ್ದೇಶ, ವ್ಯಾಪ್ತಿ, ಪ್ರಾಮುಖ್ಯತೆ ಮತ್ತು ಚರಿತ್ರೆಗಳನ್ನು ಒಳಗೊಂಡಿದೆ. ಇನ್ನೊಬ್ಬ ಪಾಶ್ಚಾತ್ಯ ವಿದ್ವಾಂಶರಾದ ವಾಕರ್ ವಿಲ್ಕಿನ್ಸ್ ಅವರು

> "ಬಹುಶಃ ಪ್ರಪಂಚದ ಯಾವುದೇ ಭಾಗಗಳಲ್ಲೂ ಇಷ್ಟೊಂದು ಪುರಾತನ ಭೂಉತ್ಕನನ ಕಾರ್ಯವನ್ನು ಕಂಡಿದ್ದು ಇಲ್ಲ. ಖಂಡಿತವಾಗಿಯೂ ಈ ಪ್ರಮಾಣದ ಭೂಉತ್ಕನನವಾದ ಭೂಪ್ರದೇಶ ಇನ್ನೊಂದಿಲ್ಲ. ಬಹಳ ದುರ್ಗಮವಾದ, ಆಳವಾದ ರಚನೆಗಳನ್ನು ಬೆಟ್ಟಗಳ ಸುತ್ತಲೂ ಕಾಣಬಹುದು. ಸರಳವಾದ ಮತ್ತು ನೈಸರ್ಗಿಕವಾದ ವಿಧಾನವನ್ನು ಅನುಸರಿಸಿದ

ಆ ಕಾಲಘಟ್ಟದ ಅಭಿಯಂತರರ ಕಾರ್ಯ ಮೆಚ್ಚುವಂತದ್ದು. ಕಂದಕಗಳನ್ನು ತೆಗೆದ ಮಣ್ಣನ್ನು ಇಳಿಜಾರಾಗಿ ಹೊಂದಿಸಿ ಸುಲಭವಾಗಿ ಆ ಕಡೆಯಿಂದಲೂ ಶತ್ರುಗಳು ಹತ್ತಲು ಆಗದಂತೆ ನಿರ್ಮಿಸಲಾಗಿದೆ. ಶತಮಾನಗಳಿಂದ ನಿರ್ಮಿಸಲಾಗಿರುವ ಈ ಕಡಂಗ ಗಳು ಪೂರ್ವರಾಷ್ಟ್ರಗಳಲ್ಲೆಲ್ಲೂ ಕಂಡುಬರುವುದಿಲ್ಲ. ಈ ಮಟ್ಟದ ಕಡಂಗಗಳ ನಿರ್ಮಾಣಕ್ಕೆ ಬಳಸಲಾದ, ಕಾರ್ಮಿಕ ಶಕ್ತಿಯನ್ನು ಊಹಿಸಿದರೆ, ಆ ಕಾಲಘಟ್ಟದ ಸಾಮಾಜಿಕ ಹಾಗೂ ರಾಜಕೀಯ ಸ್ಥಿತಿಗತಿಳಗ ಮೇಲೆ ಬೆಳಕು ಚೆಲ್ಲುತ್ತದೆ"(ರಿಕ್ತರ್, ೧೮೭೦:೯೦–೯೧)

'ಪ್ರಪಂಚದ ಇನ್ನಾವುದೇ ಭಾಗಗಳಲ್ಲಿ ಇಷ್ಟು ದಟ್ಟವಾಗಿ ಕಾಣಿಸಿಕೊಳ್ಳುವುದಿಲ್ಲ' ಎಂಬ ಮಾತುಗಳಲ್ಲಿ ಕಡಂಗಗಳ ನಿರ್ಮಾಣ ಕಾರ್ಯವು ನಾಯಕರ ಕಾಲಘಟ್ಟಕ್ಕೂ ಮುಂಚಿನಿಂದಲೇ ಆರಂಭವಾಗಿದೆ ಎಂಬುದನ್ನು ಊಹಿಸಬಹುದು ಎಂಬ ಮಾತುಗಳು ಕೊಡಗಿನ ಕಡಂಗಗಳ ವಿಶಿಷ್ಟತೆಗೆ ಸಾಕ್ಷಿಯಾಗಿದೆ.

## ೫.೧. ಕಡಂಗಗಳ ಅರ್ಥ ಮತ್ತು ವಿವರಣೆ

'ಕಡಂಗ' ಎಂದರೆ ನಿಘಂಟಿನಲ್ಲಿ ಕಂದಕ, ಅಗಳು ಎಂಬರ್ಥವಿದೆ. ಕಂದಕ ಎಂದರೆ ಕೋಟೆಯ ಸುತ್ತ ಇರುವ ಆಳವಾದ ತಗ್ಗು ಪ್ರದೇಶ. ಕೋಟೆಯ ಸುತ್ತಲೂ ಆಳವಾಗಿ ನೆಲತೋಡಿ ಅಲ್ಲಿ ನೀರು ತುಂಬಲಾಗುತ್ತಿತ್ತು. ಇದರಿಂದ ಶತ್ರುಗಳು ಸುಲಭವಾಗಿ ಕೋಟೆಯನ್ನು ಭೇದಿಸಲು ಸಾಧ್ಯವಾಗುತ್ತಿರಲಿಲ್ಲ. ರಾಜನ ರಾಜ್ಯವನ್ನು ಕೋಟೆಗಳು ಸಂರಕ್ಷಿಸಿದರೆ, ಕೋಟೆಯನ್ನು ಕಂದಕಗಳು ರಕ್ಷಿಸುತ್ತಿದ್ದವು. ಕಡಂಗಕ್ಕೆ ಸಮರೂಪಿಯಾದ ಪದ ಕಂದರ. ಕಂದರವು ಕಣಿವೆಯ ಅರ್ಥ ಹೊಂದಿದ್ದು ಕಡಂಗು ಪದವು ಕಾಲುವೆ ಎಂಬ ಅರ್ಥದಲ್ಲಿ ಪ್ರಯೋಗಗೊಂಡಿದೆ. 'ಕಾಲುವೆಯಿಂದ ನೀರು ಹಾಯಿಸಲು ಮಾಡಿದ ಚಿಕ್ಕ ಹರಿವು' ಎಂಬ ಅರ್ಥವೂ ಕಡಂಗು ಪದಕ್ಕಿದೆ. ಕಡಂಗ ಎಂದರೆ ತೋಡು ಎಂದರ್ಥ. ಅಗಳ್, ಅಗಳು, ಅಗಳ್ತೆ–ಈ ಪದಗಳು ತೋಡುವುದು, ಅಗೆಯುವುದು, ಕಂದಕ ಎಂದೆಲ್ಲಾ ಅರ್ಥ ಪಡೆಯುತ್ತವೆ. ಕಡ, ಕಡವು ಎನ್ನುವುದಕ್ಕೆ ಹೊಳೆಯನ್ನು ದಾಟುವ ಸ್ಥಳ, ಗದ್ದೆ ಅಥವಾ ಹೊಲದಲ್ಲಿ ಒಂದು ಸೀಳು ಎಂಬುದಾಗಿ ಪ್ರಯೋಗಿಸಲಾಗಿದೆ. ಒಟ್ಟಾರೆಯಾಗಿ 'ಕಡಂಗ' ನಿಘಂಟುಗಳಲ್ಲಿ, ಕಂದಕ, ಕಾಲುವೆ ಮುಂತಾಗಿ ಅರ್ಥ ಹೊಂದುತ್ತದೆ. ಕಡಂಗಕ್ಕೆ ಸಂವಾದಿಯಾಗಿರುವ ಅಗಳು ಪದ ತೋಡುವಿಕೆಯಿಂದಾದುದೆಂಬುದನ್ನು ತೋರಗೊಡುತ್ತದೆ. ಅಗುಳು ಪದ ಪ್ರಾಚೀನ ಕಾಲದಲ್ಲಿಯೇ ಬಳಕೆಯಲ್ಲಿತ್ತು ಎಂಬುದಕ್ಕೆ "ಗೇಣು ಬಿಟ್ಟು ಅಗುಳು ದಾಟಿದ ಹಾಗೆ" "ನೆಲ ಅಗೆದು ನೆಳಲು ಹೂತ ಹಾಗೆ" ಗಾದೆಗಳು ಉದಾಹರಣೆಗಳಾಗುತ್ತವೆ.

ಕೊಡಗು ಭಾಷೆಯಲ್ಲಿ 'ಕಡಂಗಿ' ಎಂಬ ಶಬ್ದವು ನೀರಿಲ್ಲದ ಕಂದಕ ಎಂಬರ್ಥದಲ್ಲಿ ಬಳಕೆಯಲ್ಲಿದೆ. ಕೊಡವ-ಕನ್ನಡ ನಿಘಂಟಿನಲ್ಲಿ 'ಕಡಂಗ' ಎಂದರೆ ಉದ್ದಕ್ಕೂ ಕಟ್ಟೆ ಏರಿಸಲಾದ ಹಿಂದಿನ ಕಾಲದ ಮಣ್ಣಿನ ದಿಣ್ಣೆ. 'ಅಲ್ಲದೆ ಗ್ರಾಮದ ಸುತ್ತ ಹಿಂದಿನ ಕಾಲದಲ್ಲಿ ರಕ್ಷಣೆಗಾಗಿ

ತೋಡಿದ ಇಲ್ಲವೆ ಗಡಿ ಗುರುತಿನ ಹಳ್ಳದೊಡನಾದ ಏರಿ' ಎಂಬ ಅರ್ಥದಲ್ಲಿಯೂ ಈ ಶಬ್ದ ಬಳಕೆಯಾಗಿದೆ. ಕೊಡಗಿನ ಕಡಂಗಗಳನ್ನು ಕುರಿತು ವಿದ್ವಾಂಸರ ಅಭಿಪ್ರಾಯಗಳು ಈ ಕೆಳಗಿನಂತಿದೆ:

ಎಂ.ಜಿ.ನಾಗರಾಜ್ ಅವರು ತಮ್ಮ 'ಕೊಡಗಿನ ಹಾಲೇರಿ ರಾಜವಂಶವು' ಎನ್ನುವ ಕೃತಿಯಲ್ಲಿ "ಕಡಂಗಗಳ ಶರೀರದ ಆಕಾರವು ಬೋರಲಾದ ಆಂಗ್ಲಪದ S ಆಕಾರದಲ್ಲಿದ್ದರೂ ವಾಸ್ತುವ್ಯೂಹದಲ್ಲಿ ಅಗಳು, ಆಳ್ವೇರಿ, ಕಂದಕ, ಚಿಕ್ಕ ಬಾಗಿಲು ಇವೆಲ್ಲವೂ ರಕ್ಷಣೆಯ ಘಟಕಗಳಾಗಿ ಸೇರಿಕೊಂಡಿರುವುದು ಈ ರಚನೆಯ ವೈಶಿಷ್ಟ್ಯವೆನಿಸುತ್ತದೆ. ಅಂದು ಅಸ್ತಿತ್ವ ಪಡೆದ ಕಡಂಗಗಳು ಕೊಡಗಿನ ಜನರಿಗೆ ಅನುಕೂಲಕರವಾಗಿತ್ತು" ಎಂಬು ಅಭಿಪ್ರಾಯ ಪಡುತ್ತಾರೆ(ನಾಗರಾಜ್, ೨೦೦೪: ೪೨೪).

ಡಿ.ಎನ್. ಕೃಷ್ಣಯ್ಯ ಅವರು ಕಡಂಗಗಳ ಕುರಿತು ಕೊಡಗಿನಲ್ಲಿ "ಕೊಂಬುಗಳ ಮೇರೆಗಳಾಗಿ ಆಳವಾದ ಮತ್ತು ಅಗಲವಾದ ಕಡಂಗಗಳಿದ್ದವು. ನಾಯಕರ ಆಡಳಿತದ ನಂತರ ಆಳಿದ ಹಾಲೇರಿ ಅರಸರೂ ಮುಂದೆ ಕಡಂಗಗಳನ್ನು ಅಚ್ಚುಕಟ್ಟಾಗಿ ಇಟ್ಟುಕೊಂಡಿದ್ದರು. ಈ ಕಡಂಗಗಳು ಈಗಲೂ ಕೊಡಗಿನ ಎಲ್ಲ ಭಾಗಗಳಲ್ಲೂ ಕಂಡುಬರುತ್ತವೆ" ಎನ್ನುತ್ತಾರೆ(ಕೃಷ್ಣಯ್ಯ, ೧೯೯೫ (೧೯೭೪): ೬೭).

ಐ.ಮಾ. ಮುತ್ತಣ್ಣ ಅವರು ಕಡಂಗಗಳನ್ನು "ಉದ್ದಕ್ಕೂ ಏರಿಸಲಾದ ಹಿಂದಿನ ಕಾಲದ ಮಣ್ಣಿನ ದಿಣ್ಣೆ" ಎನ್ನುತ್ತಾರೆ(ಮುತ್ತಣ್ಣ, ೧೯೮೮:೩೩.).

ಬಿ.ಎಲ್.ರೈಸ್ ಅವರು–ನಾಯಕರು ತಮ್ಮ ಪ್ರಾಂತ್ಯವನ್ನು ರಕ್ಷಿಸಲು ಗಡಿಯಲ್ಲಿ ನಿರ್ಮಿಸಿದ ಕಂದಕಗಳೇ ಕಡಂಗಗಳು ಎನ್ನುತ್ತಾರೆ(ರೈಸ್, ೨೦೦೪(೧೮೭೮):೯೮).

ರೆವರೆಂಡ್ ರಿಕ್ತರ್ ಅವರು ಕಡಂಗಗಳನ್ನು 'ವಾರ್ ಟ್ರೆಂಚಸ್' (ಕಾಳಗ ಕಂದಕಗಳು) ಎನ್ನುತ್ತಾನೆ(ರಿಕ್ತರ್, ೨೦೧೪ (೧೮೭೦) : ೧೯೦–೯೧).

ಬಯಲಿನಲ್ಲಿಯೇ ರೂಪುಗೊಂಡ ಕೊಡಗಿನ ಕಡಂಗಗಳನ್ನು ಶೋಧನೆಯ ಮೂಲಕ ಬಯಲುಗೊಳಿಸುವುದು ಅಷ್ಟು ಸುಲಭದ ಮಾತೂ ಅಲ್ಲ. ಕೊಡಗಿನ ಕಡಂಗಗಳ ಅಸ್ಥಿತ್ವವನ್ನು ಕುರಿತಂತೆ ಶಾಸನಗಳಲ್ಲಿ ಮಾಹಿತಿ ದೊರೆಯುತ್ತದೆ. ಕ್ರಿ.ಶ.೯ನೇ ಶತಮಾನದ ಕಿಗ್ಗಟ್ಟು ನಾಡಿನ ಬಿಳಿಯೂರು ಶಾಸನದಲ್ಲಿ 'ಪೆಣ್ಣೆಂಗಡಲು'[೧] ಪದ ಪ್ರಯೋಗ ಕಂಡುಬರುತ್ತದೆ.

> "ಪಾಲ್ಗುಣ ಮಾಸದ ಶ್ರೀಪಂಚಮೆಯನ್ನು ಶಿವಣನ್ದಸಿದ್ಧಾನ್ತದ ಭಟರ ರಶಿಷ್ಯರ್ಸರ್ವ್ವಣನ್ದಿದೇವರ್ಗ್ಗೆ ಪೆಣ್ಣೆ ಗಡಂಗರ ಸತ್ಯವಾಕ್ಯ ಜಿನಾಲಯಕ್ಕೆ ಪೆದ್ದೊರೆಗರೆಯ ಬಿಳಿ ಊರ್ಪ್ಪನ್ನಿರ್ಪ್ಪಳ್ಳಿಯುಮಂ"ಎಂಬ ಈ ಶಾಸನದ ಉಲ್ಲೇಖಗಳಲ್ಲಿ ಕಡಂಗದ ಪ್ರಸ್ತಾಪ ಬರುತ್ತದೆ. ಅದಲ್ಲದೆ "ಕ್ರಿ.ಶ. ೯೭೮ರಲ್ಲಿ ಸತ್ಯವಾಕ್ಯ ಕೊಂಗಣಿವರ್ಮನು ತಲಕಾಡಿನಲ್ಲಿ ಆಳುತ್ತಿದ್ದಾಗ ಅವನ ತಮ್ಮ ರಕ್ಕಸಗಂಗನು ಪೆದ್ದೊರೆಗರೆಯನ್ನು ಆಳುತ್ತಿದ್ದನೆಂದೂ ಆಗ ಪೆಗ್ಗಡೂರು ಮತ್ತು ಹೊಸ ಕಡಂಗಳನ್ನು ಯಾವ ಅಭ್ಯಂತರವೂ ಇಲ್ಲದೆ ಶ್ರವಣಬೆಳಗೊಳದ ಅನಂತವೀರಯ್ಯ ಎಂಬ ಜೈನಗುರು ದಾನಪಡೆದನೆಂದು ಬರೆಯಲ್ಪಟ್ಟಿದೆ(ಕೃಷ್ಣಯ್ಯ ೧೯೭೪: ೩೬).

ಹಾಗಾಗಿ ಕಡಂಗಗಳು ಕೊಡಗಿನ ಪರಿಸರದಲ್ಲಿ ಸುಮಾರು ೧೩೦೦ ವರ್ಷಗಳಷ್ಟು ಹಳೆಯ ಇತಿಹಾಸವನ್ನು ಹೊಂದಿರಬಹುದಾದ ಸಾಧ್ಯತೆ ಇದೆ ಎನ್ನಬಹುದು. ತದನಂತರ ಕ್ರಿ.ಶ. ೧೨ನೇ ಶತಮಾನದಲ್ಲಿ ಮೌಕ್ತಿಕ ಕವಿ ರಚಿಸಿದ ಚಂದ್ರನಾಥಾಷ್ಟಕದಲ್ಲಿ ಕಡಂಗದ ವಿವರಣೆ ದೊರೆಯುತ್ತದೆ. ಹಾಲೇರಿ ಅರಸರ ಆಳ್ವಿಕೆಯ ಕಾಲಕ್ಕೆ ಕಡಂಗಗಳ ವಿವಿಧ ರೂಪಗಳ ಪರಂಪರೆಯೇ ತೆರೆದುಕೊಳ್ಳುತ್ತದೆ. ಮುಂದೆ ಮುದ್ದರಾಜನ ಕಾಲದಲ್ಲಿ ನಾಡು ವಿಂಗಡಣೆಯಾದ ಸಂದರ್ಭದಲ್ಲಿ ಗಡಿಗಳನ್ನು ಗುರುತಿಸಲು ಕಡಂಗಗಳನ್ನು ಬಳಸಲಾಗಿದೆ.

ಕೊಡಗನ್ನು ೪೯ ವರ್ಷಗಳ ಕಾಲ ಆಳಿದ ಕೊಡಗಿನ ಪ್ರಮುಖ ರಾಜರಲ್ಲಿ ಒಬ್ಬರಾದ ಸಿರಿಬಾಯಿ ದೊಡ್ಡ ವೀರಪ್ಪನ ಕಾಲದಲ್ಲಿ ರಕ್ಷಣೆಗೆ ಕಡಂಗಗಳನ್ನು ತೆಗೆಸಿದ ವಿಚಾರ ರಾಜೇಂದ್ರನಾಮೆಯಲ್ಲಿ ತಿಳಿದುಬರುತ್ತದೆ. "ಈಚೆಗೆ ದೊಡ್ಡವೀರಪ್ಪ ಒಡೆಯರವರು ೧೮ ವರುಷ ಪರಿಯಂತರ ಕೊಡಗಿನ ರಾಜ್ಯದ ಒಳಗೆ ಯಾವತ್ತು ಕಡಂಗ ಕಂದುಕ ಮುಂತಾಗಿ ತೆಗೆಸಿ ಆಳ್ವೇರಿ ಒಕ್ಕ ಬಾಗಿಲು ಮುಂತಾಗಿ ತಯಾರು ಮಾಡಿಸಿ, ಈ ರಾಜ್ಯದಲ್ಲಿ ಇರುವ ಜಗಳದ ಅಗಳು ಮುಂತಾಗಿ ತೆಗೆಸಿ, ಕೊಡಗಿನ ರಾಜ್ಯವನ್ನು ಬಂದೋಬಸ್ತು ಮಾಡಿಕೊಂಡು ಸ್ವಸ್ಥಳದಲ್ಲಿ ರಾಜ್ಯಭಾರ ಮಾಡಿಕೊಂಡು ಇರುತ್ತಾ ಇದ್ದಲ್ಲಿ"(ರಾಜೇಂದ್ರನಾಮೆ(೧೯೫೭) ೨೦೧೪:೮) ಎನ್ನುವ ಕೃತಿಯ ಉಲ್ಲೇಖಗಳಲ್ಲಿ ದೊಡ್ಡವೀರಪ್ಪ ರಾಜನ ಕಾಲಘಟ್ಟದಲ್ಲಿ ಕಡಂಗಗಳ ನಿರ್ಮಾಣ ಕಾರ್ಯ ಸತತವಾಗಿ ನಡೆಯುತ್ತಿದ್ದುದು ಕಂಡುಬರುತ್ತದೆ.

## ೫.೨. ಕಡಂಗಗಳ ಸ್ವರೂಪ, ರಚನೆ ಮತ್ತು ವಿನ್ಯಾಸ

ಕಡಂಗಗಳ ಮಹತ್ವವನ್ನು ಅರಿಯುವ ಮೊದಲು ಅವುಗಳ ಸ್ವರೂಪ–ರಚನೆಯನ್ನು ಅರ್ಥ ಮಾಡಿಕೊಳ್ಳಬೇಕು. ಕಡಂಗಗಳಲ್ಲಿ ಕೆಲವು ಆಳ, ಅಗಲ, ಉದ್ದ, ಗಾತ್ರಗಳಲ್ಲಿ ದೊಡ್ಡವೆನಿಸಿದರೆ ಕೆಲವು ಚಿಕ್ಕವು. ಕಡಂಗಗಳನ್ನು ಆಳವಾದ ಕಂದಕ ತೋಡಿ ಅದರ ಬದಿಗೆ ಅಗೆದ ಮಣ್ಣನ್ನು ರಾಶಿಹಾಕಿ ರೂಪಿಸಲಾಗುತ್ತದೆ. ಬೆಟ್ಟ, ಗುಡ್ಡ, ಕಾಡು, ಊರು, ಮನೆಗಳನ್ನು ಸುತ್ತುವರಿದ ಕಡಂಗಗಳು ಮೈಲುಗಟ್ಟಲೆ ಹಬ್ಬಿರುವುದುಂಟು. ಇವು ಬೆಟ್ಟ ಶಿಖರಗಳನ್ನು ಸುತ್ತುವರಿದಿರುವುದನ್ನು ಕಾಣಬಹುದಾಗಿದೆ. ಕಡಂಗಗಳ ವೈವಿಧ್ಯತೆಯನ್ನು ಅರಿಯಲು ಮೇಂದಲೆ[೨] ನಾಡಿನ ಕಡಂಗಗಳ ಮತ್ತು ಕಿಗ್ಗಟ್ಟು[೩] ನಾಡಿನ ಕಡಂಗಗಳ ರಚನೆಯನ್ನು ಗಮನಿಸಬಹುದು. ಮೇಂದಲೆ ನಾಡಿನ ಕಡಂಗಗಳು ಆಳವಾಗಿದ್ದು, ವಿಶಾಲ ರಚನೆ ಹೊಂದಿವೆ. ಮೇಂದಲೆ ನಾಡಿನ ಕಡಂಗಗಳ ಸಮಗ್ರ ರಚನೆಯಲ್ಲಿ ಏಕರೂಪತೆ ಸಾಧಿಸಿರುವುದು ವಿಶೇಷ. ಆದರೆ ಕಿಗ್ಗಟ್ಟು ನಾಡಿನಲ್ಲಿ ಕಡಂಗಗಳು ಗಾತ್ರದಲ್ಲಿ ಚಿಕ್ಕದಾಗಿವೆ. ಕಡಂಗಗಳ ಸಮಗ್ರ ರಚನೆಯಲ್ಲಿ ಏಕರೂಪತೆ ಕಾಣಬರುವುದಿಲ್ಲ.

ಕಡಂಗಗಳು ತಮ್ಮದೇ ಆದ ದ್ವಾರಗಳನ್ನು ಹೊಂದಿರುತ್ತವೆ. ಕಡಂಗಗಳ ಹರವು ಮತ್ತು ಅವಶ್ಯಕತೆಗಳು ಅವುಗಳ ದ್ವಾರಗಳನ್ನು ನಿರ್ಧರಿಸುತ್ತವೆ. ಕಡಂಗಗಳನ್ನು ಪ್ರವೇಶಿಸುವ ಇಲ್ಲವೆ

ಕಡಂಗಗಳನ್ನು ದಾಟುವ ದ್ವಾರ ಒರಟು ಕಲ್ಲಿನ ವಿವಿಧಾಕೃತಿಯ ಕಲ್ಲಿನಿಂದ ನಿರ್ಮಿಸಿದ ತೆರೆದ ಬಯಲು ಭಾಗವಾಗಿರುತ್ತದೆ, ಇಲ್ಲವೆ ಸ್ವಾಭಾವಿಕವಾಗಿಯೂ ದ್ವಾರಗಳು ನೆಲೆಗೊಂಡಿರುತ್ತವೆ.

ಕೊಡಗಿನಲ್ಲಿ ಹಿಂದಿನಿಂದಲೂ ಕಡಂಗಗಳಿದ್ದುವಾದರೂ ದೊಡ್ಡವೀರಪ್ಪನ ಕಾಲದಲ್ಲಿ ಅನೇಕ ಹೊಸ ಕಡಂಗಗಳು ನಿರ್ಮಾಣಗೊಂಡವು. ಈ ನೂತನ ಕಡಂಗಗಳು ಹಾಲೇರಿಯ ಆರಂಭದ ದೊರೆಗಳು ನಿರ್ಮಿಸಿದ ಕಡಂಗಗಳ ಮುಂದುವರಿದ ರೂಪಗಳಾಗಿದ್ದವು. ಕೊಡಗಿನ ಕಡಂಗಗಳನ್ನು ಭದ್ರಗೊಳಿಸುವಲ್ಲಿ ಕೊಡಗಿನ ಅರಸರ ಪಾತ್ರ ಪ್ರಧಾನವಾಗಿದ್ದು ದೊಡ್ಡ ವೀರಪ್ಪನ ಕಾಲದಲ್ಲಿ ರಚಿತವಾದ ಕಡಂಗಗಳು ಬಕ್ಕ ದ್ವಾರಗಳನ್ನು ಹೊರತು ಉಳಿದೆಡೆ ಕಡಂಗಗಳನ್ನು ಹತ್ತಲಾಗಲಿ, ಇಳಿಯಲಾಗಲಿ ಕಷ್ಟವಾಗುತ್ತಿತ್ತು. ದಾರಿ ಸೇರುವ ದ್ವಾರಗಳಲ್ಲಿ ಉಕ್ಕಡ(ರಕ್ಷಣಾ ಠಾಣೆ) ಗಳಿರುತ್ತಿದ್ದವು.

ಅಂದಿನ ಕಾಲದ ಇಂಜಿನಿಯರುಗಳು ರೂಪಿಸಿದ ಈ ರಕ್ಷಣಾ ಕಡಂಗಗಳು ತೀರ ಸರಳ ಹಾಗೂ ಸಹಜ ರೀತಿಯದ್ದಾಗಿದ್ದವು. ಇಂತಹ ಕಡಂಗಗಳ ಪರಿಕಲ್ಪನೆಗಳು ಜಗತ್ತಿನ ಯಾವ ದೇಶದಲ್ಲಿಯೂ ಕಾಣಸಿಗದು ಎನ್ನುವ ವಿದ್ವಾಂಸರ ಮಾತು ಈ ದೃಷ್ಟಿಯಿಂದ ಉತ್ಪ್ರೇಕ್ಷೆಯಲ್ಲ.

ಕಡಂಗಗಳ ಶರೀರದ ಆಕಾರವು ವಿಶಿಷ್ಟ ರಚನೆಯದಾಗಿರುತ್ತದೆ. ಅಂದಿನ ಅಗತ್ಯಕ್ಕೆ ತಕ್ಕಂತೆ, ನಾಡಿನ ಪರಿಸರಕ್ಕೆ ಅನುಗುಣವಾಗಿ ಅಸ್ತಿತ್ವ ಪಡೆದ ಕಡಂಗಗಳು ಕೊಡಗಿನ ಜನರಿಗೆ ಅನುಕೂಲಕರವಾಗಿದ್ದವು. " ಕಡಂಗಗಳಲ್ಲಿ ವಿವಿಧ ಬಗೆಗಳಿವೆ. ಮನೆ, ಅರಮನೆ, ಬನ(ಕಾಡು)-ಬಾಣೆ, ಗದ್ದೆ, ಗ್ರಾಮ, ನಾಡು, ಕೋಟೆ ಇತ್ಯಾದಿಗಳ ಸುತ್ತಲು ಕಟ್ಟಿದ ಕಡಂಗಗಳಿವೆ, ಅರಸರು ಕಟ್ಟಿದ ರಕ್ಷಣಾತ್ಮಕ ಉದ್ದೇಶದ ಅರಮನೆ ಕೋಟೆಯ ಕಡಂಗಗಳಿಗೆ ಹೋಲಿಸಿದರೆ ಉಳಿದ ರಚನೆಯವು ಸರಳೀಕೃತ ರೂಪಗಳಾಗಿ ಕಾಣುತ್ತವೆ" ಎಂಬ ನಾಗರಾಜ್‌ರವರ ಅಭಿಪ್ರಾಯ ಒಪ್ಪತಕ್ಕದಾಗಿದೆ(ನಾಗರಾಜ್, ೨೦೦೦೪:೪೨೪).

ಅರಮನೆಕಡಂಗ, ಪೊಟ್ಟಕಡಂಗ, ತೋರುಕಡಂಗ, ಹೂಕಡಂಗ, ಸಾಕ್ಷಿಕಡಂಗ, ಹದ್ದುಬಸ್ತಕಡಂಗ, ಸರಹದ್ದುಕಡಂಗ ಮೊದಲಾದ ಕಡಂಗಗಳನ್ನು ನಾಗರಾಜ್‌ರವರು ಉಲ್ಲೇಖಿಸಿದರೂ ಒಟ್ಟಾರೆಯಾಗಿ ಕೊಡಗಿನಾದ್ಯಂತ ಕಂಡುಬರುವ ಕಡಂಗಗಳ ಲಕ್ಷಣಗಳನ್ನು ಗಮನಿಸಿ ಮುಖ್ಯವಾಗಿ ಮೂರು ರೀತಿಯ ಕಡಂಗಗಳೆಂದು ವಿಂಗಡಿಸಬಹುದು.

೧. ಐನ್‌ಮನೆ ಕಡಂಗಗಳು ಮತ್ತು ಜಮೀನು ಕಡಂಗಗಳು ಮತ್ತು ರಕ್ಷಣಾತ್ಮಕ ಕಡಂಗಗಳು

೨. ಅರಮನೆ/ನಾಡು ಕಡಂಗಗಳು ಮತ್ತು ರಕ್ಷಣಾತ್ಮಕ ಕಡಂಗಗಳು

೩. ಊರು ಕಡಂಗಗಳು, ದೇವನೆಲೆ ಕಡಂಗಗಳು ಮತ್ತು ಸರಹದ್ದು ಕಡಂಗಗಳು

## ೫.೩. ಐನ್‌ಮನೆ ಕಡಂಗಗಳು ಮತ್ತು ಜಮೀನು ಕಡಂಗಗಳು

ಐನ್‌ಮನೆ ಕಡಂಗಗಳು ಸರಳ ರೂಪದಲ್ಲಿ ರಚನೆಗೊಂಡಿದ್ದು ಕಿರು ದಿಬ್ಬದ ಬದಿಯಲ್ಲಿ ತಗ್ಗು ತೋಡುವುದರಿಂದ ತಯಾರಾಗುತ್ತಿದ್ದವು. ಇವು ಐನ್ ಮನೆಯ ಸುತ್ತ ಇರುತ್ತಿದ್ದವು.

ಇವುಗಳು ಐನ್‌ಮನೆ ಮತ್ತು ಕಾಡುಗಳ ನಡುವಣ ಎಲ್ಲೆಗಳಾಗಿದ್ದವು. ಈ ಒಕ್ಕಒಕ್ಕಗಳ ನಡುವಿನ ಗಡಿಗಳಾಗಿಯೂ ರೂಪುಗೊಂಡವು. ಎರಡು ಒಕ್ಕಗಳು ಹೊಂದಿರುವ ಜಮೀನುಗಳ ಸರಹದ್ದುಗಳನ್ನು ನಿರ್ಧರಿಸಲು ಈ ರೀತಿಯ ಕಡಂಗಗಳನ್ನು ತೋಡಲಾಗುತ್ತಿತ್ತು. ಬ್ರಿಟಿಷರು ಕೊಡಗಿನಲ್ಲಿ ಕಾಫಿ ತೋಟಗಳನ್ನು ಪ್ರಾರಂಭ ಮಾಡುವ ಮೊದಲು ಮತ್ತು ಆಧುನಿಕ ಭೂಮಾಪನ ವಿಧಾನವನ್ನು ಅನುಸರಿಸುವ ಮುನ್ನ ಭೂಮಿಯ ಒಡೆತನವನ್ನು ನಿಗಧಿ ಮಾಡಿಕೊಳ್ಳುವ ಸಲುವಾಗಿ ಎರಡು ಒಕ್ಕಗಳ ಜಮೀನುಗಳ ಮಧ್ಯೆ ಕಡಂಗಗಳನ್ನು ತೆಗೆಯಲಾಗುತ್ತಿತ್ತು, ಇಂತಹ ಕಡಂಗಗಳನ್ನು ಇವತ್ತಿಗೂ ಕೊಡಗಿನಾದ್ಯಂತ ಕಾಣಬಹುದು

ಒಕ್ಕಸಂಬಂಧಿ ಕಡಂಗಗಳು ಸರಳ ರೂಪದ ರಚನೆಗಳಾಗಿದ್ದು ಕುಂಡೋಣಿ ಎಂದೂ ಕರೆಯಲ್ಪಡುತ್ತವೆ. ಇವು ಮಣ್ಣಿನ ಕಿರುದಿಬ್ಬದ ಬದಿಗೆ ಓಣಿರೂಪದ ತಗ್ಗು ತೋಡುವುದರಿಂದಾದು ದಾಗಿವೆ. ಒಕ್ಕಗಳ ಆಸ್ತಿಗಳ ಸುತ್ತ ಇಂತಹ ಕಡಂಗಗಳು ಇರುತ್ತವೆ. ಕೊಡಗಿನಲ್ಲಿ ಮಳೆ ಹೆಚ್ಚಿರುವುದರಿಂದ ಮಳೆಯ ನೀರು ಮನೆಯೊಳಗೆ ಹರಿಯದೆ ಕಡಂಗದ ಮೂಲಕ ಹರಿದು ಹೋಗುತ್ತಿದ್ದುದರಿಂದ ರಕ್ಷಣೆ ಸಾಧ್ಯವಾಗುತ್ತಿತ್ತು. ಅಲ್ಲದೆ ಸಾಕು ಪ್ರಾಣಿಗಳನ್ನು ಕಾಡಿನ ಪ್ರಾಣಿಗಳಿಂದ ರಕ್ಷಿಸುವಲ್ಲಿಯೂ ಕಡಂಗಗಳು ಸಹಕಾರಿಯಾಗಿದ್ದವು. ಒಕ್ಕ ಸಂಬಂಧಿ ಕಡಂಗಗಳು ಅರಸರು ರೂಪಿಸಿದ ಅರಮನೆ ಕಡಂಗಗಳ ನಕಲುಗಳಂತೆ ಕಾಣಬರುತ್ತವೆ. ಐನ್ ಮನೆ ಕಡಂಗಗಳು ಮನೆಯನ್ನು ಸುತ್ತುವರಿದಿದ್ದು ಒಕ್ಕ ಬಾಗಿಲಿಗೆ ಸಂಪರ್ಕ ಪಡೆದಿದ್ದವು.

ಆದರೆ ಕೊಡಗಿನಾದ್ಯಂತ ಆಸ್ತಿ ಪಾಸ್ತಿಗಳ ಮಧ್ಯೆ, ಒಕ್ಕ ಒಕ್ಕಗಳ ಮಧ್ಯೆ ಸರಹದ್ದು ನಿರ್ಧಾರ ಮಾಡುವ ಸಣ್ಣ ಗಾತ್ರದ ಕಡಂಗಗಳು ಪ್ರತಿ ಮನೆಗಳ ಸುತ್ತಲೂ ಇರುತ್ತದೆ. ಈ ಕಡಂಗಗಳು ಗಾತ್ರದಲ್ಲಿ ಸಣ್ಣದಾಗಿದ್ದು ಭೂ ಅಳತೆ ಮಾಡುವ ಸರ್ವೆ ಇಲಾಖೆಯವರಿಗೆ ಅನುಕೂಲವಾಗಿದೆ. ಸುಮಾರು ೧೦-೧೫ ಅಡಿ ಅಥವಾ ೨೦ ಅಡಿ ಆಳವಾಗಿರುವ ಈ ಕಡಂಗಗಳು ಸುಮಾರು ೮-೧೦ ಅಡಿ ಅಗಲವಾಗಿರುತ್ತದೆ. ಆಕಾರದಲ್ಲಿರುವ ಈ ಕಡಂಗಗಳು ತೋಟ ಮತ್ತು ಗದ್ದೆಗಳಿಗೆ ಬಸಿಕಾಲುವೆಯ ರೂಪದಲ್ಲಿಯೂ, ದನಕರುಗಳ ಸಂಚಾರಕ್ಕಾಗಿಯೂ ಕೆಲಸ ಮಾಡುತ್ತವೆ. ಇಂತಹ ಕೆಲವು ಸಣ್ಣಗಾತ್ರದ ಕಡಂಗಗಳು ಕೆಲವು ಕುಟುಂಬಗಳ ಮಧ್ಯೆ ವ್ಯಾಜ್ಯಗಳನ್ನು ಇತ್ಯರ್ಥ ಮಾಡಲು ಅನುಕೂಲವಾದ ಪಾತ್ರವಹಿಸಿದ್ದು ಸಾಮಾಜಿಕ ಸಮನ್ವಯತೆಗೆ ಮತ್ತು ಸಂಬಂಧಗಳನ್ನು ಬೆಸೆಯುವ ನಿಟ್ಟಿನಲ್ಲಿ ಕೆಲಸ ಮಾಡಿರುತ್ತವೆ ಎನ್ನುವುದು ವಿಶಿಷ್ಟವಾಗಿದೆ. ಇಂತಹ ಕಡಂಗಗಳನ್ನು 'ಕುಂಡೋಣಿ'ಯೆಂತಲೂ ಕರೆಯುತ್ತಾರೆ. ವೈಜ್ಞಾನಿಕವಾಗಿ ಇಂತಹ ಕಡಂಗಗಳು ಕೊಡಗಿನ ಪರಿಸರದ ಸಮತೋಲನವನ್ನು ಕಾಪಾಡುವಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತವೆಂಬುದನ್ನು ಮನಗಾಣಬಹುದಾಗಿದೆ.

## ೫.೪. ಅರಮನೆ/ನಾಡು ಕಡಂಗಗಳು ಮತ್ತು ರಕ್ಷಣಾತ್ಮಕ ಕಡಂಗಗಳು

ಅರಮನೆ ಕಡಂಗಗಳು ಕೋಟೆಗೆ ಹೊಂದಿಕೊಂಡಂಥವು. ಎತ್ತರದ ದಿಬ್ಬ ಹಾಗೂ ತಗ್ಗಿನ ಕಂದಕವೂ ಸೇರಿ ಹೆಚ್ಚಿನ ಬಂದೋಬಸ್ತಿನದಾಗಿರುತ್ತಿದ್ದವು. ೩೦ ರಿಂದ ೬೦ ಅಡಿ ಎತ್ತರದವರೆಗೆ

ಇದ್ದು ೧೦ ಅಡಿಗೂ ಎತ್ತರದ ದಪ್ಪ ಮೇಲು ಬದಿ ದುಂಡಾಕಾರದ ಸುತ್ತುವರಿದ ರಚನಾ ವಿನ್ಯಾಸ ಹೊಂದಿರುತ್ತಿದ್ದವು. ಮಡಿಕೇರಿಯ ಅರಮನೆಯನ್ನು ಮೂಲತಃ ಮುದ್ದುರಾಜ ಒಡೆಯರವರು ಕಟ್ಟಿಸಿದ್ದು ೧೬೮೦ರಲ್ಲಿ. ಟಿಪ್ಪು ಸುಲ್ತಾನನು ಮಡಿಕೇರಿಯನ್ನು ಆಕ್ರಮಿಸಿ ಅವರ ವಶದಲ್ಲಿ ೧೭೭೦ರವರೆಗೆ ಮಡಿಕೇರಿ ಕೋಟೆಯು ಇದ್ದ ಸಂದರ್ಭದಲ್ಲಿ ಅರಮನೆ ಮತ್ತು ಕೋಟೆ ಅವರಣವನ್ನು ಕಲ್ಲಿನಿಂದ ಕಟ್ಟಲಾಯಿತು. ಕೋಟೆಯ ಅವರಣದ ಸುತ್ತಲೂ ಕಡಂಗಗಳನ್ನು ಅಥವಾ ಕಂದಕಗಳನ್ನು ತೋಡಲಾಯಿತು ಎಂದು ರಿಕ್ತರ್‌ರವರು ಅಭಿಪ್ರಾಯಪಡುತ್ತಾರೆ. ಹಾಗೆಯೇ ನಾಲ್ಕುನಾಡು ಅರಮನೆಯ ಸುತ್ತಲೂ ಕಡಂಗಗಳು ನಿರ್ಮಾಣವಾಗಿರುವುದನ್ನು ಇವತ್ತಿಗೂ ಕಾಣಬಹುದು(ರಿಕ್ತರ್, ೧೮೭೦: ೧೯೨). ಹಾಗಾಗಿ ಆ ಕಾಲಘಟ್ಟದಲ್ಲಿ ಕಡಂಗಗಳನ್ನು ನಿರ್ಮಿಸುವುದು ಆಡಳಿತ ಸೂತ್ರಹಿಡಿದ ರಾಜರಿಂದ ತೊಡಗಿ ಸಾಮಾನ್ಯ ಕೃಷಿಕ ಜಮೀನುದಾರನವರೆಗೂ ಅನಿವಾರ್ಯವಾಗಿತ್ತು ಎನ್ನಬಹುದು.

ಕಡಂಗಗಳು ಕಾಡುಗಳ ನಡುವೆ ಇರುವ ಕಾರಣ ಸುಮಾರು ಎತ್ತರದ ಮಣ್ಣಿನ ದಿಬ್ಬದ ಸುತ್ತುವರಿದ ರಚನೆಗಳಾಗಿರುತ್ತವೆ. ದೇವರ ಬನ, ದೇವರ ಕಾಡುಗಳ, ಬನ, ಬಾಣೆಗಳ ಸುತ್ತಲೂ ಇವು ಕಾಣಬರುತ್ತವೆ.

ಕಡಂಗಗಳಲ್ಲಿ ಅತಿ ಪ್ರಮುಖವಾಗಿ ಕಾಣಿಸಿಕೊಳ್ಳುವುದೆಂದರೆ ಅರಮನೆ ಕಡಂಗ. ಈ ಕಡಂಗಗಳು ಅರಸರ ಅರಮನೆ ಸುತ್ತಲೂ ರಕ್ಷಣೆಯ ಕಂದಕ ಮತ್ತು ಗೋಡೆಗಳಾಗಿ ಕೆಲಸ ಮಾಡುತ್ತವೆ. ಅರಮನೆಗೆ ಹೋಗುವ ದಾರಿಗಳೂ ಕೆಲವೊಮ್ಮೆ ಈ ರೀತಿಯ ಕಂದಕಗಳ ಮೂಲಕವೇ ಆಗಿರುತ್ತವೆ. ಅರಮನೆಯಿಂದ ಇನ್ನೊಂದು ಅರಮನೆಗೆ ಹೋಗುವ ದಾರಿ, ವ್ಯಾಪಾರ ವಹಿವಾಟಿಗಾಗಿ ರಾಜ ಪರಿವಾರ ಅಥವಾ ರಾಜ್ಯದ ಪ್ರಜೆಗಳು ಹೋಗುವ, ಬರುವ ಹೆದ್ದಾರಿಗಳು ಅರಮನೆ ಕಡಂಗಗಳ ಸಾಲಿಗೆ ಸೇರಿಕೊಳ್ಳುತ್ತವೆ. ಇನ್ನು ಅರಮನೆ ಕಡಂಗಗಳು ಆಳವಾಗಿಯೂ, ಅಗಲವಾಗಿಯೂ ಹೆದ್ದಾರಿಯನ್ನು ಹೋಲುವಂತಹದ್ದಾಗಿದ್ದರೂ, ಆ ಕಾಲದ ಸಂಪರ್ಕ ಮಾಧ್ಯಮಗಳಾದ ಕುದುರೆ ಹಾಗೂ ಎತ್ತುಗಳ ಮೇಲೆ ಸಾಗಣೆ ಮಾಡಲು ಅನುಕೂಲಕರವಾಗಿದ್ದವು. ಕಡಂಗಗಳ ತಳಭಾಗದಿಂದ ಮೇಲಿನ ದಿಣ್ಣೆಗೆ ಸುಮಾರು ೪೦–೬೦ ಅಡಿಗಳ ಎತ್ತರ ಸಾಧಾರಣವಾಗಿ ಕಂಡುಬರುತ್ತದೆ. ಕಡಂಗಗಳು ಸಾಧಾರಣವಾಗಿ ಕಾಡು ಮತ್ತು ದಿಣ್ಣೆಗಳನ್ನು ಸೀಳಿಕೊಂಡು ಬಯಲು ಪ್ರದೇಶಕ್ಕೆ ಏಕಾಏಕಿ ಬಂದು ಮುಟ್ಟುವ ರಚನೆಯಲ್ಲಿರುತ್ತದೆ.

ಬಯಲು ಮುಗಿದ ತಕ್ಷಣ ತಟ್ಟನೆ ಮತ್ತೊಂದು ಕಡಂಗದೊಳಗೆ ನುಸುಳಿ ಅದರ ಇನ್ನೊಂದು ಕೊನೆಯಲ್ಲಿ ಭತ್ತ ಗದ್ದೆಯ ಮೂಲೆಗೋ ಅಥವಾ ಮತ್ತು ಒಂದು ಬಯಲು ಪ್ರದೇಶಕ್ಕೊ ಪ್ರವೇಶ ಪಡೆಯುತ್ತವೆ. ಕೊಡಗಿನಾದ್ಯಂತ ಮೈಲುಗಟ್ಟಲೆ ಈ ರೀತಿಯ ಕಡಂಗಗಳು ಕಾಣುತ್ತವೆ.

ಅರಮನೆ ಕಡಂಗಗಳ ಇನ್ನೊಂದು ಬಗೆ ಎಂದರೆ ಕಾಳಗ ಕಡಂಗಗಳು, ಬಹುಶಃ ರಿಕ್ತರ್‌ರವರು ಇದನ್ನೇ ವಾರ್ ಟ್ರೆಂಚಸ್ ಎಂದು ಕರೆದಿರಬಹುದು. ಇಂತಹ ಕಡಂಗಗಳು ಗೆರಿಲ್ಲಾ ಕಾಳಗಕ್ಕೆ ಅನುಕೂಲಕರವಾಗಿತ್ತು. ಕೊಡಗಿನಲ್ಲಿ ನಾಯಕರ ಕಾಲಘಟ್ಟದಲ್ಲಿ ಹಾಗೂ ಲಿಂಗಾಯಿತ ಅರಸ ಕಾಲಘಟ್ಟದಲ್ಲಿ ಕಂಡುಬಂದಂತಹ ಘರ್ಷಣೆಗಳನ್ನು ಯುದ್ಧ ಎಂದು ಕರೆಯಲು ಸಾಧ್ಯವಿಲ್ಲ.

ಬಯಲು ಸೀಮೆಗಳಲ್ಲಿ ಕಂಡು ಬಂದಂತಹ ಘೋರ ಕದನಗಳು ಕೊಡಗಿನಲ್ಲಿ ನಡೆದಿಲ್ಲ. ಆದರೆ ಗೆರಿಲ್ಲಾ ಮಾದರಿಯ ಯುದ್ಧಗಳು ಕೊಡಗಿನಲ್ಲಿ ಸರ್ವೆ ಸಾಧಾರಣವಾಗಿ ತೀರ ಇತ್ತೀಚಿನವರೆಗೂ ಅಂದರೆ ಬ್ರಿಟಿಷ್ ಆಡಳಿತಕ್ಕೆ ಕೊಡಗು ಒಳಪಡುವವರೆಗೂ ನಡೆಯುತ್ತಿತ್ತು. ಎದುರಾಳಿಯನ್ನು ಅಡಗಿನಿಂತು ಸಂಚಿನಿಂದ ಕೊಲ್ಲುವುದು ಸ್ಥಳೀಯ ಯುದ್ಧ ತಂತ್ರಗಳಲ್ಲಿ ಒಂದು. ಹಾಗಾಗಿ ಕಡಂಗಗಳ ನಿರ್ಮಾಣ ಆ ಕಾಲಘಟ್ಟದಲ್ಲಿ ತುಂಬ ಅನಿವಾರ್ಯವಾಗಿತ್ತು. ಶತ್ರುಗಳನ್ನು ಏಕಾಏಕಿ ಮುಖಾಮುಖಿಯಾಗಿ ನಾಶಪಡಿಸುವ ಪ್ರಕ್ರಿಯೆಯಲ್ಲಿ ಕಡಂಗಗಳು ತುಂಬಾ ಉಪಯುಕ್ತವಾಗಿ ಪರಿಣಮಿಸುತ್ತಿದ್ದವು. ಅನೇಕ ಕಾಳಗಗಳು ಕಡಂಗಗಳಲ್ಲೆ ನಡೆಯತಿತ್ತು ಎಂಬ ಪ್ರತೀತಿ ಇದೆ. ಹಾಗಾಗಿ ಕೊಡಗಿನಲ್ಲಿ ಇಂತಹ ಕಾಳಗಗಳನ್ನು 'ಚದಿಪ' ಎಂದು ಕರೆಯುತ್ತಾರೆ. 'ಚದಿಪ'[೪] ಎಂದರೆ ಶತ್ರುವನ್ನು ಮೋಸಮಾಡಿ ಕೊಲ್ಲುವುದು, ನಂಬಿಸಿ ಕೊಲ್ಲುವುದು ಎಂದರ್ಥ. ಇವತ್ತಿಗೂ 'ಚದಿಪ' ಎನ್ನುವ ಪದ ಕೊಡಗಿನಲ್ಲಿ ನಂಬಿಕೆದ್ರೋಹ' ಎಂಬುದಕ್ಕೆ ಪರ್ಯಾಯವಾಗಿ ಬಳಸಲಾಗುತ್ತಿದೆ.

ಸಾಕಷ್ಟು ಮದ್ದುಗುಂಡು ಸಾಮಗ್ರಿಗಳನ್ನು ತುಂಬಿಸಿಕೊಂಡು ಯುದ್ಧ ಮಾಡಲು ಅನುಕೂಲವಾಗುವಂತಹ ರೀತಿಯಲ್ಲಿ ಕಡಂಗಗಳನ್ನು ರಚಿಸಲಾಗಿತ್ತು. ಎಲ್ಲಾ ಅರಮನೆ ಕಡಂಗಗಳ ಬಕ್ಕ ಬಾಗಿಲುಗಳಲ್ಲಿಯೂ ಅರಸರ ಕಾಲದಲ್ಲಿ ಪಹರೆಯವರು ಇರುತ್ತಿದ್ದರು. ಮತ್ತು ಈ ಸ್ಥಳವು ಕರಿಕಲ್ಲಿನ ಬಾಗಿಲಿನ ರೂಪದಲ್ಲಿರುತ್ತಿತ್ತು.

## ೫.೫. ಊರು ಕಡಂಗಗಳು, ದೇವನೆಲೆ ಕಡಂಗಗಳು ಮತ್ತು ಸರಹದ್ದು ಕಡಂಗಗಳು

ಗ್ರಾಮ ಹಾಗೂ ನಾಡಿನ ಸುತ್ತ ಇರುವ ಕಡಂಗಗಳಿಗೆ 'ಸರಹದ್ದು ಕಡಂಗ'ಗಳೆಂದು ಹೆಸರು. ಇವು ಗಂಭೀರ ರಚನಾ ವಾಸ್ತು ಹೊಂದಿದವುಗಳಾಗಿವೆ. ನಾಡು ನಾಡುಗಳ ಸರಹದ್ದುಗಳನ್ನು ನಿರ್ಧರಿಸುವಲ್ಲಿ ಇವು ಮಹತ್ವದ ಪಾತ್ರವಹಿಸುತ್ತಿತ್ತು.

ಉದಾಹರಣೆಗೆ ಕಡಿಯತ್‌ನಾಡಿನಿಂದ ಕೇರಳಕ್ಕೆ ಹೋಗುವ ಹಾದಿಯಲ್ಲಿ ಉಡುಂಬೆ ಹೊಳೆ ಎದುರಾಗುತ್ತದೆ. ಕೇರಳ ಮತ್ತು ಕೊಡಗಿನ ಗಡಿಯಾಗಿ ಉಡುಂಬೆ ಹೊಳೆ ಇದ್ದು ಕಡಂಗವೊಂದು ಇಲ್ಲಿ ಕೊನೆಗೊಳ್ಳುತ್ತದೆ. ಕಡಂಗಗಳು ಕೊನೆಗೊಳ್ಳುವ ಭಾಗದಲ್ಲಿ ಕಲ್ಲಿನ

ಎತ್ತರದ ಜೋಡಣೆಯ ರಚನೆ ಹೊಂದಿದ್ದು ಇದನ್ನು ಬಕ್ಕ ಕಂಡಿ ಎನ್ನುತ್ತಾರೆ. ಇದೇ ರೀತಿಯ ರಚನೆಯನ್ನು ಕಕ್ಕಬ್ಬೆಯಿಂದ ಕೇರಳಕ್ಕೆ ಎತ್ತು ಪೋರಾಟ ಹೋಗುವ ದಾರಿ ಅಡಿಕೆ ತೆರಿ, ಪಾಂಬ್‌ಕೊಲ್ಲಿ, ಕುಂಡುಮಲೆ ಮೂಲಕ ಬಾಯಿಕಬ್ಬೆಗೆ ಸೇರುವ ಜಾಗದಲ್ಲಿಯೂ ಕಾಣಬಹುದು. ಈ ದಾರಿಯು ಕೇರಳದ ದೇವನೆಲೆಗಳಿಗೆ ಹೋಗಲು ಇವತ್ತಿಗೂ ಬಳಸಿಕೊಳ್ಳಲಾಗುತ್ತಿದೆ. ಊರುಗಳ ಸುತ್ತಲೂ ಹಾಗೂ ಊರುಗಳ ಮಧ್ಯಭಾಗಗಳಲ್ಲಿಯೂ ಒಂದು ಕಡೆಯಿಂದ ಇನ್ನೊಂದು ಕಡೆ ಹೋಗಲು ಅನುಕೂಲವಾಗಲು ಕಡಂಗಗಳನ್ನು ನಿರ್ಮಾಣವಾಗಿದ್ದನ್ನು ಗಮನಿಸಬಹುದು. ಉದಾಹರಣೆಗೆ ಕರಡ ಮತ್ತು ಅರಪಟ್ಟು ಗ್ರಾಮದ ಸರಹದ್ದಿನಿಂದ ಪಾಲಂಗಾಲದ ಪೋಟೋಡ ಕೇರಿಯ ಮೂಲಕ ಗ್ರಾಮದ ಮಧ್ಯೆ ಕರಿನೆರವಂಡ ಒಕ್ಕದ ಜಮೀನುಗಳನ್ನು ದಾಟಿ ತೋರಬೆಟ್ಟದವರೆಗೆ ಹೋಗುವ ಕಡಂಗಗಳ ಅವಶೇಷಗಳನ್ನು ಇಂದಿಗೂ ಕಾಣಬಹುದುದಾಗಿದೆ. ಈ ಕಡಂಗಗಳು ಈ ಊರುಗಳ ದೇವನೆಲೆಗಳ ನಡುವಿನ ಕೊಂಡಿಯೂ ಆಗಿತ್ತು.

## ೫.೬. ಕಡಂಗಗಳ ಮಹತ್ವ

ಕೊಡಗಿನಲ್ಲಿ ಕಡಂಗ ನಿರ್ಮಿತಿಯು ನಾಯಕರ ಆಳ್ವಿಕೆಯ ಕಾಲಕ್ಕೂ ಪೂರ್ವದಲ್ಲಿ ಇದ್ದಿತೆಂಬುದಕ್ಕೆ ಕಡಂಗ ಸಂಬಂಧಿ ಗಾದೆಗಳು ಹಾಗೂ ಶಾಸನಗಳು ಆಧಾರವೆಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಕಾಲಾಂತರಗಳಲ್ಲಿ ಕಡಂಗಗಳು ತಮ್ಮ ಮೂಲ ರೂಪ ರಚನೆ–ವಿನ್ಯಾಸ, ಉದ್ದೇಶ, ಉಪಯುಕ್ತತೆಗಳಲ್ಲಿ ವ್ಯತ್ಯಯಗಳನ್ನು ಹೊಂದುತ್ತಾ ಹಲವು ಮಾರ್ಪಾಡುಗಳಿಗೆ ಕಾರಣವಾಗಿವೆ.

ಶತ್ರುಗಳಿಂದ ರಕ್ಷಣೆ, ಕೃಷಿ, ನೀರಾವರಿ ವ್ಯವಸ್ಥೆ, ವ್ಯಾಪಾರ, ಸಂಪರ್ಕ ಮಾರ್ಗ, ದೇವತಾಕಾರ್ಯ, ದನಕರುಗಳ ಸಂಚಾರ, ಆಡಳಿತದ ಅನುಕೂಲ, ಆಸ್ತಿ–ಪಾಸ್ತಿಗಳ ವಿಂಗಡಣೆ, ವನ್ಯ ಪ್ರಾಣಿಗಳಿಂದ ರಕ್ಷಣೆ ಮೊದಲಾದ ಉಪಯುಕ್ತ ಉದ್ದೇಶಗಳಿಗಾಗಿ ರೂಪುಗೊಂಡ ಕಡಂಗಗಳು ಕಾಲದಿಂದ ಕಾಲಕ್ಕೆ ಮಹತ್ವ ಪಡೆದಿವೆ.

ಒಕ್ಕ ಸಂಬಂಧಿ ಕಡಂಗಗಳು ಒಕ್ಕ ಅಥವಾ ಕುಟುಂಬವನ್ನು ಒಂದು ಭೌಗೋಳಿಕ ಪರಿಧಿಗೊಳಪಡಿಸಿ ಒಕ್ಕ ಸದಸ್ಯರನ್ನೆಲ್ಲ ಒಂದುಗೂಡಿಸಿ ಏಕತೆಯ ಭಾವವನ್ನು ಒಕ್ಕದೊಳಗೆ ಬೆಸೆಯುವಲ್ಲಿ ಮಹತ್ವದ ಪಾತ್ರವಹಿಸಿದ್ದವು. ಅಲ್ಲದೆ ಒಕ್ಕದ ಆಸ್ತಿ, ಪಾಸ್ತಿಗಳನ್ನು ತಲತಲಾಂತರಗಳಿಂದ ಉಳಿಸಿಕೊಂಡು ಬರಲು ಸಹಕಾರಿಯಾದ ಕಡಂಗಗಳು ಒಕ್ಕಗಳನ್ನು ರೂಪಿಸಿ, ರೂಪಾಂತರಿಸಿದವು. ಹಿಂದಿನಿಂದಲೂ ಹಲವು ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡು ಬೆಳೆಯುತ್ತಿರುವ ಕೊಡಗು ಕಡಂಗಗಳ ಕಾರಣದಿಂದಾಗಿಯೂ ವಿಶಿಷ್ಟವಾಗಿದೆ.

ಹಾಗೆಯೇ ನಾಯಕರ ಆಡಳಿತ ಕಾಲದಲ್ಲಿ ನಾಡು–ನಾಡುಗಳ ಮಧ್ಯೆ ರಕ್ಷಣೆಯ ಕಡಂಗಗಳು ನಿರ್ಮಾಣಗೊಂಡಿದ್ದನ್ನು ಗಮನಿಸಬಹುದು. ಗ್ರಾಮದ ಸುತ್ತಲೂ ರಕ್ಷಣೆಯ ಸಲುವಾಗಿ ಕಡಂಗಗಳು ನಿರ್ಮಾಣವಾಗಿದ್ದು, ಇವು ಗಾತ್ರದಲ್ಲಿ ಅರಮನೆ ಕಡಂಗಗಳಿಂತ ಚಿಕ್ಕವಾಗಿದ್ದವು.

ವಿಶಾಲವಾದ ಊರಿನ ಮಧ್ಯ ಭಾಗದಲ್ಲಿ ದೇವತಾ ಕಾರ್ಯಗಳ ಕಾರಣಕ್ಕಾಗಿ, ದೇವಾಲಯಗಳಿಗೆ ಊರಿನವರು ಹೋಗಲು ಬರಲು ಅನುಕೂಲ ಆಗುವ ಹಾಗೆ, ಭೂತದ ಕೋಲ ಅಥವಾ ತೆರೆಯ ಎತ್ತರದ ಮುಡಿಯು ಕಾಡಿನ ಮರಗಳಿಗೆ ತಗುಲದೆ ಸುಸೂತ್ರವಾಗಿ ಸಾಗಲು ಅನುಕೂಲವಾಗುವಂತೆ ಭೂಮಿಯನ್ನು ಊರಿನವರು ಕೊರೆದು ಮಾಡಿರುವ ಕಡಂಗಗಳನ್ನು ಕೂಡ ನೋಡಬಹುದು. ಈ ರೀತಿಯ ಕಡಂಗಗಳಲ್ಲಿ ಕೆಲವೊಮ್ಮೆ ನಡೆದಾಡಲು ಅನುಕೂಲವಾಗುವ ಹಾಗೆ ಕೆಲವು ಜಾಗಗಳಲ್ಲಿ ಕಲ್ಲಿನ ಹಾಸುಗಳನ್ನು ಹಾಕಿರುವುದನ್ನು ಗಮನಿಸಬಹುದು.

೨೦ ಅಡಿಗಳಿಗಿಂತ ಆಳವಾಗಿರುವ ಕಡಂಗಗಳಲ್ಲಿ ವರ್ಷದ ೮ ತಿಂಗಳು ಸದಾ ನೀರಿನ ಬುಗ್ಗೆಗಳು ಸಣ್ಣದಾಗಿ ಹೊರಹೊಮ್ಮಿ ನೆಲಜಲದ ಪ್ರಮಾಣವು ಭೂ ಫಲವತ್ತತೆಗೆ ಅನುಕೂಲಕರ ವಾಗುವಂತೆ ಮಾಡಿತ್ತು. ಆದರೆ ಸುಮಾರು ೨೫–೩೦ ವರ್ಷಗಳಿಂದೀಚೆಗೆ ಮರಕಾಡುಗಳ ನಾಶದ ಫಲವಾಗಿ ಕಡಂಗಗಳಲ್ಲಿ ಉದ್ಭವವಾಗುತ್ತಿದ್ದ ನೀರಿನ ಬುಗ್ಗೆಗಳು ಕಾಣದಾಗಿರುವುದನ್ನು ಗಮನಿಸಬಹುದು. ಕೊಡಗಿನಲ್ಲಿ ಕೆಲವು ಶತಮಾನಗಳ ಹಿಂದೆ ಕೆರೆಗಳ ಕಲ್ಪನೆ ಅಷ್ಟಾಗಿ ಇರಲಿಲ್ಲ. ಆದರೆ ನೈಸರ್ಗಿಕವಾದ ಜಲವನ್ನು ಕೃಷಿಕಾರಣಕ್ಕಾಗಿ ಹೇಗೆ ಬಳಸಿಕೊಳ್ಳಬಹುದು ಎನ್ನುವ ವೈಜ್ಞಾನಿಕ ದೃಷ್ಟಿಕೋನ ಅಂದಿನ ಕೃಷಿಕರಿಗೆ ಇತ್ತು ಎನ್ನುವುದು ಇಂದಿನ ಆಧುನಿಕ ಕೃಷಿಕರಿಗೂ ಉತ್ತೇಜನ ಕೊಡುವಂತದ್ದಾಗಿದೆ.

## ೫.೭. ಕಡಂಗಗಳ ರಾಜಕೀಯ ಮತ್ತು ಸಾಮಾಜಿಕ ಆಯಾಮಗಳು

ಬ್ರಿಟಿಷರ ಆಳ್ವಿಕೆಯ ಮುನ್ನ ಹಾಲೇರಿ ಅರಸರ ಕಾಲ ಹಾಗೂ ಅದಕ್ಕೂ ಮುನ್ನ ನಾಯಕರ ಆಡಳಿತದಲ್ಲಿ ಹರಿದು ಹಂಚಿಹೋಗಿದ್ದ ಕೊಡಗನ್ನು ಆಳಿನಿಂದ ಅರಸನವರೆಗೆ ಪ್ರತಿಯೊಬ್ಬನಿಗೂ ರಕ್ಷಣೆಯ ಅವಶ್ಯಕತೆ ಇತ್ತು. ಆಸ್ತಿ ಪಾಸ್ತಿಯ ದೃಷ್ಟಿಯಿಂದ, ಬೆಳೆಗಳ ರಕ್ಷಣೆಯ ದೃಷ್ಟಿಯಿಂದ ಪ್ರಮುಖವಾಗಿದ್ದಿತು. ನಾಯಕರ ಕಾಲದಲ್ಲಿ ನಾಡು ನಾಡುಗಳ ಮಧ್ಯೆ ವೈಷಮ್ಯ ವಿಪರೀತವಾಗಿತ್ತು. ವೈವಾಹಿಕ ಸಂಬಂಧಗಳನ್ನು ಬೆಳೆಸಲು ಕೂಡ ಸಮ್ಮತಿಸದಂತಹ ವೈಷಮ್ಯ ಅದಾಗಿತ್ತು. ಉದಾಹರಣೆಗೆ ಕಡಿಯತ್ತು ನಾಡು ಹಾಗೂ ಬೆಪ್ಪು ನಾಡು ಜನರು ಹಳೇ ವೈಷಮ್ಯದ ಕಾರಣ ಪರಸ್ಪರ ಹೆಣ್ಣು ಕೊಡುವುದು ತರುವುದು ಮಾಡುತ್ತಿರಲಿಲ್ಲ. ಹಾಗೆಯೇ ಕೊಡಗಿನ ಅರಸರ ಕಾಲದಲ್ಲಿ ಕೇರಳ ಮೈಸೂರು ಕಡೆಯಿಂದ ಬರುವ ಶತ್ರುಗಳನ್ನು ಎದುರಿಸಲು ಸಿರಿಬಾಯಿ ದೊಡ್ಡವೀರಪ್ಪನ ಕಾಲದಲ್ಲಿ ಕೊಡಗು ದೇಶದಾದ್ಯಂತ ಕಡಂಗಗಳ ಅಥವಾ ಕಂದಕಗಳ ರಚನೆಯಾಯಿತು ಎಂಬುದನ್ನು ಇತಿಹಾಸದ ಪುಟುಗಳಿಂದ ತಿಳಿಯಬಹುದು. (ರೈಸ್, ಪೂವೋಕ್ತ, ಕೃಷ್ಣಯ್ಯ ಡಿ.ಎನ್. ಪೂರ್ವೋಕ್ತ ಕೃತಿಗಳನ್ನು ಗಮನಿಸಬಹುದು.)

ಕಾಡಿನ ನಡುವೆ ಇರುವ ಆಳವಾದ ಕಂದಕಗಳು ಶತ್ರುಗಳಿಗೆ ಅಡ್ಡಿಯಾಗಿದ್ದವು. ಸುಲಭವಾಗಿ ಹಾದು ಬರಲು ಸಾಧ್ಯವಾಗದೆ ಆಳೆತ್ತರದ ದಿಣ್ಣೆಯನ್ನು ಹತ್ತಿ ಕಂದಕಗಳನ್ನು ದಾಟಿ ಸಾಗುವುದು

ಸುಲಭವಾಗುತ್ತಿರಲಿಲ್ಲ. ಇದು ಶತ್ರು ಸೈನಿಕರ ಮನೋಸ್ಥೈರ್ಯವನ್ನೇ ಉಡುಗಿಸಿಬಿಡುತ್ತಿತ್ತು. ಅಲ್ಲದೆ ಅಲ್ಲಲ್ಲಿ ಹುಸಿ ಕಡಂಗಗಳು ಇದ್ದು ಅವುಗಳ ಅರಿವಿಲ್ಲದೆ ಶತ್ರುಗಳು ಈ ಹುಸಿ ಕಡಂಗಗಳಲ್ಲಿ ಬಿದ್ದು ಮೇಲೇಳಲಾರದೆ ಖೆಡ್ಡಕ್ಕೆ ಬಿಟ್ಟ ಆನೆಯಂತಾಗುತ್ತಿದ್ದರು. ಅರಸರು ತಮ್ಮ ಅರಮನೆ ಮತ್ತು ನಾಡಿನ ರಕ್ಷಣೆಗಾಗಿ ಕಡಂಗಗಳನ್ನು ನಿರ್ಮಿಸಿದರೆ ಕೊಡಗಿನ ಜನ ತಮ್ಮ ಮನೆ ಮತ್ತು ಆಸ್ತಿಗಳ ಸಂರಕ್ಷಣೆಗಾಗಿ ಕಂದಕಗಳನ್ನು ನಿರ್ಮಿಸಿರುವುದನ್ನು ಕೊಡಗಿನಾದ್ಯಂತ ಕಾಣಬಹುದಾಗಿದೆ.

ಇಲ್ಲಿ ನಾವು ಪ್ರಮುಖವಾಗಿ ಗಮನಿಸಬೇಕಾದ ವಿಚಾರ ಎಂದರೆ ಈ ಕಡಂಗಗಳು ಹೊಂದಿರುವ ರಾಜಕೀಯ ಮತ್ತು ಸಾಮಾಜಿಕ ಆಯಾಮಗಳು. ರಾಜಕೀಯವಾಗಿ ಒಕ್ಕ, ಊರು, ನಾಡು, ದೇಶ ಎಂಬುದಾಗಿ ವಿಂಗಡಿಸಿ ಆಡಳಿತದ ಅನುಕೂಲಕ್ಕಾಗಿ ಕಡಂಗಗಳ ಕಲ್ಪನೆಯು ಹಂತ ಹಂತವಾಗಿ ಅಸ್ತಿತ್ವಕ್ಕೆ ಬಂದಿತ್ತು ಎಂಬುದನ್ನು ಒಪ್ಪುವುದಾದರೆ ಇದು ರಾಜಕೀಯ ಆಯಾಮವಲ್ಲದೆ ಬೇರೇನೂ ಅಲ್ಲ. ಹಾಗೆಯೇ ಕಾಲಾಂತರಗಳಲ್ಲಿ ಈ ವ್ಯವಸ್ಥೆಗೆ ಹೊಂದಿಕೊಂಡ ಜೀವನ ಕ್ರಮದೊಳಗೆ ಕಟ್ಟಿದ ಸಮಾಜವು ಕಡಂಗಗಳ ಸಾಮಾಜಿಕ ಆಯಾಮವನ್ನು ಸ್ಪಷ್ಟವಾಗಿ ಕಟ್ಟಿಕೊಡುತ್ತದೆ. ಪ್ರತೀ ಒಕ್ಕದ ಆಸ್ತಿಪಾಸ್ತಿಗಳ, ಜಮೀನುಗಳ ಮತ್ತು ಐನ್‌ಮನೆಗಳ ಸುತ್ತಲೂ ವ್ಯವಸ್ಥಿತವಾಗಿ ಸುತ್ತುವರೆದಿರುವ ಕಡಂಗಗಳು ಸರಹದ್ದುಗಳನ್ನು ನಿರ್ಧರಿಸುವಲ್ಲಿ, ಕುಟುಂಬಗಳನ್ನು ರಕ್ಷಿಸುವಲ್ಲಿ ಮತ್ತು ಸಾಂಸ್ಕೃತಿಕ ವಿಚಾರಗಳ, ವ್ಯಾಪಾರ ವಹಿವಾಟುಗಳ ಮನುಷ್ಯ ಸಂಬಂಧೀ ನೆಲೆಗಳಲ್ಲಿ ಸಂಪರ್ಕ ಸಾಧನವಾಗಿ ಕೆಲಸ ಮಾಡುವುದರ ಮೂಲಕ ಕಡಂಗಗಳ ಸಾಮಾಜಿಕ ಆಯಾಮಗಳನ್ನು ಗುರುತಿಸುವುದು ಸುಲಭವಾಗುತ್ತದೆ. ಕಡಂಗಗಳ ಅವಶ್ಯಕತೆಗಳನ್ನು ಕೊಡಗಿನ ರಾಜನೀತಿಯಲ್ಲಿ ಈ ಕೆಳಗಿನಂತೆ ಗುರುತಿಸಬಹುದು.

೧. ನಾಯಕರ ಆಳ್ವಿಕೆಯ ಕಾಲಘಟ್ಟ

೨. ಲಿಂಗಾಯಿತ ಅರಸರ ಕಾಲಘಟ್ಟ

೩. ಬ್ರಿಟಿಷ್ ಆಳ್ವಿಕೆಯ ಕಾಲಘಟ್ಟ

ಕಡಂಗಗಳ ರಚನೆಯು ಶತಮಾನಗಳಿಂದ ನಿರಂತರವಾಗಿ ನಡೆಯುತ್ತಿದ್ದರೂ ಕಡಂಗಗಳ ರಚನೆಗಳ ಬೇರುಗಳನ್ನು ನಾಯಕರ ಆಳ್ವಿಕೆಯ ಹಂತದಲ್ಲಿ ಅಂದರೆ ೧೫-೧೬ ಶತಮಾನಗಳಲ್ಲಿಯೇ ಗಮನಿಸಬಹುದು. ಕೊಡಗಿನಲ್ಲಿ ಲಿಂಗಾಯಿತ ಅರಸು ಮನೆತನ ಸ್ಥಾಪನೆಗೆ ಮುಂಚೆ ಅಲ್ಲಲ್ಲಿ ಆಳುತ್ತಿದ್ದ ನಾಯಕರು ಪರಸ್ಪರ ಹೋರಾಡುತ್ತಿದ್ದರು. ಒಂದೊಂದು ನಾಡುಗಳನ್ನು ಅಥವಾ ಕೆಲವು ಊರುಗಳನ್ನು ಆಳುತ್ತಿದ್ದ ನಾಯಕರಿಗೆ ತಮ್ಮ ಆಸ್ತಿ ಮತ್ತು ಕುಟುಂಬಗಳ ರಕ್ಷಣೆ ದಟ್ಟ ಕಾಡುಗಳ ಮಧ್ಯೆ ಸವಾಲಾಗಿಯೆ ಇತ್ತು. ಶತ್ರುಗಳು ಪಕ್ಕದ ನಾಡಿನಲ್ಲಿಯೇ ಇರುತ್ತಿದುದರಿಂದ ಯಾವ ಸಮಯದಲ್ಲಾದರೂ ಸಮಸ್ಯೆ ಎದುರಾಗುವ ಸಾಧ್ಯತೆ ಇತ್ತು. "ನಾಯಕರು ಇನ್ನೊಬ್ಬ

ನಾಯಕರೊಡನೆ ಹೋರಾಡುತ್ತಿದ್ದರು. ಒಂದು ನಾಡು ಇನ್ನೊಂದು ನಾಡಿಗೆ ಎದುರಾಳಿಯಾಗಿತ್ತು. ಅದರ ಕುರುಹಾಗಿ ಅಂದಿನ ನಾಯಕರು ತಮ್ಮ ರಕ್ಷಣೆಗೋಸ್ಕರ ಆಳವಾದ ಕಂದಕಗಳನ್ನು ನಾಡಿನ ಉದ್ದಗಲಕ್ಕೂ ತೋಡಿಕೊಂಡಿದ್ದನ್ನು ಇವತ್ತು ಕಾಣಬಹುದು" ಎಂಬ ಮೊಗ್ಲಿಂಗ್ ಅವರ ಬರಹಗಳಲ್ಲಿ ನಾಯಕರ ಆಳ್ವಿಕೆಯ ಅವಧಿಯಲ್ಲಿ ಇದ್ದಿರಬಹುದಾದ ರಾಜಕೀಯ ಪರಿಸ್ಥಿತಿಗಳನ್ನು ಊಹಿಸಬಹುದಾಗಿದೆ(ಮೋಗ್ಲಿಂಗ್, ೧೮೫೫: ೩೧).

ಎರಡನೇ ಕಾಲಘಟ್ಟದಲ್ಲಿ ಕಡಂಗಗಳ ರಚನೆ ವಿಸ್ತೃತ ರೂಪವನ್ನು ಪಡೆಯಿತು. ಲಿಂಗಾಯಿತ ಅರಸರ ಆಳ್ವಿಕೆಯ ಕಾಲಘಟ್ಟದಲ್ಲಿ ಮುಖ್ಯವಾಗಿ ದೊಡ್ಡವೀರಪ್ಪ ಅರಸರ ಆಳ್ವಿಕೆಯ ಕಾಲಘಟ್ಟದ ಕೊಡಗಿನಾದ್ಯಂತ ಕಡಂಗಗಳನ್ನು ನಿರ್ಮಾಣಮಾಡಿದ್ದರ ಬಗ್ಗೆ ಚರಿತ್ರೆಯ ಪುಟಗಳಲ್ಲಿ ಸಾಕಷ್ಟು ವಿವರಣೆಗಳು ಸಿಗುತ್ತದೆ. ಆಡಳಿತದಲ್ಲಿ ಸುಧಾರಣೆ, ಸರಹದ್ದುಗಳ ನಿರ್ಣಯ ಹಾಗೂ ಶತ್ರುಗಳಿಂದ ರಕ್ಷಣೆ ಮೊದಲಾದ ಮೂಲ ಉದ್ದೇಶಗಳನ್ನು ಹೊಂದಿದ್ದ ಲಿಂಗಾಯಿತ ಅರಸರು ಕಡಂಗಗಳ ನಿರ್ಮಾಣ ಕಾರ್ಯದಲ್ಲಿ ನಿರ್ಣಾಯಕ ಪಾತ್ರವಹಿಸಿದರು ಎಂದರೆ ತಪ್ಪಾಗಲಾರದು. ಮುಂದೆ ಬ್ರಿಟಿಷ್ ಆಡಳಿತ ಅವಧಿಯಲ್ಲಿ ಕಡಂಗಗಳ ರಚನಾಕಾರ್ಯಕ್ಕೆ ಸಾಕಷ್ಟು ಕಾರ್ಮಿಕರ ಅವಶ್ಯಕತೆ ಇದ್ದುದರಿಂದ ಸರಹದ್ದು ನಿರ್ಣಯ ಪ್ರಕ್ರಿಯೆಯಲ್ಲಿ ಸುಧಾರಣೆ ತರುವ ಪ್ರಯತ್ನ ನಡೆಯಿತು. ಕೊಡಗಿನಲ್ಲಿ ಬ್ರಿಟಿಷ್ ಆಡಳಿತದಲ್ಲಿ, ಶಾಂತಿ ನೆಲೆಸಿದ್ದ ಕಾರಣ ಕಡಂಗಗಳ ರಚನಾಕಾರ್ಯ ಮುಂದುವರಿಯುವುದು ಅನಿವಾರ್ಯವಾಗಿರಲಿಲ್ಲ. ಬದಲಾಗಿ ಸರಹದ್ದು ನಿರ್ಣಯಕ್ಕೆ ಸರ್ವೆ ಕಲ್ಲುಗಳನ್ನು ನೆಟ್ಟರು.

ಜಾನ್ ಹೆನ್ರಿಪೀಲ್‌ರವರು ವೀರರಾಜೇಂದ್ರ ಒಡೆಯರಿಗೆ ೧೮೦೨ರಲ್ಲಿ ಬರೆದು ಕೊಟ್ಟ ಕಾಗದದಲ್ಲಿ ಈ ಕೆಳಗಿನ ವಿವರಗಳು ದೊರೆಯುತ್ತದೆ.

ರಾಜೇಂದ್ರ ನಾಮೆಯಲ್ಲಿನ ಈ ವಿವರಣೆಗಳಲ್ಲಿ ಅಂದಿನ ರಾಜಕೀಯ ಅನಿವಾರ್ಯತೆಗಳ ಕಾರಣದಿಂದ ಬ್ರಿಟಿಷ್ ಸರಕಾರದ ಜಾನ್ ಹೆನ್ರಿಪೀಲ್‌ರವರು ಕೊಡಗನ್ನು ವಶಕ್ಕೆ ತೆಗೆದುಕೊಳ್ಳುವುದಕ್ಕೆ ಮುಂಚೆಯೇ ಮುಂಜಾಗ್ರತ ಕ್ರಮವಾಗಿ ೧೮೦೦ರಲ್ಲಯೇ ಸರಹದ್ದು ನಿರ್ಣಯ ಮಾಡಿರುವುದನ್ನು ಗಮನಿಸಬಹುದು. ರಾಜೇಂದ್ರನಾಮೆಯಲ್ಲಿ ಸರಹದ್ದಿಗೆ ಕೊಡಗು ಮತ್ತು ಮೈಸೂರು ಸಂಬಂಧಪಟ್ಟಂತೆ ಕೆಲವು ಉಲ್ಲೇಖಗಳಿವೆ. ಕೊಡಗು ಮತ್ತು ಮೈಸೂರು ಸಂಸ್ಥಾನಗಳ ಮಧ್ಯೆ ಸರಹದ್ದಿಗೆ ಸಂಬಂಧಪಟ್ಟಂತೆ ಇದ್ದ ತಕರಾರುಗಳನ್ನು ಮನಗಂಡು ಅಂದಿನ ಬ್ರಿಟಿಷ್ ಅಧಿಕಾರಿಗಳು ಕೈಗೊಂಡ ಕ್ರಮಗಳ ವಿವರಗಳನ್ನು ರಾಜೇಂದ್ರನಾಮೆಯಲ್ಲಿ ಉಲ್ಲೇಖಿಸಲಾಗಿರುವ ಪ್ರಕಾರ ಈ ಕೆಳಗಿನಂತೆ ಗ್ರಹಿಸಲಾಗಿದೆ.

"ಸರಹದ್ದುಗಳ ಕಡೆಗೆ ಜಾನ್ ಹೆನ್ರಿಪೀಲ್ ಸಾಹೇಬರು ಏಳು ಸಾವಿರ ಸೀಮೆಯಿಂದ ಬಿಸಿಲೆಘಟ್ಟ ಇಳಿದು ಸುಬ್ರಮಣ್ಯ ತಲುಪಿದರು. ಕೊಡಗು ಸಂಸ್ಥಾನದ ಸೀಮೆ, ಮಂಗಳೂರು

ತಾಲೂಕು ಸೀಮೆ ಹಾಗೂ ಮೈಸೂರು ಸೀಮೆಗೆ ಕೂಡಿದ ಸರಹದ್ದು ಯಾವುದು ಎಂಬುದು ಬಗ್ಗೆ ವಿಚಾರಿಸಿ ಮೂರು ಸರಕಾರಕ್ಕೂ ಸೇರುವ ಕುಮಾರಧಾರ ಹೋಳೇಯ ಸರಹದ್ದಿನಿಂದ, ಮುಗ್ಗುಡೆ, ಹೆಗ್ಗಡದೇವನಕೋಟೆ, ಬೈನಾಡುಗಳವರೆಗೆ ಜಾನ್ ಹಿನ್ರಿಪೀಲ್ ಅವರು ಸರ್ವೆಮಾಡಿಸಿದರು. ಈ ಸರ್ವೆಕಾರ್ಯದಲ್ಲಿ ಮೆಕೆಂಜಿ ಸಾಹೇಬರು, ಕರುಣಿಕ ಸುಬ್ಬಯ್ಯ, ಮಹಾರಾಷ್ಟ್ರದ ತಮ್ಮಾಜಿಪಂಥ ಮುಂತಾದವರು, ಭಾಗವಹಿಸಿ ಆಯಾಯ ಊರುಗಳ ತಕ್ಕಮುಖ್ಯಸ್ಥರ ಅಭಿಪ್ರಾಯ ಪಡೆದು ರಿಪೋರ್ಟ್‌ನ್ನು ಸಿದ್ದಪಡಿಸಿದರು. ಈ ರಿಪೋರ್ಟ್‌ನ್ನು ಊರ್ಜಿತಗೊಳಿಸಲು ತಪಶೀಲು ಮಾಡುವುದಕೋಸ್ಕರ ಇಂಜಿನೀಯರ್ ಇಮಿಲ್ ಸಾಹೇಬರನ್ನು ಜನರಲ್ ರಾಬರ್ಟ್ ಅಬಕ್ರಂಬಿ ಸಾಹೇಬರು ಕಳಿಸಿಕೊಟ್ಟರು. ಇಂಜಿನೀಯರ್ ಇಮಿಲ್ ಸಾಹೇಬರು ಈ ರಿಪೋರ್ಟನ್ನು ಅನುಮೋದಿಸಿದರು. ಹಾಗಾಗಿ ಈ ಸರಹದ್ದನ್ನು ಊರ್ಜಿತಗೊಳಿಸಲು ಮೂರು ಸಂಸ್ಥಾನಗಳ ಪ್ರತಿನಿಧಿಗಳ ಸಮುಖದಲ್ಲಿ ಸರಹದ್ದು ನಿಶಾನಿಗಳನ್ನು ನಿಲ್ಲಿಸುವ ಕೆಲಸ ಪ್ರಾರಂಭಿಸಲಾಯಿತು. ಕೆಲವು ಕಡೆಗಳಲ್ಲಿ ಕಂದಕಗಳನ್ನು ತೆಗೆಸಲಾಯಿತು ಸುಮಾರು ನೂರತ್ತೊಂಬತ್ತಾರು ಕಂಪನಿ ಸರಕಾರದ ಮುದ್ರೆ ಕಲ್ಲುಗಳನ್ನು ಕೆತ್ತಿಸಿ ನೆಡಿಸಲಾಯಿತು. ಕೆಲವುಕಡೆ ಮರದ ಗೂಟಗಳನ್ನು ನಿಲ್ಲಿಸಲಾಯಿತು. ಹೀಗೆ ಕೈಗೊಂಡ ಸರಹದ್ದು ವಿಂಗಡಣಾ ಕ್ರಮದ ತಪಶೀಲನ್ನು ಕೊಡಗು ಸಂಸ್ಥಾನದ ದೊರೆಗಳಿಗೆ ಜಾನ್ ಹೆನ್ರಿಪೀಲ್‌ರವರು ಕಳಿಸಿಕೊಟ್ಟರು. ಆ ತಪಶೀಲನ ಸರಕಾರ ಈ ಕೆಳಗಿನಂತಿದೆ.

"ಎರಡೂ ಕಡೆಸರಕಾರಕ್ಕೆ (ಕೊಡಗು ಮತ್ತು ಮೈಸೂರು ಸಂಸ್ಥಾನಗಳು) ಇದ್ದ ಸರಹದ್ದಿನ ತಕರರಾರು ಎರಡು ಕಡೆ ಪ್ರತಿನಿಧಿಗಳ ಸಮ್ಮುಖದಲ್ಲಿ ತಪಶೀಲುಮಾಡಿ ತೀರಿಸಲಾಗಿದೆ. ಮೆಕೆಂಜಿ ಸಾಹೆಬರ ಸಹಿಮಾಡಿದ್ದ ತಪಶೀಲನ್ನು ಈ ಪತ್ರದೊಡನೆ ತಮ್ಮ ಅವನಾಹನೆಗೆ ಕಳಿಸಿಕೊಡಲಾಗಿದೆ. ಎಲ್ಲ ವ್ಯಾಜ್ಯಗಳೂ ಇಲ್ಲಿದೆ ಮುಗಿದ ಹಾಗೆ ಆಯಿತು. ಕಲ್ಲು ಕಂಬಗಳು ಮತ್ತು ಮರದ ಗೂಟಗಳನ್ನು ಸರಹದ್ದಿನ ಉದ್ದಕ್ಕೂ ನೆಡಲಾಗಿದೆ ಕಲ್ಲಿನ ಕಂಬಗಳಿಗೆ ಕಂಪನ ಸರಕಾರದ ಮುದ್ರೆ ಇದೆ. ಒಂದು ಕಂಬದಿಂದ ಇನ್ನೊಂದು ಕಂಬಕ್ಕೆ ಮಧ್ಯೆ ಕಂದಕ(ಕಡಂಗ)ಗಳನ್ನು ತೆಗೆಸುವುದು ಒಳ್ಳೆಯದು ಎಂದು ನಮಗೆ ಅನಿಸುತ್ತದೆ. ಪ್ರತೀ ವರ್ಷ ತೆಗೆಯಲಾಗುವ ಕಡಂಗಗಳ ಲೆಕ್ಕ ಅಮಲುದಾರರ ಮುಖಾಂತರ ನಮಗೆ ಒದಗಿಸಬೇಕು. ಈ ಸಲಹೆಗಳನ್ನು ಪಾಲಿಸಿದರೆ ಇನ್ನು ಮುಂದೆ ಸರಹದ್ದಿಗೆ ಸಂಬಂಧಿಸಿದ ತಕರಾರು ಇನ್ನು ಬರಲಿಕ್ಕಿಲ್ಲ ಎಂಬ ಅಭಿಪ್ರಾಯ ನಮ್ಮದು. ಕಲ್ಲು ಕಂಬಗಳ ಮಧ್ಯೆ ಕಂದಕಗಳನ್ನು ಗುಂಡಿಗಳನ್ನು ತೆಗೆಸಿ ಅಲ್ಲಿಯೂ ರಾಜಮುದ್ರೆ ಇರುವ ಕಲ್ಲುಗಳನ್ನು ನೆಡಿಸಬೇಕು. ಕಿಡಿಗೇಡಿಗಳು ಈ ಸರಹದ್ದುಗಳನ್ನು ಬದಲಾಯಿಸಲು ಅವಕಾಶ ಕೊಡಕೂಡದು. ಈ ರೀತಿಯ ಮೇರೆ ಕಡಂಗಗಳು ಸುಬ್ರಮಣ್ಯದ ಸರಹದ್ದಿನಿಂದ, ಹೆಗ್ಗಡದೇವನಕೋಟೆ ಪರಿಯಂತ ಬೈನಾಡಿನವರೆಗೆ ತಯಾರಾಗಬೇಕು. ಈ ಬಗ್ಗೆ ಮೈಸೂರು ಸರಕಾರದ ಇಲಾಖೆಯವರಿಗೂ ತಾವು ಮನದಟ್ಟು ಮಾಡಿ ಕಂದಕ ತೆಗೆಯುವ ಕೆಲಸಗಳನ್ನು

ಅವರಿಗೂ ಒಪ್ಪಿಸಬೇಕು" ಎಂದು ಕೊಡಗಿನ ಅರಸರಿಗೆ ಕೋರಲಾಗಿದೆ(ರಾಜೇಂದ್ರನಾಮೆ, ೧೯೫೭(೨೦೧೪): ೨೬೧-೬೪) ಎಂಬ ವಿವರಗಳನ್ನು ಗಮನಿಸಿದಾಗ ಸರಹದ್ದುಗಳ ನಿರ್ಮಾಣ ಕಾರ್ಯದ ಅಗತ್ಯತೆ ಮತ್ತು ಬ್ರಿಟಿಷ ಸರ್ಕಾರದ ಚಾಣಾಕ್ಷ ಹಾಗೂ ವ್ಯವಸ್ಥಿತ ನಿಲುವುಗಳಿಗೆ ಸಾಕ್ಷಿಯಾಗಿದೆ. ಈ ಸಂದರ್ಭದಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದೆಂದರೆ ಕಡಂಗಗಳೆಂಬ ಕಂದಕಗಳು ಬ್ರಿಟಿಷ್ ಆಡಳಿತಕ್ಕೆ ಹೇಗೆ ಪೂರಕವಾಗಿ ಕೆಲಸಮಾಡಿದವು ಎನ್ನುವ ವಿಚಾರ ಮತ್ತು ಕಡಂಗಗಳನ್ನು ತೆಗೆಯಲು ಕಷ್ಟವಾಗುವುದರಿಂದ ಕಲ್ಲುಗಳನ್ನು ಕೆತ್ತಿ ರಾಜಮುದ್ರೆ ಒತ್ತಿ ನೆಡಿಸಿ ಗಡಿ ನಿರ್ಧಾರ ಮಾಡುವ ಕ್ರಮವನ್ನು ಅನುಸರಿಸಿರುವುದು ಗಮನಾರ್ಹ ವಿಚಾರ. ಕೊಡಗಿನ ಗಡಿ ನಿರ್ಧಾರ ಮಾಡುವಲ್ಲಿ ಆಧುನಿಕ ವಿಧಾನಗಳು ಕಾಲಿಟ್ಟ ಈ ಕಾಲಘಟ್ಟ ಚಾರಿತ್ರಿಕವಾಗಿ ಬಹಳ ಮುಖ್ಯವಾಗುತ್ತದೆ.

* * *

ಕೊಡಗಿನ ಪರಿಸರದಲ್ಲಿ ಕಂಡುಬರುವ ಕಡಂಗಗಳಲ್ಲಿ ಸಾಕಷ್ಟು ಮರಗಿಡಗಳು ಬೆಳೆದು ಶತಮಾನಗಳು ಉರುಳಿರುವುದರಿಂದ ನಿರ್ದಿಷ್ಟವಾಗಿ ಇವುಗಳ ರೂಪುರೇಷೆಗಳನ್ನು ಗುರುತಿಸುವುದು ಕಷ್ಟವಾಗುತ್ತದೆ. ಇದಲ್ಲದೆ ಆಧುನಿಕ ಯಂತ್ರಗಳಾದ ಜೆ.ಸಿ.ಬಿ./ಎಕ್ಸ್‌ಕವೇಟರ್‌ಗಳಂತಹ ಭೂಮಿಯನ್ನು ಅಗೆಯುವ ಯಂತ್ರಗಳು ಕೊಡಗಿನಾದ್ಯಂತ ಇಂತಹ ಅದೆಷ್ಟೋ ಚಾರಿತ್ರಿಕ ವಿಶೇಷತೆಗಳನ್ನೊಳಗೊಂಡ ಕಡಂಗಗಳನ್ನು ನಾಶಪಡಿಸಿದೆ. ತೋಟ ಮಾಡುವುದರ ಸಲುವಾಗಿ ಹಾಗೂ ಪಟ್ಟಣಗಳನ್ನು ಕಟ್ಟುವುದರ ಸಲುವಾಗಿ ಮಣ್ಣು ಕಲ್ಲುಗಳನ್ನು ಮುಚ್ಚಿ ನೆಲವನ್ನು ಸಮತಟ್ಟಾಗಿ ಮಾಡುವ ಆಧುನಿಕತೆಯ ಭರಾಟೆಗೆ ಸಿಲುಕಿ ಕಡಂಗಗಳು ಕಣ್ಮರೆಯಾಗಿವೆ. ಒಂದರ್ಥದಲ್ಲಿ ಕಾಫಿತೋಟ ವಿಸ್ತರಣೆಯು ಕಡಂಗಗಳಿಗೆ ಮುಳುವಾಯಿತು.

ಒಟ್ಟಾರೆಯಾಗಿ ಕೊಡಗಿನ ಕಡಂಗಗಳು ತನ್ನದೇ ಆದ ವಿಶಿಷ್ಟ ರಚನೆಗಳಿಂದಾಗಿ ಕೊಡಗಿನ ಜನಜೀವನದ ಮೇಲೆ ಗಾಢವಾದ ಪ್ರಭಾವ ಬೀರುವುದರ ಜೊತೆಗೆ ಕೊಡಗಿನ ಚರಿತ್ರೆಯನ್ನು ಅರ್ಥೈಸಿಕೊಳ್ಳುವಲ್ಲಿಯೂ, ಕೊಡಗಿನ ಸಂಕೀರ್ಣ ಜೀವನವನ್ನು ಅರಿತುಕೊಳ್ಳುವಲ್ಲಿಯೂ ಮಹತ್ವದ ಪಾತ್ರ ವಹಿಸುತ್ತವೆ ಎಂಬುದನ್ನು ಅಧ್ಯಯನ ಮಾಡಿದ ಯಾರಿಗಾದರೂ ಅನ್ನಿಸದೇ ಇರದು. ಹಾಗೆಯೇ ಪ್ರಸ್ತುತ ಅಧ್ಯಯನದ ವಸ್ತು ಅವಿಭಕ್ತ ಕುಟುಂಬ ಪದ್ಧತಿ ನಾಡು ನುಡಿಯ ಸಂಬಂಧಗಳಿಗೆ ಕೊಡಗಿನ ಕಡಂಗಗಳು ತಮ್ಮದೇ ಆದ ಕೊಡುಗೆ ನೀಡಿದೆ ಎಂದರೆ ತಪ್ಪಾಗಲಾರದು. ಏಕೆಂದರೆ ಒಂದು ಒಕ್ಕವು ರೂಪುಗೊಳ್ಳಬೇಕಾದರೆ ಒಂದು ನಿರ್ಧಿಷ್ಟ ಭೌಗೋಳಿಕ ಪ್ರದೇಶ ಒಳಗೆ ಬೆಳೆಯಬೇಕಾದುದು ಅನಿವಾರ್ಯವಾಗಿತ್ತು. ಹಾಗಿದ್ದ ಸಂದರ್ಭದಲ್ಲಿ ಹಂತಹಂತವಾಗಿ ಅಸ್ತಿತ್ವಕ್ಕೆ ಬರುತ್ತಿದ್ದ ಒಕ್ಕಗಳಿಗೆ ಅವುಗಳ ರಕ್ಷಣೆ ತುಂಬ ಅಗತ್ಯವಾಗಿತ್ತು. ಹಾಗೆಯೇ ನೆರೆಯ ಒಕ್ಕದವರ ಆಸ್ತಿಪಾಸ್ತಿಗೆ ಸಂಬಂಧಪಟ್ಟಂತೆ ತಂಟೆ ತಕರಾರುಗಳು ಬರದಂತೆ ಸರಹದ್ದುಗಳನ್ನು ನಿರ್ಮಿಸಿಕೊಳ್ಳಬೇಕಿತ್ತು. ಒಕ್ಕಗಳಲ್ಲಿ ಆಸ್ತಿ ಗದ್ದೆಗಳು, ಮನೆ ಮೊದಲಾದ ಕಡೆಗಳಲ್ಲಿ ತಮ್ಮದೇ

ಸರಹದ್ದುಗಳನ್ನು ಗುರುತುಗಳನ್ನು ಕಂಡುಕೊಳ್ಳಬೇಕಿತ್ತು. ಮತ್ತು ತಮ್ಮ ಒಕ್ಕದ ಅನನ್ಯತೆಯ ಪ್ರಶ್ನೆ ಬಹಳ ಮುಖ್ಯವಾಗಿತ್ತು. ಕಾಲಾಂತರದಲ್ಲಿ ತಲೆಮಾರಿನಿಂದ ತಲೆಮಾರಿಗೆ ಕಡಂಗಗಳನ್ನು ನಿರ್ಮಿಸಿಕೊಂಡರು. ಇದು ಕೇವಲ ಒಂದು ಒಕ್ಕದ ಪ್ರಶ್ನೆಯಾಗಿರಲಿಲ್ಲ. ಕೊಡಗಿನಾದ್ಯಂತ ಬದುಕಿ ಬಾಳಿದ ಒಕ್ಕಗಳನ್ನು ರೂಪಿಸಿ ಅನನ್ಯತೆಯನ್ನು ಕಾಪಾಡುವಲ್ಲಿ ಬಹಳ ಮುಖ್ಯ ಪಾತ್ರ ವಹಿಸಿದವು ಎಂದರೆ ತಪ್ಪಾಗಲಾರದು. ಹಾಗೆಯೇ ಕಡಂಗಗಳು ಮುಖ್ಯವಾಗಿ ಮೇಲೆ ಹೇಳಿದಂತೆ ಮೂರು ಘಟ್ಟಗಳಲ್ಲಿ ನಿರ್ಮಾಣಗೊಂಡವು. ಆ ಕಾಲಘಟ್ಟದ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಅವಶ್ಯತೆಗಳಿಗನುಸಾರವಾಗಿ ಕಡಂಗಗಳು ಬಳಕೆಗೊಂಡವು. ಊರು ಊರುಗಳ ಮಧ್ಯೆ ನಾಡು ನಾಡುಗಳ ಮಧ್ಯೆ ಸಂಬಂಧ ಬೆಸೆಯುವಲ್ಲಿ ಕಡಂಗಗಳು ಪಾತ್ರವಹಿಸಿದವು. ಕೊಡಗು 'ದೇಶಕಟ್ಟ್ ಪಾಟ್'ನ ಪ್ರಕಾರ ಒಂದು ರಾಷ್ಟ್ರೀಯ ಕಲ್ಪನೆ ಕೊಡಗಿನಲ್ಲಿ ಬೆಳೆಯಲು ಮತ್ತು ಸುಭದ್ರ ದೇಶದ ಕಲ್ಪನೆಗೆ ಆಯಾಮವನ್ನು ಕೊಡುವಲ್ಲಿ ವಿವಿಧ ರೀತಿಯ ಕಡಂಗಗಳು ಮಹತ್ತರ ಪಾತ್ರವಹಿಸಿದವು. ಸಂಪರ್ಕ ಮಾಧ್ಯಮಗಳ ಕೊರತೆಯಿದ್ದ ಕಾಲಘಟ್ಟದಲ್ಲಿ ಸಾಂಸ್ಕೃತಿಕ ಕೊಡುಕೊಳ್ಳುವಿಕೆಗೆ ಕಡಂಗಗಳು ಬಹಳವಾಗಿ ಬಳಕೆಗೊಂಡವು. ಹಾಗಾಗಿ ಒಕ್ಕ, ನಾಡು, ನುಡಿಗಳ ಸಮಗ್ರ ಬೆಳವಣಿಗೆಗೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಕಡಂಗಗಳು ಪೂರಕವಾಗಿ ಕೆಲಸಮಾಡಿದವು ಎಂದರೆ ತಪ್ಪಾಗಲಾರದು. ಈ ಕಾರಣದಿಂದಾಗಿ ಶಿಷ್ಟತೆಯಿಂದ ಕೂಡಿದ ಕೊಡಗಿನ ಕಡಂಗ ಅಪರೂಪದ ಅಧ್ಯಯನದ ವಿಷಯವಾಗುತ್ತದೆ.

**ಕೊನೆಯ ಟಿಪ್ಪಣಿಗಳು**

೧. 'ಪೆಣ್ಣಂಗಡಲು' – ಕ್ರಿ.ಶ. ೧೧೨೦ರ ಚಂದ್ರನಾಥಾಷ್ಟಕದಲ್ಲಿ ಮೌಕ್ತಿಕ ಕವಿ 'ಪೆಣ್ಣಂಗಡಲು' ಪದ ಪ್ರಯೋಗಿಸುತ್ತಾನೆ. ಪೆಣ್ಣಂಗಡಲು ಎಂದರೆ ಪನ್ನಗದ್ದೆ ಎಂದು, ಪನ್ನಗದ್ದೆ ಬನಗದ್ದೆಯ ಪಕ್ಕದಲ್ಲಿ ವಿಶಾಲವಾದ ಕೆರೆಯನ್ನು ಸೂಚಿಸುವಲ್ಲಿ ಕಡಂಗದ ರಚನೆ ಗದ್ದೆ ಹಾಗೂ ಕೆರೆಯ ನಡುವೆ ಇದ್ದುದರ ವಿವರವಿದೆ.

೨. ಮೇಂದಲೆ ನಾಡು – ಎಂದರೆ ಕೊಡಗಿನ ಉತ್ತರ ವಾಯುವ್ಯ ಭಾಗದ ನಾಡುಗಳು. ಕೊಡಗಿನ ಸಂಸ್ಕೃತಿಯ ಪ್ರಾರಂಭಿಕ ಮೂಲಗಳು ಇಲ್ಲಿಂದಲೇ ಹುಟ್ಟುತ್ತದೆ.

೩. ಕಿಗ್ಗಟ್ಟು ನಾಡು – ಎಂದರೆ ಕೊಡಗಿನ ದಕ್ಷಿಣ ಭಾಗ, ಸಾಧಾರಣವಾಗಿ ಬಯಲು ಪ್ರದೇಶ.

೪. ಚದಿಪ – ಎದುರಾಳಿಯನ್ನು ಮೋಸಗೊಳಿಸುವುದು.



## ಅಧ್ಯಾಯ : ಆರು

# ಸಮಾರೋಪ

**ಕೊ**ಡಗಿಗೆ ಸಂಬಂಧಿಸಿದಂತೆ ಈಗಾಗಲೇ ಚಲಾವಣೆಯಲ್ಲಿರುವ ಚರಿತ್ರೆ ಬರವಣಿಗೆಗಳಲ್ಲಿ ರಾಜಕೇಂದ್ರಿತ ಬರಹಗಳು ಮಾತ್ರ ಪ್ರಧಾನವಾಗಿರುವುದಲ್ಲದೆ, "ರಾಜ್ಯ ವ್ಯವಸ್ಥೆಯು" ರಾಜಕೇಂದ್ರಿತ ಅಂಶಗಳಿಂದ ರೂಪುಗೊಂಡಿದೆ ಎಂಬ ವಿಚಾರಗಳು ಪ್ರಧಾನವಾಗಿವೆ. ಪ್ರಸ್ತುತ ಮಹಾಪ್ರಬಂಧವು ಈ ಅಂಶಗಳಿಗೆ ಭಿನ್ನವಾದ ವಿಚಾರಗಳನ್ನು ನಿರೂಪಿಸಲು ಯತ್ನಿಸಿದೆ. ನಾಯಕರುಗಳ ಆಳ್ವಿಕೆಯಲ್ಲಿದ್ದ ಕೊಡಗಿನ ನೂರಾರು ನಾಡುಗಳು ಹೇಗೆ ಸ್ವಾಯತ್ತೆ ಹೊಂದಿದ ಪ್ರದೇಶಗಳಾಗಿದ್ದವು ಮತ್ತು ಅವುಗಳು ತಮ್ಮ ತಮ್ಮ ಹೆಚ್ಚುಗಾರಿಕೆಗಾಗಿ ಪರಸ್ಪರ ಕದನಗಳಲ್ಲಿ ನಿರತರಾಗಿ ಪರಸ್ಪರ ಶಕ್ತಿಗಳನ್ನು ಪ್ರದರ್ಶನ ಮಾಡುತ್ತಿತ್ತು ಎಂಬುದನ್ನು ನೋಡಿದ್ದೇವೆ. ನಂತರದ ಕಾಲಘಟ್ಟದಲ್ಲಿ ಕೊಡಗಿನ ಇತಿಹಾಸದಲ್ಲಿ ಪ್ರಧಾನವಾಗಿ ಕಂಡ ಲಿಂಗಾಯಿತ ರಾಜರು ಇಂತಹ ನಾಯಕರನ್ನು ದಮನಮಾಡಿ, ನಾಯಕರ ಕೈಯಲ್ಲಿದ್ದ ಸ್ವಾಯತ್ತೆಯ ನಾಡುಗಳನ್ನು ಐಕ್ಯಗೊಳಿಸಿ ಹಾಲೇರಿ ಸಂಸ್ಥಾನವನ್ನು ರಚಿಸಿದರು ಎಂಬ ವಿಚಾರ ಬಹಳ ಮುಖ್ಯವಾಗಿದೆ. ಹಾಲೇರಿ ಸಂಸ್ಥಾನವನ್ನು ಮುಂದೆ ಕೊಡಗು ಸಂಸ್ಥಾನವೆಂದು ಗುರುತಿಸಲಾಯಿತು.

ಲಿಂಗಾಯಿತ ಅರಸರಿಗಿಂತ ಪೂರ್ವದಲ್ಲಿ ರೂಪುಗೊಂಡಿದ್ದ ಒಕ್ಕಗಳು ಲಿಂಗಾಯತ ಅರಸರ ಕಾಲದಲ್ಲಿ, ಬ್ರಿಟಿಷರ ಕಾಲದಲ್ಲಿ, ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಮತ್ತು ಜಾಗತೀಕರಣದಲ್ಲಿ ಹೊಂದಿದ ಸ್ಥಿತ್ಯಂತರಗಳನ್ನು ಕೂಲಂಕುಶವಾಗಿ ಅಭ್ಯಾಸ ಮಾಡಲಾಗಿದೆ. ಕೊಡಗಿನ ಕೃಷಿ ಕೇಂದ್ರಿತ ಸಮುದಾಯಗಳ, ಕುಶಲಕರ್ಮಿ ಸಮುದಾಯಗಳ ಹಾಗೂ ಕೃಷಿ ಕಾರ್ಮಿಕರ ಸಮುದಾಯಗಳಿಗೆ ಸೇರಿದ ಒಕ್ಕಗಳು ಒಂದಲ್ಲ ಒಂದು ಅರ್ಥದಲ್ಲಿ ಪರಸ್ಪರ ಪೂರಕವಾಗಿ ಜಾಗತೀಕರಣ ಕಾಲಘಟ್ಟದವರೆಗೆ ಜೀವನ ಮಾಡುತ್ತಿದ್ದದ್ದನ್ನು ಗಮನಿಸಬಹುದಾಗಿದೆ. ಇಂತಹ ಜೀವನ ಕ್ರಮದಲ್ಲಿ ಶೋಷಣಾತ್ಮಕ ವಿಷಯಗಳಿದ್ದರೂ, ವ್ಯವಹಾರಗಳಿದ್ದರೂ ಅವು ನಾಡುವಿನ ಸ್ವಾಯತ್ತೆಗೆ ಭಂಗ ಬರುವಂತಹದ್ದಾಗಿರಲಿಲ್ಲ. ಊರ ಹಬ್ಬಗಳಾದ ಕೈಲುಮುಹೂರ್ತ, ಹುತ್ತರಿ, ಕಾವೇರಿ ಸಂಕ್ರಮಣಗಳನ್ನು ನಾಡಹಬ್ಬವಾಗಿ ಆಚರಿಸಿಕೊಂಡು, ಎಲ್ಲರೂ ಭಾಗಿಯಾಗುವುದರ ಮೂಲಕ ನಾಡೊಂದರ ಅನನ್ಯತೆಗೆ ಕಾರಣರಾದರು. ಸಾಮಾಜಿಕ – ಆರ್ಥಿಕ ವ್ಯವಹಾರಗಳು, ನ್ಯಾಯ ಪದ್ಧತಿಗಳು ಇವುಗಳಿಂದ ಹೊರತಾಗಿರಲಿಲ್ಲ. ಲಿಂಗಾಯಿತ ಅರಸರ ಕಾಲದಲ್ಲಿ

ಇವುಗಳಿಗೆ ವ್ಯವಸ್ಥೆಯ ಸ್ವರೂಪವೊಂದು ಬಂದಿತು. ಬ್ರಿಟಿಷರ ಕಾಲದಲ್ಲಿ ಅಂತಹ ವ್ಯವಸ್ಥೆ ಇನ್ನೂ ಬಲಾಢ್ಯಗೊಂಡಿತು. ಈ ಸಂದರ್ಭದಲ್ಲಿ ಬ್ರಿಟಿಷರ ಸಖ್ಯ ಹೊಂದಿದ ಸಮುದಾಯಗಳ ಪ್ರಮುಖ ಒಕ್ಕಗಳು ರಾಜಕೀಯವಾಗಿ, ಆರ್ಥಿಕವಾಗಿ ಪ್ರಬಲಗೊಂಡವು. ಇಂತಹ ಒಕ್ಕಗಳು ಸಹಜವಾಗಿಯೇ ಕೊಡಗಿನ ನಾಡು-ನುಡಿಯನ್ನು ಎಚ್ಚರಿಸುವಂತಹ ಅಧಿಕಾರವನ್ನು ಹೊಂದಿದವು. ಹೀಗಾಗಿ ಒಕ್ಕಗಳ ಸ್ವರೂಪವು ಬ್ರಿಟಿಷರ ಕಾಲದಲ್ಲಿ ಭಿನ್ನವಾಗಿ ಕಾಣತೊಡಗಿದವು. ಅಧಿಕಾರ-ಅಂತಸ್ತುಗಳಿರುವ ಒಕ್ಕಗಳು ಮತ್ತು ಅವುಗಳಿಲ್ಲದಿರುವ ಒಕ್ಕಗಳ ನಡುವೆ ಅಜಗಜಾಂತರ ವ್ಯತ್ಯಾಸಗಳು ಗೋಚರಿಸಲಾರಂಭಿದವು. ಸಮುದಾಯವೊಂದರ ಒಕ್ಕಗಳ ಕತೆ ಹೀಗಾದರೆ ಸಮುದಾಯ-ಸಮುದಾಯಗಳ ನಡುವಿನ ವ್ಯತ್ಯಾಸಗಳು ಇನ್ನೂ ಗಂಭೀರವಾಗಿ ಗೋಚರಿಸಲಾರಂಭಿಸಿದವು. ವಸಾಹತುಪೂರ್ವ ಕಾಲಘಟ್ಟದಲ್ಲಿ ಸಮಾನ ಹಿತಾಸಕ್ತಿಗಳನ್ನು ಹೊಂದಿದ್ದ ವಿವಿಧ ಸಮುದಾಯಗಳ ಒಕ್ಕಗಳ ಐಕ್ಯತೆ ಇಲ್ಲಿ ನಿಧಾನವಾಗಿ ಬಲಹೀನವಾಗತೊಡಗಿದವು. ಈ ಕಾಲಘಟ್ಟದಲ್ಲಿ ಕೃಷಿ ಕಾರ್ಮಿಕ ಸಮುದಾಯಗಳ ಸ್ವರೂಪದಲ್ಲಿ ಬಹಳಷ್ಟು ಬದಲಾವಣೆ ಕಾಣಸಿಗುವುದಿಲ್ಲ. ಆದರೆ ಈ ಹಂತದಲ್ಲಿ ಕೊಡವ ಸಮುದಾಯವು ಬ್ರಿಟಿಷರ ಸಹವರ್ತಿಗಳಾಗಿ, ಅಧಿಕಾರಶಾಹಿಗೆ ಹತ್ತಿರವಾದವು. ಈ ಸಮುದಾಯವು ಬ್ರಿಟಿಷರ ಕಾಲದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆಯುವಲ್ಲಿ, ಇಂಗ್ಲೀಷ್ ವಿದ್ಯಾಭ್ಯಾಸ ಪಡೆದು ಅಧಿಕಾರಶಾಹಿಗಳಾಗಿ ಪರಿವರ್ತನೆಯಾಗುವುದರಲ್ಲಿ ಮತ್ತು ಆ ಸಮುದಾಯದ ಬಲಿಷ್ಠ ಒಕ್ಕಗಳ ಸದಸ್ಯರು ತಮ್ಮದೇ ಖಾಸಗಿ ಸ್ವತ್ತುಗಳನ್ನು ಹೊಂದುವ ಮೂಲಕ ಒಕ್ಕದಿಂದ ಹೊರಗೆ ಪ್ರಭಾವ ಬೆಳೆಸಿಕೊಳ್ಳುವುದರಲ್ಲಿ ಸಫಲರಾದರು. ಹೀಗಾಗಿ ಆಂತರಿಕವಾಗಿ ಒಕ್ಕದ ಪ್ರಾಬಲ್ಯವು ಕಡಿಮೆಯಾಯಿತು. ಆದರೆ ನಿರ್ಣಾಯಕ ವಿಚಾರಗಳಲ್ಲಿ ಅವರು ಒಕ್ಕದ ಹಿತಾಸಕ್ತಿಗಳನ್ನು ಮೀರುವಂತಿರಲಿಲ್ಲ ಎನ್ನುವುದು ಅಷ್ಟೇ ಸತ್ಯ. ಇಂತಹ ವಿದ್ಯಮಾನಗಳು ನಾಡೊಂದರ ಸ್ವಾಯತ್ತೆಯನ್ನು ಕುಂಠಿತಗೊಳಿಸುವಲ್ಲಿ ಅಪರೋಕ್ಷವಾಗಿ ಕಾರಣವಾದವು. ಬ್ರಿಟಿಷರ ಕಾಲಘಟ್ಟದಲ್ಲಿ ಅಧಿಕಾರ, ವಿದ್ಯಾಭ್ಯಾಸ, ಭೂಮಿ ಇತ್ಯಾದಿಗಳನ್ನು ಪಡೆಯುವುದರಲ್ಲಿ ವಿಫಲವಾದ ಬಹುತೇಕ ಸಮುದಾಯಗಳ ಒಕ್ಕಗಳು ರಾಜಕೀಯವಾಗಿ, ಆರ್ಥಿಕವಾಗಿ ನೇಪಥ್ಯಕ್ಕೆ ಸರಿದವು. ನಾಡಹಬ್ಬಗಳು, ಹರಿದಿನಗಳು, ನಾಡಿನ ಪರಸ್ಪರರಿಗೆ ಸಂಬಂಧಿಸಿದ ವ್ಯವಹಾರಗಳ ಮಜಲುಗಳು ನಾಡು ಕೇಂದ್ರಿತವಾಗುವ ಬದಲು ಬಲಿಷ್ಠ ಸಮುದಾಯಗಳ ಅಥವಾ ಸಮುದಾಯವೊಂದರ ಬಲಿಷ್ಠ ಒಕ್ಕ ಕೇಂದ್ರಿತವಾಗುವ ರೀತಿಯಲ್ಲಿ ಸ್ಥಳಾಂತರಗೊಂಡವು. ಇಂತಹ ಸಂದರ್ಭದಲ್ಲಿ ಅದರಲ್ಲಿಯೂ, ಬ್ರಿಟಿಷರ ಕಾಲದಲ್ಲಿ ಇವುಗಳು ಕೇವಲ ಆಚರಣೆಗಳಾಗಿ ಉಳಿದುಕೊಂಡವು. ಕಡಂಗಗಳ ಸ್ಥಿತಿಗತಿಗಳೂ ಇದೇ ಹಾದಿಯನ್ನು ತುಳಿದವು. ಗಡಿ, ಸ್ವಾಭಿಮಾನದ ಎಲ್ಲೆಗಳಾಗಿದ್ದ ಅನೇಕ ಕಡಂಗಗಳು ಕಾಫಿ ತೋಟಗಳಾಗಿ ಪರಿವರ್ತನೆಗೊಂಡವು. ಇಲ್ಲವೇ ಅವು ಬಲಾಢ್ಯರ ಆಸ್ತಿಯ ಭಾಗಗಳಾದವು. ಹೀಗಾಗಿ ಬ್ರಿಟಿಷರ ಆಡಳಿತಾವಧಿಯ ಕೊನೆಯ ಹಂತದಲ್ಲಿ ಕಡಂಗಗಳ ಸ್ವರೂಪದಲ್ಲಿ ಬಹಳಷ್ಟು ಬದಲಾವಣೆಯಾದವು. ಸಾಂಪ್ರದಾಯಿಕ ನಾಡು-ನುಡಿಯ ಕೊಂಡಿಯಾಗಿದ್ದ ಕಡಂಗಗಳ ಮಹತ್ವ ಸಹಜವಾಗಿಯೇ ನೇಪಥ್ಯಕ್ಕೆ ಸರಿಯಿತು.

ನಾಡುಗಳ ಸಾಮಾಜಿಕ ಸಂರಚನೆಯು ಈ ಎಲ್ಲ ಪ್ರಕ್ರಿಯೆಯಿಂದ ಹೊರತಾಗಿಲ್ಲ. ಬಲಿಷ್ಠ ಸಮುದಾಯವಾದ ಕೊಡವರಲ್ಲಿನ ಬಲಿಷ್ಠ ಒಕ್ಕಗಳು ರಾಜಕೀಯವಾಗಿ, ಆರ್ಥಿಕವಾಗಿ, ಆಡಳಿತಾತ್ಮಕವಾಗಿ, ಶೈಕ್ಷಣಿಕವಾಗಿ ಬ್ರಿಟಿಷರ ಕಾಲದಲ್ಲಿ ಪ್ರಭಾವಿಯಾದ ಸಂದರ್ಭವನ್ನು ಗಮನಿಸಿದ್ದೇವೆ. ಅಂತಹ ಒಕ್ಕಗಳು ಕೊಡವರಲ್ಲಿನ ಸಾಮಾನ್ಯ ಒಕ್ಕಗಳ ಸದಸ್ಯರನ್ನು ರಾಜಕೀಯ-ಆರ್ಥಿಕ ವಿಚಾರಗಳಿಗೆ ಸಂಬಂಧಿಸಿದಂತೆ ಗಂಭೀರವಾಗಿ ಪರಿಗಣಿಸದೆ ಇರುವುದನ್ನು ಕಾಣಬಹುದು. ನಾಡುಗಳಲ್ಲಿ ವಾಸವಿದ್ದ ಕೊಡವರಲ್ಲಿನ ಬಹುತೇಕ ಒಕ್ಕಗಳ ಸದಸ್ಯರು ಹೀಗಾಗಿ ಸಾಧಾರಣ ಕೃಷಿಕರಾಗಿ ಉಳಿದ ಕೃಷಿಕೇಂದ್ರಿತ ಸಮುದಾಯಗಳ ಜನರಂತೆ ಜೀವನ ನಡೆಸಿದ್ದನ್ನು ಕಾಣಬಹುದು. ಕೃಷಿ ಕೇಂದ್ರಿತ ಸಮುದಾಯಗಳಲ್ಲಿ ಕೊಡವೇತರ ಒಕ್ಕಗಳ ಸಂಖ್ಯೆ ತೀರಾ ನಗಣ್ಯವಾಗಿರುವುದರಿಂದ ಅವರ ಪ್ರಶ್ನೆಗಳು ಬ್ರಿಟಿಷ್ ಆಡಳಿತದ ಕಾಲಘಟ್ಟದ ಯುರೋಪಿಯನ್ ಅಥವಾ ದೇಶಿ ಅಧಿಕಾರಿಗಳಿಗೆ ಯಾವ ಸಂದರ್ಭದಲ್ಲಿಯೂ ಮುಖ್ಯವೆಂದು ಗೋಚರಿಸಲಿಲ್ಲ. ಈ ಮಾತು ಕೊಡಗಿನ ಉಳಿದ ಭಾಷಿಕ ಸಮುದಾಯಗಳ ಒಕ್ಕಗಳಿಗೂ ಅನ್ವಯಿಸುತ್ತದೆ. ಪರಿಣಾಮವಾಗಿ ಕೊಡಗಿನಲ್ಲಿ ನಾಡು-ನುಡಿಯ ಪ್ರಶ್ನೆ ಎಂದರೆ ಅದು ಕೊಡಗಿನ ಅಧಿಕಾರಸ್ಥ ಕೊಡವ ಒಕ್ಕಗಳ ಇಲೈಟ್‌ಗಳ ಪ್ರಶ್ನೆಯಾಗಿಯೇ ಉಳಿದವು. ಉಳಿದವರು ಈ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಮೂಕಪ್ರೇಕ್ಷಕರಂತೆ ಅಥವಾ ಬಹುತೇಕ ಸಂದರ್ಭಗಳಲ್ಲಿ ಆಚರಣಾತ್ಮಕ ವಿಧಿವಿಧಾನಗಳಲ್ಲಿ ಭಾಗವಹಿಸುವಲ್ಲಿಯೇ ತೃಪ್ತಿಪಟ್ಟುಕೊಂಡದ್ದನ್ನು ಗಮನಿಸಬಹುದಾಗಿದೆ.

* * *

ಸ್ವಾತಂತ್ರ್ಯಾನಂತರದ ಕಾಲಘಟ್ಟದಲ್ಲಿ ಪ್ರಬಲ ಸಮುದಾಯವಾದ ಕೊಡವರಲ್ಲಿನ ಪ್ರಬಲ ಒಕ್ಕಗಳು ರಾಜಕೀಯ ಹಿಡಿತವನ್ನು ಸಾಧಿಸುವಲ್ಲಿ ಯಶಸ್ವಿಯಾದರು. ಕೊಡಗು 'ಸಿ' ಪ್ರಾಂತ್ಯವಾಗಿ ಪ್ರತ್ಯೇಕ ರಾಜ್ಯವನ್ನು ಹೊಂದಿದ್ದ ಸಂದರ್ಭದಲ್ಲಿ ಮುಖ್ಯಮಂತ್ರಿಯಾಗಿರುವುದು ಸಿ.ಎಂ. ಪೂಣಚ್ಚನವರು. ವಿರೋಧ ಪಕ್ಷದ ಪ್ರತ್ಯೇಕ ಪಾರ್ಟಿಯ ನಾಯಕರಾಗಿದ್ದವರು ಒಂದು ಕಾಲದ ಕಾಂಗ್ರೆಸ್ ಧುರೀಣರಾಗಿದ್ದ ಪಿ.ಐ. ಬೆಳ್ಳಿಯಪ್ಪನವರು. ಈ ಸಂದರ್ಭದಲ್ಲಿ ಸಹಜವಾಗಿಯೇ ಕೊಡವ ಉತ್ಕರ್ಷವನ್ನು ಕಾಣಬಹುದಾಗಿದೆ. ಆಡಳಿತಾರೂಢ ಪಕ್ಷದ ನಾಯಕರು, ವಿರೋಧ ಪಕ್ಷದ ನಾಯಕರು ಮತ್ತು ಅವರಿದ್ದ ವ್ಯವಸ್ಥೆಯ ಅಧಿಕಾರಶಾಹಿಯ ಅಧಿಕಾರಿಗಳು ಸಹಜವಾಗಿಯೇ ಕೊಡವ ಸಮುದಾಯದ ಬಲಿಷ್ಠ ಒಕ್ಕಗಳಿಗೆ ಸೇರಿದವರಾಗಿದ್ದರು. ಆದರೆ ಕೊಡಗು ಕರ್ನಾಟಕದೊಂದಿಗೆ(ಆಗಿನ ಮೈಸೂರು ಪ್ರಾಂತ್ಯ) ವಿಲೀನವಾಗಿ ಅಷ್ಟೇ ಸಹಜವಾಗಿ ಪ್ರಬಲ ಒಕ್ಕಗಳಿಗೆ ತೀವ್ರವಾದ ಅಸಮಾಧಾನ ಉಂಟಾಯಿತು. ಬ್ರಿಟಿಷರ ಕಾಲದಲ್ಲಿ ಬಲಾಢ್ಯವಾಗಿದ್ದ, 'ಸಿ' ಸ್ಟೇಟ್‌ನಲ್ಲಿ ಪ್ರಬಲರಾಗಿದ್ದ ಒಕ್ಕಗಳು ಕೊಡಗಿನ ಆಡಳಿತ, ನಾಡು-ನುಡಿಯ ಮೇಲಿದ್ದ ತಮ್ಮ ಅಧಿಕಾರವನ್ನು ಹಂತಹಂತವಾಗಿ ಕಳೆದುಕೊಳ್ಳಲಾರಂಭಿಸಿದರು. ತಮ್ಮ ಅಸಮಾಧಾನಗಳನ್ನು ಬೇರೆ ಬೇರೆ ಸಂಘಟನೆಗಳ ಮೂಲಕ ಬರಹೊಳೆ ಯೋಜನೆ, ಪ್ರತ್ಯೇಕ ರಾಜ್ಯ ಚಳವಳಿ ಮುಂತಾದ

ಸಂದರ್ಭದಲ್ಲಿ ಪ್ರಕಟಿಸಲು ಆರಂಭಿಸಿದರು. ಕೃಷಿ ಕೂಲಿಕಾರ್ಮಿಕರು ತಮ್ಮ ಸಾಂಪ್ರದಾಯಿಕ ವೃತ್ತಿಗಳನ್ನು ಬಿಟ್ಟು, ಪ್ರಜಾಪ್ರಭುತ್ವ ವ್ಯವಸ್ಥೆ ಕೊಡಮಾಡಿದ "ಹಕ್ಕುಗಳನ್ನು" ಪಡೆದುದರಿಂದ ಮತ್ತು ಹಾಗೆಯೇ ಪ್ರಬಲ ಒಕ್ಕಗಳ ಸದಸ್ಯರು "ಎಲ್ಲರಂತೆ" ಜೀವನ ಮಾಡಬೇಕಾದ ಸಂದರ್ಭ ಎದುರಾದ್ದರಿಂದ ಅವರ ಅಸಮಾಧಾನದ ಹೊಗೆ ಭುಗಿಲೇಳಲಾರಂಭಿಸಿದವು. ಆದರೆ ಬಹುತೇಕರು ವಾಸ್ತವವನ್ನು ಅರಿತು ಮುಖ್ಯವಾಹಿನಿಯ ಜೊತೆ ಸೇರಿ ಹೋದರು. ಆದರೆ, ಜಾಗತೀಕರಣದ ಪರಿಣಾಮದಿಂದಾಗಿ ಮತ್ತೆ ಪ್ರಬಲ ಒಕ್ಕಗಳು ತಮ್ಮ ಶ್ರೇಷ್ಠತೆಯನ್ನು ಪುನರ್ ಸ್ಥಾಪಿಸಲು ಹಾಕಿ ಹಬ್ಬ, ಕ್ರಿಕೆಟ್ ಹಬ್ಬ ಮುಂತಾದ ಆಧುನಿಕ ಹಬ್ಬಗಳ ಮೂಲಕ ಪ್ರಯತ್ನಿಸಿ, ಸಫಲವಾದವು. ಸಹಸ್ರಾರು ಸಂಖ್ಯೆಯಲ್ಲಿ ತಮ್ಮ ಸದಸ್ಯರನ್ನು ಆಕರ್ಷಿಸುವಲ್ಲಿ ಮತ್ತೊಮ್ಮೆ ಅಂತಹ ಒಕ್ಕಗಳು ಯಶಸ್ವಿಯಾದವು. ಕೊಡವರನ್ನು ಅನುಸರಿಸಿದ ಉಳಿದ ಸಮುದಾಯಗಳ ಒಕ್ಕಗಳೂ ಈ ಪ್ರಕ್ರಿಯೆಯಿಂದ ಹೊರತಾಗಿಲ್ಲ. ಇಲ್ಲಿ ಕೊಡಗಿನ ನಾಡು, ಕೊಡಗಿನ ನುಡಿಗಿಂತ, ತಮ್ಮ ತಮ್ಮ ಸಮುದಾಯಗಳ, ಒಕ್ಕಗಳ ಹಿತಾಸಕ್ತಿಗಳೇ ಮುಖ್ಯವಾಯಿತೇ ವಿನಹ ವಸಾಹತುಪೂರ್ವ ಕಾಲದಲ್ಲಿ, ವಸಾಹತು ಕಾಲದಲ್ಲಿ ಕಂಡ ನಾಡು-ನುಡಿಯ ಆದರ್ಶಗಳಲ್ಲ ಎಂದು ಹೇಳಬಹುದಾಗಿದೆ.

## ❖ ಅಧ್ಯಯನದ ಫಲಿತಗಳು

- ❖ ಲಿಂಗಾಯತ ಅರಸರ ಪೂರ್ವಕಾಲದಲ್ಲಿ ಕೊಡಗಿನಲ್ಲಿ ಹತ್ತಾರು ನಾಯಕರು ಹಲವಾರು ನಾಡುಗಳ ಅಧಿಪತಿಗಳಾಗಿದ್ದರು. ತಮ್ಮ ತಮ್ಮ ನಾಡುವಿನ ಅಭಿವೃದ್ಧಿಗಾಗಿ ಉಳಿದ ನಾಡುಗಳನ್ನು ಸೋಲಿಸುವ ಕೈಂಕರ್ಯದಲ್ಲಿ ಇವರೆಲ್ಲರೂ ನಿರತರಾಗಿದ್ದರು. ತಮ್ಮ ತಮ್ಮಲ್ಲೇ ಪರಸ್ಪರ ಕಾದಾಡುತ್ತಿದ್ದ ನಾಯಕರುಗಳನ್ನು ಸೋಲಿಸಿ ಹಾಲೇರಿಯ ಲಿಂಗಾಯತ ಅರಸರು ಸಂಸ್ಥಾನವನ್ನು ಸ್ಥಾಪಿಸಿದರು. ಹೀಗಾಗಿ ಕೊಡಗಿನಾದ್ಯಂತ ಇದ್ದ ೩೦ಕ್ಕೂ ಹೆಚ್ಚು ನಾಡುಗಳನ್ನು ಐಕ್ಯಗೊಳಿಸಿ 'ಕೊಡಗು ಸಂಸ್ಥಾನ'ವನ್ನಾಗಿ ಲಿಂಗಾಯತ ಅರಸರು ಮಾಡಿದರು.
- ❖ ಒಕ್ಕಗಳು ಹಾಲೇರಿ ಅರಸರ ಪೂರ್ವದಲ್ಲಿದ್ದಂತಹ ಪ್ರತಿಯೊಂದು ನಾಡುಗಳ ಆಧಾರಸ್ತಂಭ ಗಳಾಗಿದ್ದವು. ಇವುಗಳಲ್ಲಿ ಕೊಡಗು ಭಾಷಿಕ ಒಕ್ಕಗಳು ಪ್ರಧಾನವಾಗಿದ್ದವು. ಇದರೊಂದಿಗೆ ಅರೆಭಾಷಿಕ, ಎರವ, ಕುಡಿಯ ಮುಂತಾದ ಭಾಷಿಕ ಒಕ್ಕಗಳ ಪಾತ್ರವು ಗಣನೀಯವಾಗಿದೆ.
- ❖ ಹಾಲೇರಿ ಅರಸರ ಕಾಲದಲ್ಲಿ ನಾಡುಗಳೆಲ್ಲ ಐಕ್ಯಗೊಂಡು ಕೊಡಗು ಸಂಸ್ಥಾನವಾಗಿ ರೂಪುಗೊಂಡರೂ ಒಕ್ಕಗಳ ಸದಸ್ಯರ ಕೌಟುಂಬಿಕ, ವ್ಯಾವಹಾರಿಕ ಸಂಬಂಧಗಳನ್ನು ನಿರ್ವಚಿಸಿದ್ದು ಒಕ್ಕಗಳೇ. ಒಕ್ಕಗಳ ಸದಸ್ಯರು ಅರಮನೆ ಚಾಕ್ರಿ ಮಾಡುವುದು ಕಡ್ಡಾಯ ವಾಗಿದ್ದರಿಂದ ಒಕ್ಕ ಮತ್ತು ರಾಜ್ಯ ವ್ಯವಸ್ಥೆಗಳು ಪರಸ್ಪರ ಪೂರಕವಾಗಿರುತ್ತಿತ್ತು.
- ❖ ವಿವಿಧ ಸಮುದಾಯಗಳಿಗೆ ಸಂಬಂಧಪಟ್ಟ ಒಕ್ಕಗಳಲ್ಲಿ ಮುಖ್ಯವಾಗಿದ್ದಿದು ನಾಡು ಭಾಷೆಯಾದ ಕೊಡಗು ಭಾಷೆ. ನಾಡುವಿನ ರಚನೆಗೆ ಈ ಭಾಷಿಕ ಸಮುದಾಯಗಳ ಸಂಬಂಧಗಳನ್ನು ರೂಪಿಸಿದಂತದ್ದು ಕೃಷಿ ಪದ್ಧತಿ.

❖ ಒಕ್ಕ ಒಕ್ಕಗಳ ನಡುವೆ, ನಾಡು ನಾಡುಗಳ ನಡುವೆ 'ಕಡಂಗಗಳು' ಸಂಬಂಧದ ಕೊಂಡಿಯಾಗಿದ್ದವು. ಆಯಾಯ ನಾಡುವಿನ ಸರಹದ್ದನ್ನು ರೂಪಿಸಿದ್ದ 'ಕಡಂಗಗಳು' ಆಯಾಯ ನಾಡಿನ ಸ್ವಾಯತ್ತೆಯ ಸ್ವರೂಪವನ್ನು ಗುರುತಿಸಲು ಸಹಾಯವಾಗುತ್ತವೆ. ಹೀಗಾಗಿ ನಾಡು ನುಡಿಯ ರಾಜಕೀಯ ಆಯಾಮಗಳನ್ನು ಕಡಂಗಗಳು ಸಹಜವಾಗಿಯೇ ನಿರ್ಧರಿಸಿದವು.

❖ ಕೃಷಿಯೇ ಮೂಲವಾಗಿದ್ದ ನಾಡುಗಳಲ್ಲಿ ಕಂಡುಬಂದ ಮೂರು ವರ್ಗಗಳು ಹೀಗಿವೆ. ೧. ಕೃಷಿಕೇಂದ್ರಿತ ಸಮುದಾಯಗಳು, ೨. ಕುಶಲಕರ್ಮಿ ಸಮುದಾಯಗಳು, ೩. ಕೃಷಿ ಕಾರ್ಮಿಕ ಸಮುದಾಯಗಳು. ಇವುಗಳ ಸಂಬಂಧಗಳು ಪರಸ್ಪರ ಪೂರಕವಾಗಿದ್ದರೂ ಶೋಷಣಾತ್ಮಕ ಸಂಬಂಧಗಳಿಂದ ಮುಕ್ತವಾಗಿರಲಿಲ್ಲ.

❖ ಬ್ರಿಟಿಷರ ಕಾಲಘಟ್ಟದಲ್ಲಿ ಕೊಡವ ಸಮುದಾಯದ ಕೆಲವು ಒಕ್ಕಗಳು ಅಧಿಕಾರಶಾಹಿಗಳಿಗೆ ಹತ್ತಿರವಾದುದರಿಂದ ಕೊಡಗಿನ ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳಿಗೆ ಸಂಬಂಧಿಸಿದ ನಾಡುನುಡಿಗಳನ್ನು ಅಂತಹ ಒಕ್ಕಗಳೇ ನಿರ್ವಚಿಸಿದವು. ಇವುಗಳಿಂದ ಕೊಡವರಲ್ಲಿನ ಬಹುತೇಕ ಒಕ್ಕಗಳು ಹಾಗೂ ಕೊಡಗು ಭಾಷಿಕ ಕೊಡವೇತರ ಇತರ ಒಕ್ಕಗಳ ಸದಸ್ಯರು ಈ ಸ್ಥಿತ್ಯಂತರದಲ್ಲಿ ಮೂಕ ಪ್ರೇಕ್ಷಕರಾದರು. ಬಲಿಷ್ಠರಾದ ಮೇಲ್ಕಂಡ ಬ್ರಿಟಿಷ ಸಹವರ್ತಿ ಒಕ್ಕಗಳು ಇಂಗ್ಲಿಷ್ ಭಾಷೆ, ಅಧಿಕಾರ ಇತ್ಯಾದಿ ಅಂಶಗಳ ಮೂಲಕ ಕೊಡಗಿನ ನಾಡು ನುಡಿಯ ಏಕಸ್ವಾಮ್ಯತ್ವವನ್ನು ಪಡೆದವು.

❖ ಕೊಡಗು ಸ್ವಾತಂತ್ರ್ಯವಾದಲ್ಲಿಂದ ೧೯೫೨ರವರೆಗಿದ್ದ ಸಂದರ್ಭದಲ್ಲಿ ಇದೇ ವ್ಯವಸ್ಥೆ ಮುಂದುವರೆಯಿತು. ೧೯೫೨ರಿಂದ ೧೯೫೬ರವರೆಗಿದ್ದ ಕೊಡಗು ಪ್ರತ್ಯೇಕ ರಾಜ್ಯದಲ್ಲಿ ಇದೇ ಬಲಿಷ್ಠ ಒಕ್ಕಗಳು ಮತ್ತು ಇವುಗಳ ಜೊತೆಗೆ ಸೇರಿಕೊಂಡ ಇತರ ಕೆಲವು ಒಕ್ಕಗಳ ಸದಸ್ಯರು ಕೊಡಗು ನಾಡು ನುಡಿಯನ್ನು ನಿರ್ವಚಿಸುವ ಮೂಲಕ ಕೊಡಗಿನ ರಾಜ್ಯಾಧಿಕಾರವನ್ನು ಮತ್ತು ಸಾಂಸ್ಕೃತಿಕ ಅಧಿಪತ್ಯವನ್ನು ಹೊಂದುವಲ್ಲಿ ಸಫಲರಾಗುತ್ತಾರೆ.

❖ ಏಕೀಕರಣದ ನಂತರ ಬದಲಾದ ರಾಜಕೀಯ ಸ್ಥಿತ್ಯಂತರದಲ್ಲಿ ಕೃಷಿ ಕೂಲಿ ಕಾರ್ಮಿಕ ಸಮುದಾಯಗಳು ಸಂವಿಧಾನಾತ್ಮಕವಾಗಿ ದೊರೆತ ಅವಕಾಶಗಳಿಂದಾಗಿ ಸಾಂಪ್ರದಾಯಿಕ ಕೃಷಿ ಕೂಲಿ ವರ್ತುಲವನ್ನು ನಿಧಾನವಾಗಿ ತ್ಯಜಿಸಲು ಆರಂಭಿಸುತ್ತವೆ. ಕುಶಲಕರ್ಮಿ ಸಮುದಾಯಗಳು ತಮ್ಮ ನೈಪುಣ್ಯತೆ ಸಂಬಂಧಿಸಿದ ವೃತ್ತಿಯಿಂದ ಹೊರಬಂದು ಕೃಷಿ ಕೇಂದ್ರಿತ ಕೆಲಸ ಕಾರ್ಯಗಳಲ್ಲಿ ಮಗ್ನರಾಗುತ್ತಾರೆ. ಕೊಡವರಲ್ಲಿನ ಬಲಿಷ್ಠ ಒಕ್ಕಗಳು ಹೊಸ ರಾಜಕೀಯ ಸ್ಥಿತ್ಯಂತರದಲ್ಲಿ ಎಲ್ಲರಂತೆ ಬದುಕಬೇಕಾದ ಅನಿವಾರ್ಯತೆ ಕಾಣುತ್ತದೆ.

❖ ಬ್ರಿಟಿಷರ ಕಾಲದಲ್ಲಿ, ಕೊಡಗು ಪ್ರತ್ಯೇಕ ರಾಜ್ಯವಾಗಿದ್ದ ಸಂದರ್ಭದಲ್ಲಿ ಗಳಿಸಿದ ಅಧಿಕಾರ ಮತ್ತು ಸಾಂಸ್ಕೃತಿಕ ವ್ಯಾಪ್ತಿಯಿಂದ ಹೊರಬಂದ ಕೊಡವ ಬಲಿಷ್ಠ ಒಕ್ಕಗಳು ಸಹಜವಾಗಿ

ತಮ್ಮ ಆಕ್ರೋಶವನ್ನು ಬರಪೊಳೆ, ಪ್ರತ್ಯೇಕ ರಾಜ್ಯ ಚಳುವಳಿ ಮುಂತಾದ ಸಂದರ್ಭಗಳಲ್ಲಿ ಹೊರಹಾಕುತ್ತಾ ತಮ್ಮ ವಿಶಿಷ್ಟ ಅನನ್ಯತೆಯನ್ನು ಕಾಪಾಡಲು ಯತ್ನಿಸುತ್ತಾರೆ.

- ಜಾಗತೀಕರಣದ ಸಂದರ್ಭದಲ್ಲಾದ ಸ್ಥಿತ್ಯಂತರದಲ್ಲಿ ಕೊಡಗಿನ ಬಲಿಷ್ಠ ಒಕ್ಕಗಳು ತಮ್ಮ ಅನನ್ಯತೆಯನ್ನು ಕೊಡವ ಸಮುದಾಯದ ಹೆಸರಿನಲ್ಲಿ ಕಂಡುಕೊಳ್ಳಲು ಪ್ರಯತ್ನಿಸುವುದನ್ನು ನೋಡಬಹುದು. ಸಹಸ್ರಾರು ಸಂಖ್ಯೆಯಲ್ಲಿ ಒಕ್ಕದ ಸದಸ್ಯರನ್ನು ಸೆಳೆಯಲು ಆಯೋಜಿಸಲಾದ ಹಾಕಿ, ಕ್ರಿಕೆಟ್ ಮೊದಲಾದ ಆಧುನಿಕ 'ಹಬ್ಬ'ಗಳು ಮುಖ್ಯ ಆಕರ್ಷಣೆಗಳಾದವು. ಇದು ಕೊಡವ ಅನನ್ಯತೆಯ ಸಂಕೇತವಾಯಿತು. ಉಳಿದ ಸಮುದಾಯಗಳ ಒಕ್ಕಗಳ ಸದಸ್ಯರು ಇದೇ ಆಧುನಿಕ ಹಬ್ಬಗಳನ್ನು ಆಚರಿಸುವ ಮೂಲಕ ಕೊಡವ ಒಕ್ಕಗಳನ್ನು ಅನುಸರಿಸಿದರು.
- ಏಕೀಕರಣವಾಗುವವರೆಗೆ ಕಂಡುಕೊಳ್ಳಲಾಗಿದ್ದ ನಾಡು ನುಡಿಗೆ ಸಂಬಂಧಿಸಿದ ಪ್ರಶ್ನೆಗಳು ಆಯಾಯ ನಾಡುಗಳಲ್ಲಿದ್ದ ಎಲ್ಲ ಸಮುದಾಯಗಳ ಸಾಮುದಾಯಿಕ ಪ್ರಶ್ನೆಗಳಾಗಿದ್ದವು. ಜಾಗತೀಕರಣದ ಪ್ರಭಾವದ ನಂತರ ನಾಡಿನ ಪ್ರಶ್ನೆಗಳಿಗಿಂತ ತಮ್ಮ ತಮ್ಮ ಸಮುದಾಯಗಳ ಅಥವಾ ಸಮುದಾಯಗಳ ಒಕ್ಕಗಳ ಏಳಿಗೆ, ಚಲನೆ ಮಾತ್ರ ಮುಖ್ಯವಾದವು.



# ಅನುಬಂಧಗಳು-೧

೧. ಆಕರ ಗ್ರಂಥಗಳು
೨. ಪಾರಿಭಾಷಿಕ ಪದಗಳು
೩. ಅನುಬಂಧ-೨
೪. ನಕ್ಷೆಗಳು
೫. ಛಾಯಾಚಿತ್ರಗಳು

# ೧. ಆಕರ ಗ್ರಂಥಗಳು


೧. ಅಡ್ಡಂಡ ಸಿ. ಕಾರ್ಯಪ್ಪ ೧೯೮೯, **ದಿವಾನ್ ಬೋಪಣ್ಣ**, ಕೊಡವ ನಾಟಕ, ಪ್ರಯೋಗರಂಗ ಪ್ರಕಾಶನ, ಬೆಂಗಳೂರು.

೨. ಅಪ್ಪನೆರವಂಡ ಕವಿ ಅಪ್ಪಚ್ಚ, ೧೯೭೦, **ಅಪ್ಪಚ್ಚ ಕವಿರ ನಾಲ್ ನಾಟಕ**, ಹರದಾಸ ಶತಮಾನೋತ್ಸವ ಸಮಿತಿ, ಮಡಿಕೇರಿ.

೩. ಅಪ್ಪಯ್ಯ .ಎಸ್ ಪೊಂಜಾಂಡ, ೨೦೧೦, **ಕೊಡವ ಇಂಗ್ಲಿಷ್ ಡಿಕ್ಷನರಿ**, ಪೊಂಜಾಂಡ ಎಸ್. ಅಪ್ಪಯ್ಯ, ಬೆಂಗಳೂರು.

೪. ಅರವಿಂದ ಮಾಲಗತ್ತಿ, ೨೦೦೬, **ಕನ್ನಡ ವಿಷಯ ವಿಶ್ವಕೋಶ – ಜಾನಪದ**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೫. ಅಹುಜ ರಾಮ್, ೨೦೦೯, **ಸೊಸೈಟಿ ಇನ್ ಇಂಡಿಯಾ**, ರಾವತ್ ಪಬ್ಲಿಕೇಷನ್, ಜೈಪುರ್.

೬. ಆನಂದ ರಾವ್ ಟಿ., ೧೯೯೯, **ವೈಲ್ಡ್ ಫ್ಲವರ್ಸ್ ಅಫ್ ಕೊಡಗು**, ಕೂರ್ಗ್ ವೈಲ್ಡ್ ಲೈಫ್ ಸೊಸೈಟಿ, ಮಡಿಕೇರಿ.

೭. ಉತ್ತಪ್ಪ ಕೆ.ಜಿ., ೨೦೦೪, **ಕೊಡಗಿನ ಭೂ ನಿಬಂಧನೆ, ಭೂ ಹಿಡುವಳಿ, ಮರದ ಹಕ್ಕುಗಳು**, ಕೊಡಗು ಮೋಡೆಲ್ ಫಾರೆಸ್ಟ್ ಟ್ರಸ್ಟ್, ಕಾಲೇಜ್ ಆಫ್ ಫಾರೆಸ್ಟ್ರಿ, ಪೊನ್ನಂಪೇಟೆ.

೮. ಉತ್ತಪ್ಪ ರಮೇಶ್ ಐತಿಚಂಡ, ೨೦೦೨, **ಪೂಮಲೆ ಕುಡಿಯ**, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ.

೯. ಎಡ್ಗರ್ ಥರ್‌ಸ್ಟನ್, ೧೯೦೭(೧೯೦೯), ಎತ್ನಾಗ್ರಾಫಿಕ್ ನೋಟ್ಸ್ ಇನ್ ಸದರನ್ ಇಂಡಿಯಾ, ಎರಡನೆಯ ಭಾಗ, ದೆಹಲಿ.

೧೦. ____________, ೧೯೦೯, **ಕಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ, ವಾಲ್ಯೂಮ್–೧–೨**, ದೆಹಲಿ.

೧೧. ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ೨೦೧೦, **ಕೊಡವ ಭಾಷಿಕ ಮೂಲ ನಿವಾಸಿಯ**, ಕರ್ನಾಟಕ ಕೊಡವಸಾಹಿತ್ಯ ಅಕಾಡೆಮಿ, ಮಡಿಕೇರಿ.

೧೨. ಕನ್ನಡ ಸಾಹಿತ್ಯ ಪರಿಷತ್ತು, ೨೦೧೪ (೧೯೫೭), **'ಕೊಡಗು ಸಂಸ್ಥಾನದ ರಾಜೇಂದ್ರ ನಾಮೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩. ಕಾರ್ಯಪ್ಪ ಎಂ.ಪಿ. ಮತ್ತು ಪೊನ್ನಮ್ಮ ಕಾರ್ಯಪ್ಪ, ೧೯೮೧, **ಕೊಡವಾಸ್ ಅಂಡ್ ದೇರ್ ಒರಿಜಿನ್ಸ್,** ಗೀತ ಬುಕ್ ಹೌಸ್ ಪಬ್ಲಿಷರ್ಸ್, ಮೈಸೂರು.

೧೪. ಕಾಮತ್ ಸೂರ್ಯನಾಥ್ ಯು., ೧೯೯೩, **ಕೊಡಗು ಡಿಸ್ಟ್ರಿಕ್ಟ್, ಕರ್ನಾಟಕ ಸ್ಟೇಟ್ ಗೆಜೇಟಿಯರ್,** ಕರ್ನಾಟಕ ಸರ್ಕಾರ, ಬೆಂಗಳೂರು.

೧೫. ಕೃಷ್ಣಯ್ಯ ಡಿ.ಎನ್., ೧೯೭೪, **ಕೊಡಗಿನ ಇತಿಹಾಸ,** ಪ್ರಸಾರಾಂಗ ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು.

೧೬. ಕೊಡಗು ಸಾಹಿತ್ಯ, ೨೦೧೦, **ಸಂಸ್ಕೃತಿ ದರ್ಶನ,** ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ಮಡಿಕೇರಿ.

೧೭. ಕೋರನ ಸರಸ್ವತಿ ಪ್ರಕಾಶ್, ೨೦೧೦, **ಕೊಡಗು ಗೌಡ ಸಮುದಾಯ,** ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು.

೧೮. **ಕೊಡಗು ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೧೩-೧೪,** ಜಿಲ್ಲಾ ಸಂಖ್ಯಾ ಸಂಗ್ರಹಣಾ ಇಲಾಖೆ, ಮಡಿಕೇರಿ.

೧೯. ಗಣಪತಿ ಬಿ.ಡಿ., ೧೯೬೭, **ಕೊಡವಾಸ್,** ಮಡಿಕೇರಿ.

೨೦. ಗೋಪಾಲರಾವ್ ಎಚ್.ಎಸ್., ೨೦೦೦, **ಚಂಗಾಳ್ವರು,** ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೨೧. ಗೋಪಾಲರಾವ್ ಬಾ.ರಾ.(ಸಂ), ೧೯೭೨, **ಎಪಿಗ್ರಾಫಿಯ ಕರ್ನಾಟಕ ಸಂಪುಟ-೧,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೨. __________, ೧೯೮೧, **ಜಾನ್ ಕೊಡವ,** ಜ್ಯೋತಿ ಪ್ರಕಾಶನ, ಮಡಿಕೇರಿ.

೨೩. __________, ೧೯೮೫, **ಕೊಡವ ಒರ್ ಚಿತ್ರಕತೆ,** ಶಾರದಾ ಪ್ರೆಸ್, ಮಂಗಳೂರು.

೨೪. __________, ೨೦೦೦, **ಕೊಡವ ಚಂದೂಕ,** ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ.

೨೫. ಚಂಗಪ್ಪ ಪರದಂಡ, ೨೦೦೩, **ಕೊಡವ ಮೂಲನಿವಾಸಿಯರ ಪುರಾಣ ಸಂಸ್ಕೃತಿಯ ಮತ್ತು ಊರೂರು ದೇವಾಲಯಗಳ ಪರಿಚಯ,** ವಿರಾಜಪೇಟೆ.

೨೬. ಚಂಗಪ್ಪ ಜಿ. ಪರದಂಡ, ೨೦೦೬, **ಶ್ರೀ ಇಗ್ಗುತ್ತಪ್ಪ ದೇವರು, ಎವ್ವಮಕ್ಕ ದೇಬುವರು,** ಸುರೀನಾ ಗ್ರಾಫಿಕ್ಸ್, ಮೈಸೂರು.

೨೭. ಚಂಗಪ್ಪ ಬಡ್ಡೀರ ಎನ್., ೧೯೯೯, **ಲೋಕಕ್ಕೆ ಕೊಡವರ ಕೊಡುಗೆ,** ಮಡಿಕೇರಿ, ಕೊಡಗು.

೨೮. ಚಿದಾನಂದ ಮೂರ್ತಿ ಎಂ., ೨೦೦೨(೧೯೬೬), **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್, ಬೆಂಗಳೂರು.

೨೯. ದೇಚಮ್ಮ ಕರುಂಬಯ್ಯ ಚೇಂದಂಡ, ೧೯೮೪, **ಕೊಡವ ಗಾದೆ ಮತ್ತು ಹಳೆಯ ಸೊಲ್ಲುಗಳು,** ಸೆಲೆಕ್ಟ್ ಬುಕ್ಸ್, ಬೆಂಗಳೂರು.

೩೦. ನಡಿಕೇರಿಯಂಡ ಚಿಣ್ಣಪ್ಪ, **ಪಟ್ಟೋಲೆ ಪಳಮೆ,** ಬೊವ್ವೇರಿಯಂಡ ನಂಜಮ್ಮ ಚಿಣ್ಣಪ್ಪ (ಇಂಗ್ಲೀಷ್ ಅನುವಾದ), ೨೦೦೩, ರೂಪ ಎಂಡ್ ಕಂಪನಿ, ನ್ಯೂಡೆಲ್ಲಿ.

೩೧. ನಡಿಕೇರಿಯಂಡ ಚಿಣ್ಣಪ್ಪ, ೨೦೦೮(೧೯೨೪), **ಪಟ್ಟೋಲೆ ಪಳಮೆ,** ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ.

೩೨. ________, ೧೯೯೬(೧೯೨೯) **ಭಗವಂತಂಡ ಪಾಟ್,** ಕನ್ನಡ ಪುಸ್ತಕ ಪಾಧಿಕಾರ, ಬೆಂಗಳೂರು.

೩೩. ನಾಯಕ ಹಾ.ಮಾ.(ಸಂ.), ೨೦೧೩, **ಡಿ.ವಿ.ಜಿ. ಕೃತಿ ಶ್ರೇಣಿ,** ಸಂಪುಟ-೫, ಕಾವ್ಯ-೧, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು.

೩೪. ನಾರಾಯಣ ಭಟ್ ಎದುರ್ಕಳ, ೧೯೯೯, **ಶ್ರೀ ಇಗ್ಗುತ್ತಪ್ಪ ಮಹಾತ್ಮೆ,** ಶ್ರೀ ರಾಮಕೃಷ್ಣ ಪ್ರಕಾಶನ, ಭಾಗಮಂಡಲ, ಕೊಡಗು.

೩೫. ನಾಗರಾಜ್ ಡಿ.ಆರ್., ೨೦೦೬, **ಸಂಸ್ಕೃತಿ ಕಥನ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೬. ನಾಗರಾಜ್ ಎಂ.ಜಿ., ೨೦೦೪, **ಕೊಡಗಿನ ಹಾಲೇರಿ ರಾಜವಂಶವು ಭಾಗ-೧,** ಡೈರೆಕ್ಟೋರೇಟ್ ಆಫ್ ಆರ್ಕಿಯಾಲಜಿ ಅಂಡ್ ಮ್ಯೂಸಿಯಂ, ಹೊಸಪೇಟೆ.

೩೭. ________, ೨೦೦೪, **ಕೊಡಗಿನ ಹಾಲೇರಿ ರಾಜವಂಶವು ಭಾಗ-೨,** ಡೈರೆಕ್ಟೋರೇಟ್ ಆಫ್ ಆರ್ಕಿಯಾಲಜಿ ಅಂಡ್ ಮ್ಯೂಸಿಯಂ, ಹೊಸಪೇಟೆ.

೩೮. ________, ೧೯೯೩, **ಕೆಂಬಟ್ಟಿ ಹೊಲೆಯರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೯. ನಾಗೇಶ್ ಎಚ್.ಕೆ., ೧೯೯೯, **ಕೊಡವರ ಮದುವೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ________, ೧೯೯೯, **ಕೊಡವರ ಪ್ರದರ್ಶನ ಕಲೆಗಳು-ಒಂದು ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ಪಂಜೇರಿರ ಸಿ. ಬೊಳ್ಯಪ್ಪ, ೨೦೦೯, **ಕೊಡವ ಪತ್ತಾಯ**, ವಾರ್ತಾ ಕಮ್ಯುನಿಕೇಷನ್ಸ್, ಮಡಿಕೇರಿ.

೪೨. ಪಂಜೇರಿರ ಬೊಳ್ಯಪ್ಪ, ೨೦೧೧, **ಕೈತಾಂಗ**, ವಾರ್ತಾ ಕಮ್ಯುನಿಕೇಷನ್ಸ್, ಮಡಿಕೇರಿ

೪೩. ಪಾಲಂದಿರ ಪಿ. ದೇವಯ್ಯ, ೨೦೦೬, **ಕೊಡಗು ಪಡಿಮೆ**, ಕೊಡವ ತಕ್ಕ್ ಪರಿಷತ್, ವಿರಾಜಪೇಟೆ, ಕೊಡಗು.

೪೪. ಫ್ರಾನ್ಸಿಸ್ ಬುಕಾನನ್, ೧೮೦೭, **ಎ ಜರ್ನಿ ಮಡ್ರಾಸ್ ಥ್ರೂ ಔಟ್ ದಿ ಕಂಟ್ರೀಸ್ ಆಫ್ ಮೈಸೂರ್**, ಕೆನರಾ ಅಂಡ್ ಮಲಬಾರ್, ಮದ್ರಾಸ್.

೪೫. ಫೆಡರೇಷನ್ ಆಫ್ ಕೊಡವ ಸಮಾಜಾಸ್, ೨೦೧೪, **ವಾರ್ಷಿಕ ವರದಿ**, ಬಾಳುಗೋಡು, ಕೊಡಗು.

೪೬. ಪೊಂಜಾಂಡ ಎಸ್. ಅಪ್ಪಯ್ಯ, ೨೦೧೨, **ಎ ಹಿಸ್ಟರಿ ಆಫ್ ಕೊಡಗು**, ಭಾಗ್ಯಂ ಬೈಂಡಿಂಗ್ ವರ್ಕ್ಸ್, ಮೈಸೂರು.

೪೭. ಪೊನ್ನಪ್ಪ ಕಾವೇರಿ, ೨೦೧೩, **ವ್ಯಾನಿಶಿಂಗ್ ಕೊಡವಾಸ್**, ಎಮಿನೆನ್ಸ್ ಡಿಸೈನ್ಸ್ ಪ್ರೈವೇಟ್ ಲಿಮಿಟೆಡ್, ಮುಂಬೈ.

೪೮. ಬೆಳ್ಳಿಯಪ್ಪ ಸಿ.ಪಿ., ೨೦೦೪, **ಟೇಲ್ ಆಫ್ ಎ ಟೈಗರ್ ಟೈಲ್ ಆಂಡ್ ಅದರ್ ಯಾರ್ನ್ಸ್ ಫ್ರಮ್ ಕೂರ್ಗ್**, ರೂಪ ಎಂಡ್ ಕಂ., ನ್ಯೂಡೆಲ್ಲಿ.

೪೯. __________, ೨೦೦೮, **ನಗ್ಗೆಟ್ಸ್ ಫ್ರಮ್ ಕೂರ್ಗ್ ಹಿಸ್ಟರಿ**, ರೂಪ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

೫೦. __________, ೨೦೧೩, **ಟಂಗ್ ಆಫ್ ದಿ ಸ್ಲಿಪ್**, ರೂಪ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

೫೧. ಬೇಡೆನ್ ಪೊವೆಲ್, ೧೮೯೨, **ದಿ ಲ್ಯಾಂಡ್ ಸಿಸ್ಟಮ್ ಆಫ್ ಬ್ರಿಟಿಷ್ ಇಂಡಿಯಾ, ವಾಲ್ಯೂಮ್–೩, ಬುಕ್–೪**, ದಿ. ರೈತ್ವಾರಿ ಆ್ಯಂಡ್ ಅಲೈಡ್ ಸಿಸ್ಟಮ್ಸ್, ಆಕ್ಸ್‌ಫರ್ಡ್.

೫೨. ಬೋಪಣ್ಣ ಪಿ.ಟಿ., ೨೦೦೬, **ಡಿಸ್ಕವರ್ ಕೂರ್ಗ್**, ಪ್ರೀತಂ, ಬುಕ್ಸ್ ಪ್ರೈವೇಟ್ ಲಿ., ಬೆಂಗಳೂರು.

೫೩. __________, ೨೦೦೬, **ರೈಸ್ ಅಂಡ್ ಫಾಲ್ ಆಫ್ ದಿ ಕೂರ್ಗ್ ಸ್ಟೇಟ್**, ಪ್ರಿಸಮ್ ಬುಕ್ಸ್ ಪ್ರೈವೇಟ್ ಲಿಮಿಟೆಡ್, ನ್ಯೂಡೆಲ್ಲಿ.

೫೪. __________, ೨೦೧೧, **ದಿ ರೊಮೆನ್ಸ್ ಆಫ್ ಇಂಡಿಯನ್ ಕಾಫಿ**, ರೂಪ ಎಂಡ್ ಕಂ., ನ್ಯೂಡೆಲ್ಲಿ.

೫೫. ಬೊವ್ವೇರಿಯಂಡ ನಂಜಮ್ಮ ಚಿಣ್ಣಪ್ಪ, ೨೦೧೪, **ಐನ್ ಮನೇಸ್ ಆಫ್ ಕೊಡಗು,** ನಿಯೋಗಿ ಬುಕ್ಸ್, ನವದೆಹಲಿ.

೫೬. **ಬೈತೂರಪ್ಪ ದೇವರ ಚರಿತ್ರೆ,** ೨೦೧೨, ಪ್ರಕಟಣೆ: ಪುಗ್ಗೇರ ಕುಟುಂಬಸ್ಥರು.

೫೭. ಬೈಲಾ, **ಅಖಿಲ ಕೊಡವ ಸಮಾಜ,** ವಿರಾಜಪೇಟೆ, ಕೊಡಗು.

೫೮. ಬೈಲಾ, ೨೦೦೯, **ಫೆಡರೇಷನ್ ಆಫ್ ಕೊಡವ ಸಮಾಜ,** ಮಡಿಕೇರಿ, ಕೊಡಗು.

೫೯. ಮನು ಶೆಣೈ ಬಿ.ಎಸ್., ೨೦೧೪, **ಕೊಡಗು ಸಮಾಚಾರ,** ತಾರಾ ಪ್ರಿಂಟರ್ಸ್, ಮೈಸೂರು.

೬೦. ಮಾಸ್ತಿ ವೆಂಕಟೇಶ ಅಯ್ಯಂಗಾರ್, ೨೦೦೭(೧೯೫೬), **ಚಿಕವೀರ ರಾಜೇಂದ್ರ,** ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು.

೬೧. ಮಾರ್ಕ್ ವಿಲ್ಕ್ಸ್, ೧೯೮೯(೧೮೧೦), **ಹಿಸ್ಟಾರಿಕಲ್ ಸ್ಕೆಚಸ್ ಆಫ್‌ಸೌತ್ ಇಂಡಿಯಾ ಇನ್ ಆನ್ ಅಟೆಂಪ್ಟ್ ಟು ಟ್ರೇಸ್ ದಿ ಹಿಸ್ಟರಿ ಆಫ್ ಮೈಸೂರ್ ಫ್ರಮ್ ದಿ ಆರಿಜಿನ್ ಆಫ್ ದಿ ಹಿಂದೂ ಗವರ್ನಮೆಂಟ್ ಆಫ್ ದಿ ಸ್ಟೇಟ್, ಟು ದಿ ಎಕ್ಸಟಿಂಕ್ಷನ್ ಆಫ್ ದಿ ಮಹ್ಮದನ್ ಡೈನಾಸ್ಟಿ ಇನ್ ೧೭೯೯ ಫೌಂಡೆಡ್ ಚೀಫ್ ಲೀ ಆನ್ ಇಂಡಿಯನ್ ಅಥಾರಿಟೀಸ್, ಎರಡು ವಾಲ್ಯೂಮ್‌ಗಳು,** ದೆಹಲಿ.

೬೨. ಮುಕ್ಕಾಟಿರ ಬಿ. ಪೊನ್ನಪ್ಪ, ೨೦೧೩, **ಅಲ್ ಮರ,** ಪೂಮಲೆ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್ ವಿರಾಜಪೇಟೆ, ಕೊಡಗು.

೬೩. ಮುತ್ತಣ್ಣ ಐ.ಎಂ., ೧೯೫೩, **ಎ ಟೈನಿ ಮಾಡೆಲ್ ಸ್ಟೇಟ್ ಆಫ್ ಸೌತ್ ಇಂಡಿಯಾ,** ಪಾಲಿಬೆಟ್ಟ, ಕೊಡಗು.

೬೪. ಮುತ್ತಣ್ಣ ಕೆ.ಪಿ., ೧೯೬೯, **ಜಗತ್ತಿಗೊಂದೇ ಕೊಡಗು,** ಪ್ರೀಮಿಯರ್ ಪ್ರೆಸ್, ಬೆಂಗಳೂರು.

೬೫. ಮುತ್ತಣ್ಣ ಐ.ಮಾ., ೧೯೮೭, **ಕೊಡವಾಸ್ ಅಂಡ್ ದೆರ್ ಗಾಲ ಲೇಲ ಆಫ್ ಕೊಡಗು,** ಸ್ವತಂತ್ರ ಮುದ್ರಣಾಲಯ, ಬೆಂಗಳೂರು.

೬೬. __________, ೧೯೮೮, **ಕೊಡವ ನುಡಿ ಅರ್ಥಕೋಶ ಮತ್ತು ಸಂಸ್ಕೃತಿ ಅಧ್ಯಯನ,** ಕೊಡವ ಸಮಾಜ, ಬೆಂಗಳೂರು.

೬೭. ಮುತ್ತಮ್ಮ ಸಿ.ಬಿ., ೨೦೦೦, **ದಿ ಎಸ್ಸೆನ್ಸಿಯಲ್ ಕೊಡವ ಕುಕ್ ಬುಕ್,** ಪೆಂಗ್ವಿನ್ ಬುಕ್ಸ್, ನ್ಯೂಡೆಲ್ಲಿ.

೬೮. ಮುಲ್ಲೇಂಗಡ ರೇವತಿ ಪೂವಯ್ಯ, ೨೦೧೪, **ಕೊಡವ ಜನಪದ ನೃತ್ಯಗಳು –ಒಂದು ಅಧ್ಯಯನ (ಸಂಶೋಧನಾ ಪ್ರಬಂಧ),** ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ.

೬೯. ಮೋಗ್ಲಿಂಗ್ ಎಚ್., ೨೦೦೪ (೧೮೫೫), **ಕೂರ್ಗ್ ಮೆಮೊಯಿರ್ಸ್; ಆ್ಯನ್ ಅಕೌಂಟ್ ಆಫ್ ಕೂರ್ಗ್ ಅಂಡ್ ಆಫ್** ದಿ **ಕೂರ್ಗ್** ಮಿಷನ್, ಕರ್ನಾಟಕ ಸರ್ಕಾರ, ಬೆಂಗಳೂರು.

೭೦. ರಮೇಶ. ಟಿ.ಪಿ., (ಸಂ.) ೨೦೧೦, **ಕೊಡಗು ಸಾಹಿತ್ಯ ಸಂಸ್ಕೃತಿ ದರ್ಶನ,** ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ.

೭೧. ರಮೇಶ್ ಬೈರಿ, ವಿಜಯ್ ಪೂಣಚ್ಚ ತಂಬಂಡ(ಸಂ), **ಮೇ-೨೦೦೬, ಏಪ್ರಿಲ್-೨೦೦೭, ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್,** 'ದ ಬೌಂಡ್ಸ್ ಆಫ್ ಏಜೆನ್ಸಿ: ಎಂಗೇಜಿಂಗ್ ದ ಸ್ಪೇಸ್ ಆಫ್ ಬ್ರಾಹ್ಮಿನ್ ಎಸೋಸಿಯೇಷನ್ ಆಫ್ ಕರ್ನಾಟಕ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೨. ರಮೇಶ್ ಸ.ಚಿ., ೨೦೧೧, **ದಕ್ಷಿಣ ಭಾರತೀಯ ಜಾನಪದ ಕೋಶ, ಸಂಪುಟ ೧ ಮತ್ತು ೨,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೩. ರಾಬರ್ಟ್ ಎಚ್. ಎಲಿಯಟ್, ೧೮೯೮, **ಗೋಲ್ಡ್ ಸ್ಪೋರ್ಟ್ಸ್ ಅಂಡ್ ಕಾಫಿ ಪ್ಲಾಂಟಿಂಗ್ ಇನ್ ಮೈಸೂರು,** ವೆಸ್ಟ್ ಮಿನಿಸ್ಟರ್ ಆರ್ಟ್ ಬಾಲ್ಡ್ ಕಾನ್‌ಸ್ಟೇಬಲ್ ಅಂಡ್ ಕಂಪನಿ.

೭೪. ರಾಬ್‌ಕೋಲ್, ೧೯೪೭, **ಎ ಮ್ಯಾನ್ಯುಲ್ ಆಫ್ ಕೂರ್ಗ್ ಸಿವಿಲ್ ಲಾ,** ಬೆಂಗಳೂರು.

೭೫. ರಾಮಚಂದ್ರ ರಾವ್ ಬಿ.ಆರ್., ೨೦೧೧, **ಅಗಸ್ತ್ಯಾಶ್ರಮದಿಂದ ಕುಬೇರಾಶ್ರಮದೆಡೆಗೆ,** ಹೊನ್ನಪದ್ಮ ಪ್ರಿಂಟರ್ಸ್, ಉಡುಪಿ.

೭೬. ರಾಮಚಂದ್ರಚಾರ್ ಡಿ.ಬಿ., ೨೦೧೩(೧೯೯೪), **ಜಾನಪದ ತಜ್ಞ ನಡಿಕೇರಿಯಂಡ ಚಿಣ್ಣಪ್ಪ,** ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು.

೭೭. ರಾಮಾನುಜಂ ಪಿ.ಎಸ್., ೧೯೭೫, **ಕೊಡವರು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೭೮. ರಿಕ್ತರ್ ಜಿ., ೧೮೭೦, **ಕೂರ್ಗ್ ಗೆಜೆಟಿಯರ್,** ಡಿ.ಕೆ. ಪಬ್ಲಿಷರ್ಸ್, ನವದೆಹಲಿ.

೭೯. ರಿಕ್ತರ್ ಜಿ., ೨೦೧೧, **ಕೊಡಗು ಪ್ರಾಂತ್ಯದಲ್ಲಿ ಕಂಡುಬರುವ ಜಾತಿಗಳು ಮತ್ತು ಬುಡಕಟ್ಟು ಜನಾಂಗಗಳ ವೃತ್ತಾಂತ ಸಂಹಿತೆ,** ಲೋಕೇಶ್ .ಕೆ.ಎಂ.(ಅನು), ಕೊಡವ ಸಾಂಸ್ಕೃತಿಕ ಅಧ್ಯಯನ ಪೀಠ, ಮಂಗಳೂರು ವಿಶ್ವ ವಿದ್ಯಾಲಯ, ಮಂಗಳೂರು.

೮೦. ರೇಖಾ ಎಂ.ಪಿ., ೨೦೧೦, **ಆಧುನಿಕ ಕೊಡವ ಸಾಹಿತ್ಯ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮೧. ಲಕ್ಷ್ಮಣ್ ತೆಲಗಾವಿ(ಸಂ), ೨೦೦೬, **ಚರಿತ್ರೆ ಅಧ್ಯಯನ, ಸಂಪುಟ-೧, ಸಂಚಿಕೆ-೨,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೨. ಲಲಿತ ಕೆ.ಪಿ., ೨೦೧೫, **ವಿರಾಜಪೇಟೆ ತಾಲೂಕಿನ ಸ್ಥಳನಾಮಗಳು**, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ.

೮೩. ಲೀವಿಸ್ ರೈಸ್, ೧೮೮೬, **ಕೂರ್ಗ್ ಇನ್ಸ್‌ಕ್ರಿಪ್ಷನ್ಸ್ ಎಪಿಗ್ರಾಫಿಯಾ ಕರ್ನಾಟಿಕಾ, ವಾಲ್ಯೂಮ್–೧**, ಕೂರ್ಗ್ ಇನ್ಸ್‌ಕ್ರಿಪ್ಷನ್ಸ್(ರಿವಾಯ್ಸ್‌ಡ್ ಎಡಿಷನ್), ಗೌರ್ನಮೆಂಟ್ ಪ್ರೆಸ್, ಮದ್ರಾಸ್.

೮೪. ಲೋಕೇಶ್ ಕೆ.ಎಂ., ವಿಜಯ್ ಪೂಣಚ್ಚ ತಂಬಂಡ(ಸಂ), ಮೇ–೨೦೦೪, ಅಕ್ಟೋಬರ್–೨೦೦೪, **ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್**, 'ಪಟ್ಟೋಲೆ ಪಳಮೆ(ಕೊಡವ ಕಲ್ಚರ್–ಫೋಕ್ ಸಾಂಗ್ಸ್ ಆ್ಯಂಡ್ ಟ್ರೆಡಿಷನ್ಸ್, 'ಬೊವ್ವೇರಿಯಂಡ ನಂಜಮ್ಮ ಚಿಣ್ಣಪ್ಪ (ಟ್ರಾನ್ಸ್‌ಲೇಟರ್ಸ್)) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೫. __________, ೨೦೦೪ (೧೮೭೮), **ಮೈಸೂರ್ ಅಂಡ್ ಕೂರ್ಗ್ ಗೆಜೆಟಿಯರ್**, ಮೈಸೂರು ಗವರ್ನಮೆಂಟ್ ಪ್ರೆಸ್, ಬೆಂಗಳೂರು.

೮೬. ವಿಜಯ್ ಪೂಣಚ್ಚ ತಂಬಂಡ, ೧೯೯೧, **ಪ್ರಾಸ್ಪೆಕ್ಟಿವ್ಸ್ ಆನ್ ದಕ್ಷಿಣ ಕನ್ನಡ ಆ್ಯಂಡ್ ಕೊಡಗು**, 'ಇನ್ನರ್ ಟೆನ್ಷನ್ಸ್ ಇನ್ ಜಮ್ಮ ಟೆನ್ಯೂರ್‌ಆ್ಯಂಡ್ ದೇರ್ ಇಂಪೆಕ್ಟ್ ಆನ್ ದಿ ಸೋಷಿಯಲ್ ಸ್ಟ್ರಕ್ಚರ್ ಆಫ್ ಕೂರ್ಗ್(೧೮೦೦–೧೯೫೬)', ಡಿಸೆನಿಯಲ್ ವ್ಯಾಲ್ಯೂಮ್, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು.

೮೭. __________, ೧೯೯೨, **ಅರಿವು ಬರಹ, ಸಂಚಿಕೆ–೩**, 'ಕೊಡಗಿನ ಚರಿತ್ರೆಯ ಮೇಲೆ ಕೆಲವು ಟಿಪ್ಪಣಿಗಳು', ಮಂಗಳ ಗಂಗೋತ್ರಿ, ಮಂಗಳೂರು.

೮೮. __________, ೧೯೯೨, **ಇಂಡಿಕಾ**, 'ಆಸ್ಪೆಕ್ಟ್ಸ್ ಆಫ್ ಸ್ಲೇವರಿ ಇನ್ ಕೂರ್ಗ್ ಇನ್ ದ ನೈಟೀನ್ತ್ ಸೆಂಚುರಿ(ಹೆರಾಸ್ ಇನ್ಸ್‌ಟ್ಯೂಟ್ ಆಫ್ ಇಂಡಿಯನ್ ಹಿಸ್ಟರಿ ಆ್ಯಂಡ್ ಕಲ್ಚರ್, ವಾಲ್ಯೂಮ್–೯,(೨), ಇಸ್ಯೂ–೫೫, ಬಾಂಬೆ

೮೯. __________, ೧೯೯೪, **ದಿ ಜಮ್ಮ ಲ್ಯಾಂಡ್ ಹೋಲ್ಡರ್ಸ್ ಆಫ್ ಕೂರ್ಗ್ ಅಂಡ್ ದಿ ಪಾಲಿಟಿಕ್ಸ್ ಆಫ್ ದಿ ಇಂಡಿಯನ್ ಆರ್ಮ್ಸ್ ಆಕ್ಟ್**, 'ಪ್ರೊಸೀಡಿಂಗ್ಸ್ ಆಫ್ ದಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ೫೪ನೇ ಅಧಿವೇಶನ(ಮೈಸೂರು), ದೆಹಲಿ.

೯೦. __________, ೧೯೯೫, **ಎಕನಾಮಿಕಲ್ ಅಂಡ್ ಸೋಶಿಯಲ್ ಹಿಸ್ಟರಿ ರಿವ್ಯೂ**, 'ಆನರ್ ಇನ್ ಚೈನ್ಸ್ : ದಿ ಹಿಟ್ಟಿಬಿಟ್ಟಿ ಚಾಕರಿ ಇನ್ ಜಮ್ಮ ಟೆನ್ಯೂರ್ ಇನ್ ಕೂರ್ಗ್'(೧೮೦೦–೧೯೩೦), ಸೇಜ್ ಪಬ್ಲಿಕೇಷನ್ಸ್, ನವದೆಹಲಿ.

೯೧. __________, ೧೯೯೫, **ಅರಿವು ಬರಹ, ಸಂಚಿಕೆ–೮**, 'ವಸಾಹತುಕಾಲದ ಕೊಡಗಿನ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿ ಪಟ್ಟೋಲೆ ಪಳಮೆ: ಒಂದು ಹಿನ್ನೋಟ', ಮಂಗಳ ಗಂಗೋತ್ರಿ, ಮಂಗಳೂರು.

೯೨. __________, ೧೯೯೬, **ಅರಿವು ಬರಹ, ಸಂಚಿಕೆ-೧೧, 'ಕೊಡಗಿನ ಜನಪದ ಕಾವ್ಯಗಳು',** ಮಂಗಳ ಗಂಗೋತ್ರಿ, ಮಂಗಳೂರು.

೯೩. __________, ೧೯೯೮, **ಪ್ರತ್ಯೇಕ ಕೊಡಗು ರಾಜ್ಯ - ಮೂಲನಿವಾಸಿಗಳು ಮತ್ತು ವಲಸೆಗಾರರು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೪. __________, ೨೦೦೦, **ಆಧುನಿಕ ಕೊಡಗು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೫. __________, ೨೦೦೪, **ಪಳಮೆ, ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ-ಕೊಡಗು-ತುಳುನಾಡಿನ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೬. __________, ೨೦೦೪, **ಕಾನ್‌ಫ್ಲಿಕ್ಟಿಂಗ್ ಐಡೆಂಟಿಟೀಸ್ ಇನ್ ಕರ್ನಾಟಕ ಸಪರೇಟಿಸ್ಟ್ ಅಂಡ್ ಆ್ಯಂಟಿ ಸಪರೇಟಿಸ್ಟ್ ಮೂಮೆಂಟ್ಸ್ ಇನ್ ಕೂರ್ಗ್,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೭. __________, (ಸಂ.), **ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್,** ಮೇ ೨೦೧೪-ಅಕ್ಟೋಬರ್ ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೮. __________, (ಸಂ.), **ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್,** ಮೇ ೨೦೦೬- ಏಪ್ರಿಲ್-೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೯. __________, ೨೦೦೫, **ಕೊಡಗು ವಿವರಣೆ (ಇ.ಮಾರ್ಸ್ಡೆನ್),** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೦೦. __________, ಮೇ ೨೦೦೫-ಏಪ್ರಿಲ್ ೨೦೦೬, **ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೧. __________, ೧೯೯೩, **ಜಮ್ಮ ಸಿಸ್ಟಂ ಇನ್ ಕೊಡಗು ಇಟ್ಸ್ ಸೋಷಿಯೋ ಇಕಾನಾಮಿಕ್ಸ್ ಡೈಮೆನ್ಷನ್**(೧೮೦೦-೧೯೮೦), ಅಪ್ರಕಟಿತ ಪಿ.ಎಚ್‌ಡಿ ಮಹಾಪ್ರಬಂಧ), ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು.

೧೦೨. __________, ೨೦೦೧, **ಚರಿತ್ರೆ ವಿಶ್ವಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೩. ಶಶಿಪ್ರಿಯ (ಮೀನಿಕ್ಕರ ಮಹಮ್ಮದ್), ೧೯೯೯, **ಕೊಡವ ಮುಸಲ್ಮಾನರು ಮತ್ತು ಟಿಪ್ಪು ಸುಲ್ತಾನ್,** ಕೊಡವ ಮುಸ್ಲಿ ಎಸೋಸಿಯೇಷನ್, ಬೆಂಗಳೂರು.

೧೦೪. ____________, ೧೯೯೮, **ಕೊಡಗ್‌ರ ಚರಿತ್ರಿಕ ಪಾಳೆಲಿಂಜ,** ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ.

೧೦೫. ಶ್ರೀನಿವಾಸ ಎಂ.ಎನ್., ೧೯೫೨, **ರಿಲಿಜಿಯನ್ ಅಂಡ್ ಸೊಸೈಟಿ ಎಮಾಂಗ್ ದಿ ಕೂರ್ಗ್ಸ್ ಆಫ್ ಸೌತ್ ಇಂಡಿಯಾ,** ಮೀಡಿಯಾ ಪ್ರಮೋಟರ್ಸ್ ಅಂಡ್ ಪಬ್ಲಿಷರ್ಸ್, ಬಾಂಬೆ.

೧೦೬. ಶ್ರೀಸತ್ಯಂ ಬಿ.ಎನ್., ೧೯೬೫, **ಕೂರ್ಗ್ ಡಿಸ್ಟ್ರಿಕ್ಟ್, ಮೈಸೂರು ಸ್ಟೇಟ್ ಗೆಜೆಟಿಯರ್,** ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೧೦೭. ಸುಬ್ಬಯ್ಯ ಕೆ.ಕೆ., ೧೯೭೮, **ಆರ್ಕಿಯಾಲಜಿ ಆಫ್ ಕೂರ್ಗ್,** ಗೀತಾ ಬುಕ್ ಹೌಸ್, ಮೈಸೂರು.

೧೦೮. **ಕೊಡವ ಸಂಘ ಸ್ಮರಣ ಸಂಚಿಕೆ** ೨೦೧೨, ಸಂಜಯನಗರ, ಬೆಂಗಳೂರು.

೧೦೯. ಹರೀಶ್ ಪಿ.ಎನ್, ೨೦೧೧(೧೯೯೩), **ಎರವರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೧೦. ಹೊಟ್ಟೆಂಗಡ ಸ್ವಾತಿ, ೨೦೧೧, **ಕೊಡವಡ ನಮ್ಮೆನಾಳ್ ಮಂಗಲ ಪಿಂಞ ಚಾವ್ ಪದ್ಧತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.



# ೨. ಪಾರಿಭಾಷಿಕ ಪದಗಳು

ಅಂಗಕಳಿ - ಒಕ್ಕದ ಹಿರಿಯ ವ್ಯಕ್ತಿ ಸತ್ತಾಗ ಒಕ್ಕಕ್ಕೆ ಸಂಬಂಧಪಟ್ಟ ಕೆಂಬಟ್ಟಿಗಳು ಮಾಡುವ ಸಂತಾಪ ಸೂಚಕ ನೃತ್ಯ ರೂಪಕ.

ಅಂಬಲ - ಊರ ಹಿರಿಯರು ಸೇರುವ ನ್ಯಾಯ ತೀರ್ಮಾನದ ಕಟ್ಟೆ.

ಅರುವ - ಒಕ್ಕದ ಕಷ್ಟ-ಸುಖಗಳಲ್ಲಿ ಭಾಗಿಯಾಗುವ ನೆರೆಯ ಗೆಳೆಯ ಒಕ್ಕ.

ಉಂಬಳಿ/ಪನ್ಯ - ಕೊಡಗಿನ ಭೂಹಿಡುವಳಿಗಳು.

ಐನ್‌ಮನೆ - ಒಕ್ಕದ ಸದಸ್ಯರೆಲ್ಲ ಪೂರ್ವದಲ್ಲಿ ವಾಸವಿದ್ದ ವಿಶಾಲವಾದ ಮನೆ.

ಐಮರ - ಕೊಡಗಿನ ಐನ್‌ಮನೆಗಳ ಪಡಸಾಲೆಯಲ್ಲಿ ಕಂಡುಬರುವ ಕುಳಿತುಕೊಳ್ಳುವ ಮರದ ವಿಶಾಲವಾದ ಹಲಗೆಗಳು.

ಒಕ್ಕ - ಕೊಡಗಿನಲ್ಲಿ ಕಂಡುಬರುವ ಅವಿಭಕ್ತ ಕುಟುಂಬ.

ಒಕ್ಕಪರಿಜೆ/ ಮಕ್ಕಪರಿಜೆ - ಒಕ್ಕದ ಸಂತಾನವು ಮುಂದುವರೆಯಲು ಮಾಡಿಕೊಂಡ ಪೂರ್ವದ ಸಾಮಾಜಿಕ ವ್ಯವಸ್ಥೆ.

ಒಡಿಕತ್ತಿ - ಕೊಡಗಿನಲ್ಲಿ ಪೂರ್ವದ ಸಂಘರ್ಷಗಳಲ್ಲಿ ಬಳಸುತ್ತಿದ್ದ ಖಡ್ಗ.

ಕನ್ನಿಮಂಗಲ - ಗಂಡು-ಹೆಣ್ಣಿಗೆ ಮೊದಲ ಬಾರಿಗೆ ನಡೆಯುವ ಮದುವೆ.

ಕನ್ನಿಕಂಬ - ಐಮರದ ಎರಡು ಕಡೆಗಳಲ್ಲಿ ಸ್ಥಾಪಿಸಲ್ಪಟ್ಟ ಕೆತ್ತನೆಯ ಕಂಬಗಳು.

ಕಾರಣವ - ಕೊಡಗರ ಮೂಲಪುರುಷ.

ಕಿಗ್ಗಟ್ಟು - ದಕ್ಷಿಣ ಭಾಗದ ನಾಡು.

ಕುತ್ತಿನಾಶ - ನಿರ್ವಂಶವಾಗುವುದು.

ಕುಳಿಯ - ಕೊಡಗಿನ ಒಂದು ಆರಾಧ್ಯ ದೈವ.

ಕೂಡಾವಳಿ - ಗಂಡು ಅಥವಾ ಹೆಣ್ಣಿಗೆ ಎರಡನೇ ಬಾರಿ ನಡೆಯುವ ಮದುವೆ.

ಕೆಂಬಟ್ಟಿ - ಕೊಡಗಿನ ಸಾಮಾಜಿಕ ಸಂರಚನೆಯಲ್ಲಿ ಕಂಡುಬರುವ ತಳವರ್ಗದ ಒಂದು ಸಮುದಾಯ.

ಕೆಮಿಕುತ್ತಿಮಂಗಲ- ಕೊಡಗಿನ ಯುವಕರು ಯೌವನಾವಸ್ಥೆಗೆ ಕಾಲಿಟ್ಟಾಗ ಮಾಡುವ ಮುಂಜಿಕಾರ್ಯ.

ಕೈಮಡ - ಕೊಡಗಿನ ಸಮುದಾಯಗಳಲ್ಲಿ ಕಂಡುಬರುವ ಒಕ್ಕಗಳ ಪ್ರತ್ಯೇಕವಾದ ಧಾರ್ಮಿಕ ಕೇಂದ್ರ.

ಕ್ಷೇಳಿಪಟ್ಟ - ಪ್ರಸಿದ್ಧಿಯಾದ.

ಕೊಕ್ಕೆತಾತಿ - ಸಮಾರಂಭಗಳಲ್ಲಿ ಮಹಿಳೆಯರು ಧರಿಸುವ ಸಾಂಪ್ರದಾಯಿಕ ಆಭರಣ.

ಜಮ್ಮ ಜಹಗೀರು - ಕೊಡಗಿನ ಕೃಷಿಕೇಂದ್ರಿತ ಮತ್ತು ಕುಶಲಕರ್ಮಿ ಸಮುದಾಯಗಳಿಗೆ ವಸಾಹತು ಪೂರ್ವದಲ್ಲಿ ನೀಡಲ್ಪಟ್ಟ ಭೂಹಿಡುವಳಿಗಳು.

ತಕ್ಕ - ಗ್ರಾಮ, ನಾಡು ಅಥವಾ ದೇವಸ್ಥಾನಗಳ ಮುಖ್ಯಸ್ಥ.

ತೆರೆ - ಹಬ್ಬದ ಸಂದರ್ಭದಲ್ಲಿ ದೇವರನ್ನು ಲೌಕಿಕದಲ್ಲಿ ನೋಡುವ ಕ್ರಮ ಅಥವಾ ಭೂತಾರಾಧನೆ.

ತಿರೋಳ - ಮನುಷ್ಯನ ಮೇಲೆ ದೇವರು ಆಹ್ವಾಹನೆ ಆಗುವ ಪ್ರಕ್ರಿಯೆ.

ತೂಟ್‌ಂಗಳ/ಕೇಕೊಳ - ಸ್ಮಶಾನ

ನರಿಮಂಗಲ - ಪೂರ್ವದಲ್ಲಿ ಹುಲಿಕೊಂದವನಿಗೆ ಸಲ್ಲುತಿದ್ದ ಗೌರವ.

ನೆಲ್ಲಕ್ಕಿ - ಐನ್‌ಮನೆಯ ಮಧ್ಯಭಾಗದ ವಿಶಾಲವಾದ ಪಡಸಾಲೆಯಲ್ಲಿರುವ ನಿತ್ಯಪ್ರಾರ್ಥನೆಗೆ ನಿಗದಿಪಡಿಸಿದ ತೂಗುದೀಪವಿರುವ ಸ್ಥಳ.

ಪತ್ತಾಕ್ - ಗಂಡನಿರುವ ಮಹಿಳೆಯರು ಧರಿಸುವ ಕೊಡಗಿನ ಸಾಂಪ್ರದಾಯಿಕ ತಾಳಿ.

ಪನ್ನಂಗಾಲ - ತಳವರ್ಗದವರಾದ ಕೆಂಬಟ್ಟಿ ಸಮುದಾಯದ ಜನರ ಆರಾಧ್ಯ ದೇವತೆ ನೆಲೆನಿಂತಿರುವ ಸ್ಥಳ.

ಪಟ್ಟಿ - ಅಂಗಳ.

ಪೀಚೆಕತ್ತಿ - ಗಂಡಸರ ಸಾಂಪ್ರದಾಯಿಕ ಆಭರಣ.

ಪೈತಾಂಡೆಕಳಪ - ಹತ್ತು ಮಕ್ಕಳನ್ನು ಹೆತ್ತ ತಾಯಿಗೆ ಸಲ್ಲುವ ಗೌರವ ಸಮಾರಂಭ.

ಬಾಳೋಪಾಟ್ - ಕೊಡಗಿನ ಜಾನಪದ ಹಾಡು.

ಬೊಳ್ಳಾಂಗೆ/ತಯೆ - ಕೃಷಿ ಉಪಕರಣಗಳು.

ಮನೆ ಪೆದ - ಮನೆತನದ ಹೆಸರು.

ಮಂದ್ - ನಾಡು ಸಂದರ್ಭದಲ್ಲಿ ಪ್ರಾಮುಖ್ಯತೆ ಪಡೆದಿದ್ದ ಸಾಂಸ್ಕೃತಿಕ ಕೇಂದ್ರವಾದ ಮೈದಾನ.

ಮೇಂದಲೆ - ಕೊಡಗಿನ ಉತ್ತರ ಭಾಗದ ನಾಡು.



# ೩. ಅನುಬಂಧ - ೨

**ಕೊ**ಡಗಿನಲ್ಲಿ ಕಂಡುಬರುವ ಒಕ್ಕಪೆದಗಳು ವ್ಯಾಕರಣ ಬದ್ಧವಾಗಿಯೂ ಕಂಡು ಬರುತ್ತದೆ. ಇಲ್ಲಿ ಕಂಡುಬರುವ ಬಹುತೇಕ ಮನೆತನಗಳ ಹೆಸರುಗಳು ಅಥವಾ ಒಕ್ಕಪೆದ(ಮನೆಪೆದ)ಗಳು ಪ್ರತ್ಯಯಾಂತಗಳಾಗಿರುತ್ತದೆ. ಈ ಎಲ್ಲ ಮನೆಪೆದಗಳೂ ವ್ಯಾಕರಣಕ್ಕೆ ಚ್ಯುತಿ ಬರದಂತೆ ರೂಪುಗೊಂಡಿರುವುದು ಇವುಗಳ ವೈಶಿಷ್ಟ್ಯಗಳಲ್ಲಿ ಒಂದು ಎಂದರೆ ತಪ್ಪಾಗಲಾರದು. ಹಾಗಾಗಿ 'ಮನೆಪೆದಗಳ' ಅಂತ್ಯದಲ್ಲಿ ಅಂಡ್ ಪ್ರತ್ಯಯವು ಬಹಳವಾಗಿ ಬಳಕೆಗೊಂಡಿರುವುದು ವಿಶೇಷವಾಗಿದೆ.

೭೫೦ಕ್ಕೂ ಹೆಚ್ಚಿರುವ 'ಅಂಡ' ಪ್ರತ್ಯಯಾಂತ ಮನೆಪೆದಗಳನ್ನು ಒಟ್ಟಿಗೆ ಇಟ್ಟು ನೋಡುವಾಗ 'ಅ' ಅನುಸ್ವಾರದಿಂದೊಡಗೂಡಿದ 'ಡ'ಕಾರ(ಅಂಡ) ಅಂತ್ಯದಲ್ಲಿ ಬರುವುದರಿಂದ ಈ ಎಲ್ಲಾ ಮನೆಪೆದಗಳೂ ಏಕರೂಪವಾಗಿಯೇ ಕಾಣಿಸುತ್ತವೆ. ಇಲ್ಲಿಯ ಮಹತ್ವದ ಅಂಶವೆಂದರೆ 'ಅಂಡ' ಪ್ರತ್ಯಯವು ಕೊಡವ ಭಾಷೆಯ ಎಲ್ಲ ವ್ಯಂಜನಗಳ ಜೊತೆಗೂಡಿ ಮನೆಪೆದಗಳು ರೂಪುಗೊಂಡಿರುವುದು. ಕೊಡವ ಭಾಷೆಗೆ ಪ್ರತ್ಯೇಕ ಲಿಪಿ ಇಲ್ಲದೆ ಕನ್ನಡ ಲಿಪಿಯಲ್ಲಿ ಕೊಡವ ಭಾಷೆಯನ್ನು ಬರೆಯಲಾಗುತ್ತದೆಯಾದರೂ ಕೊಡವ ಭಾಷೆಯಲ್ಲಿ ಮಹಾಪ್ರಾಣಾಕ್ಷರಗಳಿಲ್ಲ ಎಂಬುದನ್ನು ನಾವಿಲ್ಲಿ ಗಮನಿಸಬೇಕು. ಕನ್ನಡದಲ್ಲಿ ೧೦ ಮಹಾಪ್ರಾಣಾಕ್ಷರಗಳನ್ನು ಕಾಣುತ್ತೇವೆ (ಒಳವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟ ಭಾಷೆಯೊಳ್ ಕೆಲವು ನಿಜೋಜ್ವಳಮಾಗಿ ಎಂಬ ಕೇಶಿರಾಜನ ಮಾತು ಇಲ್ಲಿ ಗಮನಾರ್ಹ). ಕೊಡವ ಭಾಷೆಯ ಮನೆಪೆದಗಳ ಮೇಲೆ ಕನ್ನಡ ಭಾಷೆಯ ಮಹಾಪ್ರಾಣಾಕ್ಷರಗಳ ಪ್ರಭಾವ ಇಲ್ಲದಿರುವುದು ಇಲ್ಲಿ ಉಲ್ಲೇಖಾರ್ಹವಾಗುತ್ತದೆ.

ಅಂಡಾಂತ ಮನೆಪೆದಗಳನ್ನು ಭಾಷಾಧ್ಯಯನದ ಹಿನ್ನೆಲೆಯಲ್ಲಿ ಗಮನಿಸುವಾಗ ಅನುನಾಸಿಕ ವರ್ಣಗಳಾದ ಙ, ಞ, ಣ, ನ, ಮ ವರ್ಣಗಳ ಜೊತೆ ಅನುಸ್ವಾರ ಸೇರಿ ಮನೆಪೆದಗಳಾಗಿರುವುದು ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಸಂಶೋಧಕರಿಗೆ ಈ ಅಂಶಗಳು ಮುಖ್ಯವಾಗುತ್ತದೆ. ಪ್ರಯೋಗಕ್ಕಾಗಿ ಕ್ರಮವಾಗಿ:

ಙ – ಚಂಙಂಡ

ಞ – ಕುಂಞಂಡ

ಣ – ಅಮ್ಮಣಂಡ

ನ – ಐನಂಡ

ಮ – ಅಣ್ಣಮಂಡ

ಮೊದಲಾದ ಮನೆಪೆದಗಳನ್ನು ಅವಲೋಕಿಸಬಹುದಾಗಿದೆ.

'ಅಂಡ' ಪ್ರತ್ಯಯಾಂತ ಮನೆಪೆದಗಳಲ್ಲಿ ಒತ್ತಕ್ಷರಗಳು ಕಂಡುಬರುತ್ತವೆಯಾದರೂ ಒತ್ತಕ್ಷರಗಳಲ್ಲಿ ವಿಜಾತೀಯ ಒತ್ತಕ್ಷರಗಳು ಕಾಣಸಿಗುವುದು ತೀರ ವಿರಳ. ವಿಜಾತೀಯ ಒತ್ತಕ್ಷರಗಳನ್ನು ಹುಡುಕಿದರೆ ಸುಮಾರು ೫೦ಕ್ಕಿಂತ ಹೆಚ್ಚು ಸಿಗಲಾರವು.

## ವಿಜಾತೀಯ ಒತ್ತಕ್ಷರಗಳುಳ್ಳ ಮನೆಪೆದಗಳು

| | |
|---|---|
| ಜಕಾರಕ್ಕೆ ಯಕಾರ ಒತ್ತು ಇರುವ ಮನೆಪೆದಗಳು | : ಅಜ್ಜಿಯಡಕಂಡ, ಅಜ್ಯಂಡ |
| ಟಕಾರಕ್ಕೆ ರಕಾರ ಒತ್ತು ಇರುವ ಮನೆಪೆದಗಳು | : ಅಟ್ರಂಡ, ಕಟ್ರಂಡ, ಕಟ್ರಚಂಡ, ಪಟ್ರಪಂಡ, ಚೆಂಟ್ರಂಡ |
| ಟಕಾರಕ್ಕೆ ಯಕಾರ ಒತ್ತು ಇರುವ ಮನೆಪೆದಗಳು | : ಕಟ್ಯೇರಂಡ, ಬಟ್ಯಂಡ, ಚೆಟ್ಯೇರಂಡ |
| ಡಕಾರಕ್ಕೆ ರಕಾರ ಒತ್ತು ಇರುವ ಮನೆಪೆದಗಳು | : ಕಂಡ್ರತಂಡ, ಕುಂಡ್ರಂಡ |
| ಡಕಾರಕ್ಕೆ ಲಕಾರ ಒತ್ತು ಇರುವ ಮನೆಪೆದಗಳು | : ಮಡ್ಲಂಡ |
| ಡಕಾರಕ್ಕೆ ಯಕಾರ ಒತ್ತು ಇರುವ ಮನೆಪೆದಗಳು | : ಕುಡ್ಯೋಳಂಡ, ಮುಂಡ್ಯೋಳಂಡ |
| ದಕಾರಕ್ಕೆ ಯಕಾರ ಒತ್ತು ಇರುವ ಮನೆಪೆದಗಳು | : ಮದ್ಯಂಡ, ಪಂದ್ಯಂಡ |
| ನಕಾರಕ್ಕೆ ॅಕಾರ ಒತ್ತು ಇರುವ ಮನೆಪೆದಗಳು | : ಕರ್ನಂಡ |
| ಮಕಾರಕ್ಕೆ ॅಕಾರ ಒತ್ತು ಇರುವ ಮನೆಪೆದಗಳು | : ಚರ್ಮಂಡ |
| ಯಕಾರಕ್ಕೆ ಮಕಾರ ಒತ್ತು ಇರುವ ಮನೆಪೆದಗಳು | : ಕುಯ್ಮಂಡ |
| ರಕಾರಕ್ಕೆ ಯಕಾರ ಒತ್ತು ಇರುವ ಮನೆಪೆದಗಳು | : ಕಾರ್ಯಪಂಡ |
| ಲಕಾರಕ್ಕೆ ಚಕಾರ ಒತ್ತು ಇರುವ ಮನೆಪೆದಗಳು | : ನೆಲ್ಚಂಡ |
| ಲಕಾರಕ್ಕೆ ಟಕಾರ ಒತ್ತು ಇರುವ ಮನೆಪೆದಗಳು | : ಬಲ್ಟಿಕಂಡ |
| ಲಕಾರಕ್ಕೆ ಮಕಾರ ಒತ್ತು ಇರುವ ಮನೆಪೆದಗಳು | : ಕಲ್ಮಂಡ, ಚೆಲ್ಮಂಡ |
| ಲಕಾರಕ್ಕೆ ಯಕಾರ ಒತ್ತು ಇರುವ ಮನೆಪೆದಗಳು | : ಬಲ್ಯಂಡ, ಕಲ್ಯಾಟಂಡ, ಬಲ್ಯಮಂಡ, ಬಲ್ಯಪಂಡ |

ಳಕಾರಕ್ಕೆ ತಕಾರ ಒತ್ತು ಇರುವ ಮನೆಪೆದಗಳು : ಎಳ್ತಂಡ

ಳಕಾರಕ್ಕೆ ಯಕಾರ ಒತ್ತು ಇರುವ ಮನೆಪೆದಗಳು : ಕಾಳ್ಯಪಂಡ

ಒತ್ತಕ್ಷರಗಳುಳ್ಳ ಉಳಿದ ಮನೆಪೆದಗಳೆಲ್ಲ ಸಜಾತೀಯ ಒತ್ತಕ್ಷರಗಳನ್ನೊಳಗೊಂಡ ಮನೆಪೆದಗಳು. ವಿಶೇಷವೆಂದರೆ ಈ ಎಲ್ಲಾ ಮನೆಪೆದಗಳ ಅನುಸ್ವಾರಯುಕ್ತ ಮನೆಪೆದಗಳೇ ಎಂಬುದು ಮನೆಪೆದ ಗಳಲ್ಲಿ ದ್ವಿವರ್ಣ(ಡೈಸಿಲಬಿಕ್) ಮಿತಿಯ ಶಬ್ದಗಳು ಕಾಣಬರುತ್ತವೆಯೇ ಹೊರತು ತ್ರಿವರ್ಣ ಮಿತಿಯ ಶಬ್ದಗಳು(ತ್ರೈಸಿಲಬಿಕ್) ಕಾಣಬರುವುದಿಲ್ಲ.

ಇದು ಮನೆಪೆದಗಳ ಪದಾಂತದ ವಿಚಾರವಾದರೆ ಮನೆಪೆದ ಆರಂಭದ ಬಗೆಗೆ ನೋಡುವಲ್ಲಿಯೂ ವೈವಿಧ್ಯತೆ ಕಾಣುತ್ತದೆ. 'ಅಂಡ' ಪ್ರತ್ಯಯಾಂತ ಮನೆಪೆದಗಳ ಆದಿವರ್ಣ 'ಅ' ಮೊದಲುಗೊಂಡು ಅ, ಇ, ಉ, ಎ, ಓ, ಐ ಈ ಎಲ್ಲ ಸ್ವರ ವರ್ಣಗಳಿಂದ ಆರಂಭ ವಾಗುವುದು ಕಂಡುಬರುತ್ತದೆ.

**ಉದಾಹರಣೆ:**

ಅ – ಅಜ್ಜನಿಕಂಡ, ಅಲ್ಲಗಂಡ, ಅಪ್ಪಚಂಡ, ಅಂಜಂಡ, ಅಟ್ರಂಡ, ಅಡ್ರಂಡ, ಅಲ್ಲತಂಡ, ಅಮ್ಮಣಂಡ.

ಆ – ಆಪಾಡಂಡ, ಆಟ್ರಂಗಡ.

ಇ – ಇಂದಡಂಡ, ಇಂದಂಡ, ಇಕ್ಕೇರಿಯಂಡ, ಇಲ್ಲಟಿಕಾಳಂಡ.

ಉ – ಉದಿಯಂಡ, ಉಕ್ಕೆರಿಯಂಡ, ಉದ್ದಪಂಡ, ಉದ್ದಿನಾಡಂಡ, ಉಳುವಾರಂಡ.

ಎ – ಎರಮಂಡ, ಎಳ್ತಂಡ.

ಓ – ಓಡಿಯಂಡ, ಓಡಿಗಂಡ, ಓಡಿಕಂಡ, ಓಣಂಡ

ಐ – ಐಚಂಡ, ಐಚೋಡಿಯಂಡ, ಐತಿಚಂಡ, ಐನಂಡ, ಐರಿಚಂಡ, ಐಮುಡಿಯಂಡ, ಐಪುಮಣಿಯಂಡ

ಅಷ್ಟೇ ಅಲ್ಲದೆ 'ಅಂಡ' ಪ್ರತ್ಯಯವು ಎಲ್ಲ ವರ್ಗೀಯ, ಅವರ್ಗೀಯ ವ್ಯಂಜನ(ಶ, ಷ, ಹ ಹೊರತುಪಡಿಸಿ)ಗಳನ್ನು ಒಳಗೊಂಡು ಬಳಕೆಗೊಂಡಿರುವುದು ಒಂದೆಡೆಯಾದರೆ ಅಂಡಾಂತ ಮನೆಪದಗಳು ಟ, ಡ, ಯ, ರ, ಲ, ಳ, ಙ, ಞ ವರ್ಣಗಳನ್ನು ಹೊರತುಪಡಿಸಿ ಉಳಿದೆಲ್ಲ ವರ್ಗೀಯ, ಅವರ್ಗೀಯ ವ್ಯಂಜನ ವರ್ಣಾದಿಯಿಂದ ಆರಂಭವಾಗುವುದು ಕಂಡುಬರುತ್ತದೆ.

'ಅಂಡ' ಪ್ರತ್ಯಯಾಂತ ಮನೆಪದಗಳಂತೆಯೇ 'ಡ'ಕಾರಾಂತ ಮನೆಪದಗಳು ಮತ್ತಷ್ಟು ದೊರೆಯುತ್ತವೆ. ಗಡ, ರಡ, ಪುಡ, ಡಡ, ಬಡ, ದಡ, ಳಡ, ನಡ, ಮಾಡ ಹೀಗೆ 'ಡ' ಕಾರಾಂತ ಮನೆಪದಗಳೇ ಸುಮಾರು ೬೦೦-೭೦೦ರ ಗಡಿ ದಾಟುತ್ತವೆ.

**ಉದಾಹರಣೆ:**

ಗಡ – ಅಚ್ಚೆಂಗಡ, ಕೆಂಜಂಗಡ, ಕೊಕ್ಕೇಂಗಡ, ಗಜ್ಜಂಗಡ, ಮಲ್ಲಂಗಡ,ತಡಿಯಂಗಡ, ಹೊಟ್ಟೇಂಗಡ

ರಡ – ಮರಡ

ಪುಡ – ಅಪ್ಪುಡ, ಕೊಪ್ಪುಡ

ಡಡ – ಮಂಡೂಡ, ಮಂಡೇಡ

ಬಡ – ಸಬ್ಬುಡ

ದಡ – ಮೇದುಡ

ಳಡ – ಮುಳ್ಳಡ

ನಡ – ಮೇನಡ

ಮಾಡ – ಅಚ್ಚಮಾಡ, ಚಂಡಮಾಡ, ತಾತಮಾಡ, ನಲ್ಲಮಾಡ, ಕಾಳಿಮಾಡ, ಕೋಳುಮಾಡ.

ಇವುಗಳೇ ಅಲ್ಲದೆ ಇರ, ಎರ, ಏರ ಪ್ರತ್ಯಯಗಳುಳ್ಳ ಮನೆಪದಗಳೂ ಕಾಣಬರುತ್ತವೆ.

**ಉದಾಹರಣೆ:**

ಇರ – ಅಂಚಿರ, ಅಚ್ಚಾಂಡಿರ, ಕೇತಿರ, ನೂಕಿರ, ನೆಲ್ಲಿರ, ಪಾಚಿರ.

ಎರ – ಅಂಗಿಪನೆರ, ಅಡಕೆರ, ಕೊಕ್ಕೆರ, ಸೇನೆರ, ನೂರೆರ.

ಏರ – ಕಾಳೇರ, ಕೊಡಂದೇರ, ಮನ್ನೇರ, ಮುಲ್ಲೇರ.

ಹೀಗೆ ಕೊಡಗಿನ ಮನೆಪದಗಳನ್ನು ನಾಮವಾಚಕಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಕೆಲಸ ನಡೆದಿದೆಯಾದರೂ ಮನೆಪದಗಳ ನುಡಿಯ ಧ್ವನಿ ಹಾಗೂ ವರ್ಣಸಂಯೋಜಿತ ವೈವಿಧ್ಯತೆಯ ಅವಲೋಕನ ಕ್ವಚಿತ್ತಾಗಿ ನಡೆದಿದೆಯೇ ಹೊರತು ವ್ಯಾಪಕವಾಗಿ ಅಲ್ಲ ಎಂಬುದನ್ನು ಮನಗಾಣಬೇಕಾಗಿದೆ. ಅಲ್ಲದೆ ಈ ನಿಟ್ಟಿನಲ್ಲಿ ವಿಸ್ತೃತ ಸಂಶೋಧನೆಯ ಅನಿವಾರ್ಯತೆಯೂ ಇದೆ ಎಂಬುದನ್ನು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ.

**(ಕ್ + ಅಂಡ) = ಕಂಡ**

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಜ್ಜಡಕಂಡ | ೨. | ಅಜ್ಜನಿಕಂಡ | ೩. | ಅಜ್ಯಡಕಂಡ |
| ೪. | ಅಣ್ಣೀರ್‌ಕಂಡ | ೫. | ಅಮ್ಮೇಕಂಡ | ೬. | ಓಡಿಕಂಡ |

| | | | | | |
|---|---|---|---|---|---|
| ೭. | ಕಂಬಿಕಂಡ | ೮. | ಕನ್ನಿಕಂಡ | ೯. | ಕಳಕಂಡ |
| ೧೦. | ಕಳ್ಳೀಕಂಡ | ೧೧. | ಕೀಕಂಡ | ೧೨. | ಕುಣ್ಣಿಕಂಡ |
| ೧೩. | ಕುಳಿಯಕಂಡ | ೧೪. | ಕೂಕಂಡ | ೧೫. | ಕೊಕ್ಕಂಡ |
| ೧೬. | ಕೊರಕಂಡ | ೧೭. | ಚಿಕ್ಕಂಡ | ೧೮. | ಚೀಕಂಡ |
| ೧೯. | ಚೀಯಕಂಡ | ೨೦. | ಚೊನಕಂಡ | ೨೧. | ಚೋಕಂಡ |
| ೨೨. | ನಾಯಕಂಡ | ೨೩. | ಪಂದಿಕಂಡ | ೨೪. | ಪಾಲೇಕಂಡ |
| ೨೫. | ಬಲ್ಲಿಕಂಡ | ೨೬. | ಮೂಕಂಡ | ೨೭. | ಮೂಕೊಂಡ |
| ೨೮. | ಮೊಣ್ಣಿಕಂಡ | ೨೯. | ಮೋರ್ಕಂಡ | ೩೦. | ಸರಕಂಡ |

**(ಗ್+ಅಂಡ) = ಗಂಡ**

| ಕ್ರಸಂ. | | ಕ್ರಸಂ. | | ಕ್ರಸಂ. | |
|---|---|---|---|---|---|
| ೧. | ಅಲ್ಲಗಂಡ | ೨. | ಓಡಿಗಂಡ | ೩. | ಕಂಗಾಂಡ |
| ೪. | ಕಣ್ಣಿಂಗಂಡ | ೫. | ಕುಳ್ಳಗಂಡ | ೬. | ಗಾಣಗಂಡ |
| ೭. | ಗೀಜಗಂಡ | ೮. | ದುಗ್ಗಂಡ | ೯. | ನಾಗಂಡ |
| ೧೦. | ಪಳಂಗಂಡ | ೧೧. | ಮರುಗಂಡ | | |

**(ಜ್ + ಅಂಡ) = ಜಂಡ**

| ಕ್ರಸಂ. | | ಕ್ರಸಂ. | | ಕ್ರಸಂ. | |
|---|---|---|---|---|---|
| ೧. | ಚಂಜಂಡ | ೨. | ಕಂಜಾಂಡ | | |

**(ಚ್+ಅಂಡ) = ಚಂಡ**

| ಕ್ರಸಂ. | | ಕ್ರಸಂ. | | ಕ್ರಸಂ. | |
|---|---|---|---|---|---|
| ೧. | ಅಪ್ಪಚಂಡ | ೨. | ಅಮ್ಮಚಂಡ | ೩. | ಅಮ್ಮಣಿಚಂಡ |
| ೪. | ಅಳಮಚಂಡ | ೫. | ಐಚಂಡ | ೬. | ಐತಿಚಂಡ |
| ೭. | ಐರಿಚಂಡ | ೮. | ಕಟ್ರಚಂಡ | ೯. | ಕಣ್ಣಚಂಡ |
| ೧೦. | ಕಳ್ಳಿಚಂಡ | ೧೧. | ಕಾವಾಡಿಚಂಡ | ೧೨. | ಕಾಳಚಂಡ |
| ೧೩. | ಕುಲ್ಲಚಂಡ | ೧೪. | ಕೇಚಂಡ | ೧೫. | ಕೊಣಚಂಡ |

| | | | | | |
|---|---|---|---|---|---|
| ೧೬. | ಕೋಚಂಡ | ೧೭. | ಚಂಡಚಂಡ | ೧೮. | ಚೋಂಡ |
| ೧೯. | ನೆಲ್ಲಚಂಡ | ೨೦. | ಪಾಚಂಡ | ೨೧. | ಪಾಲಚಂಡ |
| ೨೨. | ಪುಚ್ಚಂಡ | ೨೩. | ಪುಟ್ಟಿಚಂಡ | ೨೪. | ಪೆಮ್ಮಚಂಡ |
| ೨೫. | ಪೊಂಚಾಂಡ | ೨೬. | ಪೊನ್ನಚಂಡ | ೨೭. | ಬಲ್ಲಚಂಡ |
| ೨೮. | ಬಲ್ಲಡಿಚಂಡ | ೨೯. | ಮಂಡಚಂಡ | ೩೦. | ಮಂಡೆಚಂಡ |
| ೩೧. | ಮಡಚಂಡ | ೩೨. | ಮೂಕಚಂಡ | ೩೩. | ಮೇಚಂಡ |

(ಜ್+ಅಂಡ) = ಜಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಂಜಂಡ | ೨. | ವಾಂಜಂಡ | | |

(ಞ್+ಅಂಡ) = ಞಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಕುಂಞಂಡ | ೨. | ಮಞಂಡ | | |

(ಟ್+ಅಂಡ) = ಟಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಮ್ಮಣಕುಟ್ಟಂಡ | ೨. | ಅಮ್ಮಾಟಂಡ | ೩. | ಆಟ್ರಂಡ |
| ೪. | ಕಟ್ರಂಡ | ೫. | ಕಲ್ಯಾಟಂಡ | ೬. | ಕುಟ್ಟಂಡ |
| ೭. | ಕೊಟ್ಟಂಡ | ೮. | ಚೆಟ್ಟಂಡ | ೯. | ಚೆಟ್ರಂಡ |
| ೧೦. | ಚೊಟ್ಟಂಡ | ೧೧. | ಪಟ್ಟಂಡ | ೧೨. | ಬಟ್ಯಂಡ |
| ೧೩. | ಮೋಟಂಡ | | | | |

(ಡ್+ಅಂಡ) = ಡಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಡ್ಡಂಡ | ೨. | ಅಪಾಡಂಡ | ೩. | ಅಲ್ಲಡಂಡ |
| ೪. | ಆಪಾಡಂಡ | ೫. | ಇಂದಡಂಡ | ೬. | ಉದ್ದಿನಾಡಂಡ |

| | | | | | |
|---|---|---|---|---|---|
| ೭. | ಕಲ್ಮಾಡಂಡ | ೮. | ಕಲ್ಲುಮಾಂಡಂಡ | ೯. | ಕಲ್ಲುಮಾಡಂಡ |
| ೧೦. | ಕಾಂಡಂಡ | ೧೧. | ಕಾಡಂಡ | ೧೨. | ಕೀಪಾಡಂಡ |
| ೧೩. | ಕುಂಡಂಡ | ೧೪. | ಕುಂಡ್ರಂಡ | ೧೫. | ಕುಲ್ಲೋಡಂಡ |
| ೧೬. | ಕೊಳುಮಾಡಂಡ | ೧೭. | ಗುಡ್ಡಂಡ | ೧೮. | ಗುಡ್ಡಾಂಡ |
| ೧೯. | ಗೌಡಂಡ | ೨೦. | ಚೋಯಮಾಡಂಡ | ೨೧. | ತುಳುಮಾಡಂಡ |
| ೨೨. | ನಾಡಂಡ | ೨೩. | ಪಾಡಂಡ | ೨೪. | ಮಡ್ಲಂಡ |
| ೨೫. | ಮುಂಡಂಡ | ೨೬. | ಮೂಡಂಡ | ೨೭. | ಮೇಪಾಡಂಡ |

(ಣ್+ಅಂಡ) = ಣಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಮ್ಮಣಂಡ | ೨. | ಓಣಂಡ | ೩. | ಮೊಣ್ಣಂಡ |

(ತ್+ಅಂಡ) = ತಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧ | ಅಲ್ಲತ್ತಂಡ | ೨. | ಎಳ್ತಂಡ | ೩. | ಕಂಜಿತಂಡ |
| ೪ | ಕಂಡ್ರತಂಡ | ೫. | ಕತ್ತಂಡ | ೬. | ಕನ್ನಿತಂಡ |
| ೭ | ಕಳತಂಡ | ೮. | ಕಾಂತಂಡ | ೯. | ಕಾಣತಂಡ |
| ೧೦. | ಕುಂಬುಡುತಂಡ | ೧೧. | ಕೂತಂಡ | ೧೨. | ಕೆಂಬಡತಂಡ |
| ೧೩. | ಕೋಲತಂಡ | ೧೪. | ಚಾತಂಡ | ೧೫. | ಚಿಲ್ಲತ್ತಂಡ |
| ೧೬. | ತಾತಂಡ | ೧೭ | ಪಳೆಯತಂಡ | ೧೮. | ಪುದಿಯತಂಡ |
| ೧೯. | ಪೊನ್ನೋಲನತಂಡ | ೨೦. | ಮಂದತಂಡ | ೨೧. | ಮೇಕತಂಡ |
| ೨೨. | ಮೇಜತ್ತಂಡ | ೨೩. | ಮೇತಂಡ | | |

(ದ್+ಅಂಡ) = ದಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅವರೆಮಾದಂಡ | ೨. | ಇಂದಂಡ | ೩. | ಕಾದಂಡ |
| ೪. | ಕಿರುಂದಂಡ | ೫. | ಕೋದಂಡ | ೬. | ಚೆರ್ಮಂದಂಡ |

| | | | | | |
|---|---|---|---|---|---|
| ೭. | ಚೇಂದಂಡ | ೮. | ಚೊದಂಡ | ೯. | ಚೋದಂಡ |
| ೧೦. | ಪಂದ್ಯಂಡ | ೧೧. | ಪರದಂಡ | ೧೨. | ಮದ್ದಂಡ |
| ೧೩. | ಮದ್ಯಂಡ | ೧೪. | ಮಾದಂಡ | ೧೫. | ಮುದ್ದಂಡ |
| ೧೬ | ಮುದ್ಯಂಡ | ೧೭. | ಮೈದಂಡ | ೧೮. | ಸಿದ್ದಂಡ |

(ನ್+ಅಂಡ) = ನಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಜ್ಜಿನಂಡ | ೨. | ಐನಂಡ | ೩. | ಕನ್ನಂಡ |
| ೪. | ಕರ್ನಂಡ | ೫. | ಚೇನಂಡ | ೬. | ಮಿನ್ನಂಡ |

(ಪ್+ಅಂಡ) = ಪಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಂಜಪಂಡ | ೨. | ಅಕ್ಕಪಂಡ | ೩. | ಅಚ್ಚಪಂಡ |
| ೪. | ಅಜ್ಜಪಂಡ | ೫. | ಅಜ್ಜಪ್ಪಂಡ | ೬. | ಅಪಂಡ |
| ೭. | ಅಯ್ಯಲಪಂಡ | ೮. | ಅಲ್ಲಪಂಡ | ೯. | ಉದ್ದಪಂಡ |
| ೧೦. | ಐಲಪಂಡ | ೧೧. | ಕಾಯಪಂಡ | ೧೨. | ಕಾರ್ಯಪಂಡ |
| ೧೩. | ಕಾಳಪಂಡ | ೧೪. | ಕಾಳೆಪಂಡ | ೧೫. | ಕಾಳ್ಯಪಂಡ |
| ೧೬. | ಕುಂಞಪಂಡ | ೧೭. | ಕುಪ್ಪಂಡ | ೧೮. | ಕೇಳಪಂಡ |
| ೧೯. | ಕೊಂಗೆಪಂಡ | ೨೦. | ಕೊಪ್ಪಂಡ | ೨೧. | ಚಂಗೇಪಂಡ |
| ೨೨. | ಚಂದಪಂಡ | ೨೩. | ಚನಿಯಪಂಡ | ೨೪. | ಚನ್ನಪಂಡ |
| ೨೫. | ಚಪ್ಪಂಡ | ೨೬. | ಚೇಯಪಂಡ | ೨೭. | ಚೆರಿಯಪಂಡ |
| ೨೮. | ಚೊಟೆಪಂಡ | ೨೯. | ಚೋಂದೆಪಂಡ | ೩೦. | ಚೋಳಪಂಡ |
| ೩೧. | ತಾತಪಂಡ | ೩೨. | ತಾಪಂಡ | ೩೩. | ತಾಪಂಡ |
| ೩೪. | ತಾಪಂಡ | ೩೫. | ತೇಲಪಂಡ | ೩೬. | ದೇರಪಂಡ |
| ೩೭. | ದೇವಪಂಡ | ೩೮. | ನಂದಲಪಂಡ | ೩೯. | ನಂಬಿಯಪಂಡ |
| ೪೦. | ನಾಪಂಡ | ೪೧. | ನೆರಪಂಡ | ೪೨. | ನೆಲ್ಲಪಂಡ |

| | | | | | |
|---|---|---|---|---|---|
| ೪೩. | ಪಂದಪಂಡ | ೪೪. | ಪಟ್ರಪಂಡ | ೪೫. | ಬಲ್ಯಪಂಡ |
| ೪೬. | ಮಂಡೇಪಂಡ | ೪೭. | ಮನೆಯಪಂಡ | ೪೮. | ಮಾಚಿಪಂಡ |
| ೪೯. | ಮಾಣಿಯಪಂಡ | ೫೦. | ಮಾದಪಂಡ | ೫೧. | ಮಾಪಂಡ |
| ೫೨. | ಮಾರಾಯೊಪಂಡ | ೫೩. | ಮೀದಪಂಡ | ೫೪. | ಮೈಂದಪಂಡ |
| ೫೫. | ಹೊಟ್ಟೆಪಂಡ | | | | |

(ಬ+ಅಂಡ) = ಬಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧ | ಕಂಬಂಡ | ೨ | ಕುಂಬಂಡ | ೩ | ಕೊಂಬಾಂಡ |
| ೪ | ಚೆಂಬಾಂಡ | ೫ | ಜಬ್ಬಂಡ | ೬ | ತಂಬಂಡ |
| ೭ | ತಂಬಾಂಡ | | | | |

(ಮ್+ಅಂಡ) = ಮಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಣ್ಣಮಂಡ | ೨. | ಅಮ್ಮಂಡ | ೩. | ಅಯ್ಯಮಂಡ |
| ೪. | ಅಳಮಂಡ | ೫. | ಆಲಿಮ್ಮಂಡ | ೬. | ಈರಮ್ಮಂಡ |
| ೭. | ಎರಮಂಡ | ೮. | ಐಮಂಡ | ೯. | ಕಡಿಮಂಡ |
| ೧೦. | ಕಮ್ಮಂಡ | ೧೧. | ಕಮ್ಮಂಡ | ೧೨. | ಕಲ್ಮಂಡ |
| ೧೩. | ಕಾಡುಮಂಡ | ೧೪. | ಕಾಳಮಂಡ | ೧೫. | ಕುಂಞಮ್ಮಂಡ |
| ೧೬. | ಕುಯ್ಮಂಡ | ೧೭. | ಕೊಳುಮಂಡ | ೧೮. | ಕೋಚಮಂಡ |
| ೧೯. | ಚರ್ಮಂಡ | ೨೦. | ಚಾಮಂಡ | ೨೧. | ಚಾರಿಮಂಡ |
| ೨೨. | ಚಿಮ್ಮಂಡ | ೨೩. | ಚೆರ್‌ಮಂಡ | ೨೪. | ಚೆಲ್ಮಂಡ |
| ೨೫. | ಚೊಟ್ಟೆಮಂಡ | ೨೬. | ಚೊಟ್ಟೆಯಂಡಮ್ಮಂಡ | ೨೭. | ಚೋಮಂಡ |
| ೨೮. | ಚೋಳಮಂಡ | ೨೯. | ಜಮ್ಮಂಡ | ೩೦. | ನಂಬಡುಮಂಡ |
| ೩೧. | ನಾಣಮಂಡ | ೩೨. | ನಿಡುಮಂಡ | ೩೩. | ನೆರಮಂಡ |
| ೩೪. | ಪುಚ್ಚಿಮಂಡ | ೩೫. | ಪೆಮ್ಮಂಡ | ೩೬. | ಪೊರಿಮಂಡ |
| ೩೭. | ಬಡುವಮಂಡ | ೩೮. | ಬಯಮಂಡ | ೩೯. | ಬಲ್ಯಮಂಡ |
| ೪೦. | ಸುಬ್ಬಮಂಡ | | | | |

(ಯ್+ಅಂಡ) = ಯಂಡ

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಚಿಯಂಡ | ೨. | ಅಚ್ಚಿಯಂಡ | ೩. | ಅಚ್ಚೇರಿಯಂಡ |
| ೪. | ಅಜ್ಯಂಡ | ೫. | ಅಣ್ಣಡಿಯಂಡ | ೬. | ಅಣ್ಣಡಿಯಂಡ |
| ೭. | ಅನ್ನಾಡಿಯಂಡ | ೮. | ಅಪ್ಪುಮಣಿಯಂಡ | ೯. | ಅಪ್ಪೇರಿಯಂಡ |
| ೧೦. | ಅಮ್ಮಚಾಳಿಯಂಡ | ೧೧. | ಅಮ್ಮಚಿಮಣಿಯಂಡ | ೧೨. | ಅಮ್ಮನೆಯಂಡ |
| ೧೩. | ಅಮ್ಮೇರಿಯಂಡ | ೧೪. | ಅಯ್ಯಂಡ | ೧೫. | ಅಯ್ಯರಣಿಯಂಡ |
| ೧೬. | ಅಯ್ಯುರಣಿಯಂಡ | ೧೭. | ಅಮ್ಮೆಯಂಡ | ೧೮. | ಆಚೆಯಂಡ |
| ೧೯. | ಆರೆಯಂಡ | ೨೦. | ಇಕ್ಕೇರಿಯಂಡ | ೨೧. | ಉಕ್ಕೇರಿಯಂಡ |
| ೨೨. | ಉದಿಯಂಡ | ೨೩. | ಐಚೋಡಿಯಂಡ | ೨೪. | ಐಪುಮಣಿಯಂಡ |
| ೨೫. | ಐಮುಡಿಯಂಡ | ೨೬. | ಓಡಿಯಂಡ | ೨೭. | ಕಂಬೆಯಂಡ |
| ೨೮. | ಕದ್ದಣಿಯಂಡ | ೨೯. | ಕಲಿಯಂಡ | ೩೦. | ಕಾಟ್‌ಮಣಿಯಂಡ |
| ೩೧. | ಕಾಡ್ಯಂಡ | ೩೨. | ಕಾಪಿಮಣಿಯಂಡ | ೩೩. | ಕಾಮೆಯಂಡ |
| ೩೪. | ಕಾಳೆಯಂಡ | ೩೫. | ಕಿಕ್ಕೇರಿಯಂಡ | ೩೬. | ಕಿಮ್ಮುಡಯಂಡ |
| ೩೭. | ಕಿಮ್ಮಡಿಯಂಡ | ೩೮. | ಕೀತಿಯಂಡ | ೩೯. | ಕುಂಜಿಯಂಡ |
| ೪೦. | ಕುಂಞಯಂಡ | ೪೧. | ಕುಂಬಿಯಂಡ | ೪೨. | ಕುಯಿಮುಡಿಯಂಡ |
| ೪೩. | ಕೊಟ್ಟಿಯಂಡ | ೪೪. | ಕೋಣಿಯಂಡ | ೪೫. | ಕೋಡಿಮಣಿಯಂಡ |
| ೪೬. | ಕೋಡಿಯಂಡ | ೪೭. | ಕೋಳುಮುಡಿಯಂಡ | ೪೮. | ಚಡಿಯಂಡ |
| ೪೯. | ಚಡೆಯಂಡ | ೫೦. | ಚಾರಿಯಂಡ | ೫೧. | ಚೀಚೋಳಿಯಂಡ |
| ೫೨. | ಚೀಚೋಳಿಯಂಡ | ೫೩. | ಚೆಯ್ಯಂಡ | ೫೪. | ಚೆರಿಯಂಡ |
| ೫೫. | ಚೆಳಿಯಂಡ | ೫೬. | ಚೊಟ್ಟಣಿಯಂಡ | ೫೭. | ಚೊಟ್ಟೆಯಂಡ |
| ೫೮. | ಚೋಮಯಂಡ | ೫೯. | ಜಡಿಯಂಡ | ೬೦. | ತೊಂಡಿಯಂಡ |
| ೬೧. | ತೊತ್ತಿಯಂಡ | ೬೨. | ದೇಯಂಡ | ೬೩. | ನಂಬಿಯಂಡ |
| ೬೪. | ನಡಿಕೇರಿಯಂಡ | ೬೫. | ನಾಳಿಯಂಡ | ೬೬. | ನುಚ್ಚಿಮಣಿಯಂಡ |

| | | | | | |
|---|---|---|---|---|---|
| ೬೭. | ಪಡಯಂಡ | ೬೮. | ಪಳಂಗಿಯಂಡ | ೬೯. | ಪಳೆಯಂಡ |
| ೭೦. | ಪಾಡೆಯಂಡ | ೭೧. | ಪಾಲೆಯಂಡ | ೭೨. | ಪುದಿಯಂಡ |
| ೭೩. | ಪೆಮ್ಮಡಿಯಂಡ | ೭೪. | ಪೇರಿಯಂಡ | ೭೫. | ಪೋರೆಯಂಡ |
| ೭೬. | ಮಡೆಯಂಡ | ೭೭. | ಮಾಡೆಯಂಡ | ೭೮. | ಮೂಣಿಯಂಡ |
| ೭೯. | ಮಾದಯಂಡ | ೮೦. | ಮಾಳೆಯಂಡ | ೮೧. | ಮುದ್ರಣಿಯಂಡ |
| ೮೨. | ಮೇಕ್‌ಮಣಿಯಂಡ | ೮೩. | ಮೇಚಿಯಂಡ | ೮೪. | ಮೇರಿಯಂಡ |
| ೮೫. | ಮೊಟ್ಟೆಯಂಡ | ೮೬. | ಶಿವಚಾಳಿಯಂಡ | ೮೭ | ಸೋಮೆಯಂಡ |

**(ರ್+ಅಂಡ) = ರಂಡ**

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಂಜಪರಂಡ | ೨. | ಅಜ್ಜಿರಂಡ | ೩. | ಅಪ್ಪಂಡೇರಂಡ |
| ೪. | ಅಪ್ಪಾರಂಡ | ೫. | ಅಲ್ಲಾರಂಡ | ೬. | ಆರಂಡ |
| ೭. | ಉಳುವಾರಂಡ | ೮. | ಕಂಬೀರಂಡ | ೯. | ಕೊಂಗಾಂಡ |
| ೧೦. | ಕೋರಂಡ | ೧೧. | ಚರಂಡ | ೧೨. | ಚೀರಂಡ |
| ೧೩. | ಚೆಟ್ಟಿಯಾರಂಡ | ೧೪. | ಚೆಟ್ಯೇರಂಡ | ೧೫. | ಚೆರುಂಡ |
| ೧೬. | ಜಗ್ಗಾರಂಡ | ೧೭. | ನೆಚ್ಚರಂಡ | ೧೮. | ಪಚ್ಚರಂಡ |
| ೧೯. | ಬಲ್ಲಾರಂಡ | ೨೦. | ಮೇವರಂಡ | | |

**(ಲ್+ಅಂಡ) = ಲಂಡ**

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಕುಂಜಿಲಂಡ | ೨. | ಚಂಗುಲಂಡ | ೩. | ತೋಲಂಡ |
| ೪. | ನೆಲ್ಜಂಡ | ೫. | ಪಾಣತಲಂಡ | ೬. | ಬಲ್ಯಂಡ |
| ೭. | ಬಲ್ಲಂಡ | ೮. | ಬಲ್ಲಂಡ | ೯. | ವಲ್ಲಂಡ |

**(ವ್+ಅಂಡ) ವಂಡ**

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಂಜಪರವಂಡ | ೨. | ಅಪ್ಪನೆರವಂಡ | ೩. | ಅಯ್ಯನೆರವಂಡ |
| ೪. | ಅರಮಡ | ೫. | ಕಂಡುವಂಡ | ೬. | ಕರವಂಡ |

| | | | | | |
|---|---|---|---|---|---|
| ೭. | ಕರಿನೆರವಂಡ | ೮. | ಕುಂಡುವಂಡ | ೯. | ಕುಡುವಂಡ |
| ೧೦. | ಕೊರವಂಡ | ೧೧. | ಕೊರುವಂಡ | ೧೨. | ಕೊಳುವಂಡ |
| ೧೩. | ಚಾವಂಡ | ೧೪. | ಚೆಲ್ಲವಂಡ | ೧೫. | ಚೆಟ್ಟನೆರವಂಡ |
| ೧೬. | ಚೆಲಂದವಂಡ | ೧೭. | ಚೇರವಂಡ | ೧೮. | ಚೊವ್ವಂಡ |
| ೧೯. | ಚೋಂದುವಂಡ | ೨೦. | ನಂದಿನೆರವಂಡ | ೨೧. | ನನ್ನೆರವಂಡ |
| ೨೨. | ನಾಗವಂಡ | ೨೩. | ನಾಪನೆರವಂಡ | ೨೪. | ನೆರವಂಡ |
| ೨೫. | ಪಟ್ಟಚೆರವಂಡ | ೨೬. | ಪರವಂಡ | ೨೭. | ಪುದಿಯನೆರವಂಡ |
| ೨೮. | ಪೊರುಕೋವಂಡ | ೨೯. | ಬಯವಂಡ | ೩೦. | ಬುಡವಂಡ |
| ೩೧. | ಮಂಡುವಂಡ | ೩೨. | ಮಂಡೋವಂಡ | ೩೩. | ಮರುವಂಡ |
| ೩೪. | ಮಳೆವಂಡ | ೩೫. | ಮಾದನೆರವಂಡ | ೩೬. | ಮುಚ್ಚುವಂಡ |
| ೩೭. | ಮುರುವಂಡ | ೩೮. | ಮೂಕೋವಂಡ | ೩೯. | ಮೇಚುವಂಡ |
| ೪೦. | ಸಣ್ಣುವಂಡ | | | | |

**(ಸ್+ಅಂಡ) = ಸಂಡ**

| ಕ್ರ.ಸಂ. | | ಕ್ರ.ಸಂ. | | | |
|---|---|---|---|---|---|
| ೧. | ದಾಸಂಡ | | | | |

**(ಳ್+ಅಂಡ) = ಳಂಡ**

| ಕ್ರ.ಸಂ. | | ಕ್ರ.ಸಂ. | | ಕ್ರ.ಸಂ. | |
|---|---|---|---|---|---|
| ೧. | ಅಪ್ಪಚೆಟ್ಟೋಳಂಡ | ೨. | ಅಳ್ಳಂಡ | ೩. | ಇಲ್ಲಟಿಕಾಳಂಡ |
| ೪. | ಕುಡ್ಯೋಳಂಡ | ೫. | ಕೋಳಂಡ | ೬. | ಚೆಟ್ಟೋಳಂಡ |
| ೭. | ಚೆರುವಾಳಂಡ | ೮. | ಚೊಳ್ಳಂಡ | ೯. | ಚೋಳಂಡ |
| ೧೦. | ತೆಕ್ಕಬೊಟ್ಟೋಳಂಡ | ೧೧. | ನಾಟೋಳಂಡ | ೧೨. | ನಾಡುವಾಳಂಡ |
| ೧೩. | ಪೊಕ್ಕೊಳಂಡ | ೧೪. | ಪೊಡನೋಳಂಡ | ೧೫. | ಬಲ್ಲಟಿಕಾಳಂಡ |
| ೧೬. | ಮುಂಡ್ಯೋಳಂಡ | ೧೭. | ಮುಳ್ಳಂಡ | ೧೮. | ಮೇಪಾಳಂಡ |
| ೧೯. | ಮೊಳ್ಳಂಡ | ೨೦. | ಅಳ್ಳಾಂಡ | | |

ಅಂಡ ಪ್ರತ್ಯಯವು ಈ ಎಲ್ಲ ಮನೆಪೆದಗಳ ಅಂತ್ಯದಲ್ಲಿ ಬಳಕೆಗೊಂಡಿರುವುದನ್ನು ಪರಿಶೀಲಿಸುತ್ತ ಹೋದಂತೆ 'ಅಂಡ' ಪ್ರತ್ಯಯದ ಹೊಂದಿಕೆಯಲ್ಲಿ ವಿಭಿನ್ನತೆ ಸ್ಪಷ್ಟವಾಗಿ ಕಾಣುತ್ತದೆ. ಇಲ್ಲಿ 'ಅಂಡ' ಪ್ರತ್ಯಯವು ಶ, ಷ, ಸ, ಹ ಅವರ್ಗೀಯ ವ್ಯಂಜನಗಳನ್ನು ಹೊರತುಪಡಿಸಿ ಉಳಿದೆಲ್ಲ ವರ್ಗೀಯ, ಅವರ್ಗೀಯ ವ್ಯಂಜನಾಂತ ವರ್ಣಗಳೊಂದಿಗೆ ಸೇರಿ ಮನೆಪೆದಗಳು ರೂಪುಗೊಂಡಿರುವುದು ನಿಚ್ಚಳವಾಗಿ ಕಾಣಿಸುತ್ತದೆ.

ಅಂಡ ಪ್ರತ್ಯಯವು ವ್ಯಂಜನಾಂತ ವರ್ಣಗಳೊಂದಿಗೆ ಸೇರುವ ಬಗೆಯನ್ನು ಈ ಕೆಳಗಿನಂತೆ ಗುರುತಿಸಬಹುದು.

| | | | | | |
|---|---|---|---|---|---|
| ಕಂಡ | ಗಂಡ | ಙಂಡ | (ಕ್+ಅಂಡ) | (ಗ್+ಅಂಡ) | (ಙ+ಅಂಡ) |
| ಚಂಡ | ಜಂಡ | ಞಂಡ | (ಚ್+ಅಂಡ) | (ಜ್+ಅಂಡ) | (ಞ್+ಅಂಡ) |
| ಟಂಡ | ಡಂಡ | ಣಂಡ | (ಟ್+ಅಂಡ) | (ಡ್+ಅಂಡ) | (ಣ್+ಅಂಡ) |
| ತಂಡ | ದಂಡ | ನಂಡ | (ತ್+ಅಂಡ) | (ದ್+ಅಂಡ) | (ನ್+ಅಂಡ) |
| ಪಂದ | ಬಂಡ | ಮಂಡ | (ಪ್+ಅಂಡ) | (ಬ್+ಅಂಡ) | (ಮ್+ಅಂಡ) |
| ಯಂಡ | ರಂಡ | ಲಂಡ | (ಯ್+ಅಂಡ) | (ರ್+ಅಂಡ) | (ಲ್+ಅಂಡ) |
| ವಂಡ | ಸಂಡ | ಳಂಡ | (ವ್+ಅಂಡ) | (ಸ್+ಅಂಡ) | (ಳ್+ಅಂಡ) |

ಈ ಅಧ್ಯಾಯದಲ್ಲಿ ನಾಡು ರೂಪುಗೊಂಡ ಬಗೆ ಹಾಗೂ 'ನುಡಿ' ಅಥವಾ ಭಾಷೆಯ ಬಗೆಗಿನ ವಿವರಗಳನ್ನು ತಿಳಿದುಕೊಳ್ಳುವ ಅಗತ್ಯತೆ ಇತ್ತು. ಈ ಅಧ್ಯಾಯದ ಆರಂಭದಲ್ಲಿ ಹೇಳಿರುವಂತೆ 'ನುಡಿ' ಎಂದರೆ ಜನರಾಡುವ ಮಾತೇ ಆಗಿದೆ. ಇಡೀ ಕೊಡಗು ಭಾಷೆಯ ಬೇರೆ ಬೇರೆ ಮಜಲುಗಳನ್ನು ಹಾಗೂ ಅದು ನಾಡು ಕಟ್ಟಲು ನೆರವಾದ ಬಗೆಯ ಆಯಾಮವನ್ನು ತಿಳಿದುಕೊಳ್ಳುವ ಅನಿವಾರ್ಯತೆ ಇತ್ತು. ಹಾಗಾಗಿ ಕೊಡಗು ಭಾಷೆಯ ಒಂದು ಭಾಗವಾದ ಮತ್ತು ನಾಡಿನೊಳಗೆ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಲು ನೆರವಾದ ಒಕ್ಕಪೆದಗಳ ಬಗೆಗಿನ ಅಧ್ಯಯನವನ್ನು ಕೈಗೆತ್ತಿಕೊಂಡಾಗ ಭಾಷಾಶಾಸ್ತ್ರದ ವೈಜ್ಞಾನಿಕ ತಿಳುವಳಿಕೆ ಇಲ್ಲದಿದ್ದ ಕಾಲಘಟ್ಟದಲ್ಲಿ ಕೊಡಗಿನಲ್ಲಿ ಕಂಡುಬಂದ ಮನೆತನದ ಹೆಸರುಗಳು ಅಥವಾ ಒಕ್ಕಪೆದಗಳು ತನ್ನದೇ ಆದ ಧಾಟಿಯಲ್ಲಿ ರೂಪುಗೊಂಡಿದ್ದು, ಭಾಷಾಶಾಸ್ತ್ರದ ಅಧ್ಯಯನಕಾರರಿಗೂ ಕುತೂಹಲ ಉಂಟಾಗುವಂತೆ ಮಾಡಿದೆ,. ಯಾವ ಒಕ್ಕಪದಗಳೂ ತಾನು ಹಾಕಿಕೊಂಡ ರೇಖಾ ಪರಿಮಿತಿಯನ್ನು ಮೀರದೆ ವ್ಯಾಕರಣದೊಳಗೆ ಅಡಗಿದುದು 'ನುಡಿ'ಯ ವಿಶೇಷತೆಗಳಲ್ಲಿ ಒಂದಾಗಿದೆ.

ಬೇರೆ ಬೇರೆ ಕಾಲಘಟ್ಟಗಳಲ್ಲಿ ಒಕ್ಕಪೆದಗಳನ್ನು ಪಡೆದುಕೊಳ್ಳುವ ಪ್ರಕ್ರಿಯೆಗೆ ಒಳಗಾದ ಕೊಡಗಿನ ಮನೆತನಗಳು ದಕ್ಷಿಣ ಭಾರತದ ರಾಜಮನೆತನಗಳ ಹೆಸರುಗಳಾಗಿಯೂ

ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ, ಚೇರಂಡ–ಚೇರ ರಾಜಮನೆತನ, ಪಾಂಡಿರ–ಪಾಂಡ್ಯ ಮನೆತನ, ಕೊಂಗಂಡ–ಕೊಂಗಾಳ್ವರು, ಚಂಜಾಂಡ–ಚೆಂಗಾಳ್ವರುಗಳಲ್ಲಿ ಗುರುತಿಸಬಹುದು. ಹಾಗೆಯೇ ವೃತ್ತಿವಾಚಕ, ಪ್ರವೃತ್ತಿವಾಚಕ, ಪರಿಸರವಾಚಕ, ಪ್ರಾಣಿವಾಚಕ, ಪೌರಾಣಿಕ, ದೈನಿಕ ಮೊದಲಾದ ನೆಲೆಗಳಲ್ಲಿ ತಮ್ಮ ಮನೆತನಗಳನ್ನು ಗುರುತಿಸಿಕೊಂಡು ಕೊಡಗಿನ ನಾಡೊಂದು ರೂಪುಗೊಳ್ಳುವಲ್ಲಿ ವೈಶಿಷ್ಟ್ಯಪೂರ್ಣವಾದ ಒಕ್ಕಪೆದಗಳನ್ನು ಒದಗಿಸಿರುವುದು 'ನುಡಿ'ಯ ಅಧ್ಯಯನದಲ್ಲಿ ಕಂಡುಬಂದ ಫಲಿತಗಳಲ್ಲೊಂದಾಗಿದೆ.

ಕೊಡಗಿನ ನಾಡು ನುಡಿಗಳ ಅಭಿವ್ಯಕ್ತಿ ಮತ್ತು ಸಂಬಂಧಗಳ ಸಂದರ್ಭದಲ್ಲಿ ಇತರ ಮುಖ್ಯವಾದ ಅಂಶಗಳಾದ ಪ್ರತೀ ಊರಿನ ದೇವ ನೆಲೆಗಳ ಆಚರಣೆಗಳು, ವಾರ್ಷಿಕ ಉತ್ಸವಗಳು, ಗುರುಕಾರೋಣರಿಗೆ ಎಡೆ ಇಡುವ ಸಂದರ್ಭಗಳು, ಕಾರೋಣತೆರೆ(ಕೋಲ ಕಟ್ಟುವುದು) ಹುತ್ತರಿ, ಕೈಲುಮೂಹೂರ್ತ ಹಾಗೂ ಕಾವೇರಿ ಸಂಕ್ರಮಣ ಹಬ್ಬಗಳು ಮುಖ್ಯವಾಗುತ್ತದೆ. ಈ ಮೇಲಿನ ಎಲ್ಲ ಅಂಶಗಳೂ ಸಾಂಪ್ರದಾಯಿಕ ಆಚರಣೆಗಳಾಗಿವೆ. ಜಾಗತೀಕರಣದ ಸಂದರ್ಭದಲ್ಲಿ ಈ ಎಲ್ಲ ಆಚರಣೆಗಳು ಹಾಗೂ ಹಬ್ಬಹರಿದಿನಗಳು ಮತ್ತು ಮದುವೆ ಮುಂತಾದ ಸಮಾರಂಭಗಳು ಕೊಡಗರ ಅನನ್ಯತೆಯ ಪ್ರಶ್ನೆಯ ಕಾರಣದಿಂದ ಹೊಸ ರೂಪ ಪಡೆದುಕೊಳ್ಳುತ್ತಿರುವುದು ಗಮನಿಸಬೇಕಾದ ಸಂಗತಿ. ಹಾಗೆಯೇ ಭೂ ಹಿಡುವಳಿಗಳೂ ಕೂಡ ಒಕ್ಕಗಳ, ನಾಡಿನ ಐಕ್ಯತೆಗೆ ಭಾವನಾತ್ಮಕ ಸಂಬಂಧವನ್ನು ಕಲ್ಪಿಸಿಕೊಡುತ್ತಿರುವುದು ಕಾಲದಿಂದ ನಡೆಯುತ್ತಿರುವ ವಿಚಾರವೇ ಆದರೂ ಇತ್ತೀಚೆಗೆ ಮಣ್ಣಿನ ವಾಸನೆ ತೀವ್ರವಾಗಿರುವುದು ಕೂಡ ಮುಖ್ಯ ಅಂಶವಾಗುತ್ತದೆ.

ಇದಲ್ಲದೆ ಇತ್ತೀಚೆಗೆ ಕಂಡು ಬರುತ್ತಿರುವ ಬಹಳ ಮುಖ್ಯವಾದ ಇನ್ನೊಂದು ವಿಚಾರವೆಂದರೆ ಕೊಡಗಿನ ಒಕ್ಕ ಒಕ್ಕಗಳ ನಡುವೆ ನಡೆಯುವ ಹಾಕಿ ಮತ್ತು ಕ್ರಿಕೆಟ್ ಹಬ್ಬಗಳು. ಇವುಗಳು ಕೇವಲ ಕ್ರೀಡೆಗಳಾಗಿ ಉಳಿದಿಲ್ಲ. ಇವುಗಳನ್ನು ಕೊಡಗಿನಲ್ಲಿ ಹಾಕಿ ನಮ್ಮೆ ಮತ್ತು ಕ್ರಿಕೆಟ್ ನಮ್ಮೆ ಎಂದು ಗುರುತಿಸಲಾಗುತ್ತಿದೆ. ನಮ್ಮ ಎಂದರೆ ಹಬ್ಬ ಎಂದರೆ ಕ್ರೀಡೆಗಳು ಕೊಡಗಿನ ಸಂದರ್ಭದಲ್ಲಿ ಜಾಗತೀಕರಣದ ಪ್ರಭಾವದಿಂದ ಹಬ್ಬಗಳಾಗಿ ಕಾಣುತ್ತವೆ. ಕೊಡವ ಸಮುದಾಯರ ೧೯೯೭ರಿಂದ ಈಚೆಗೆ ಪ್ರತೀವರ್ಷ ನೂರಾರು ಒಕ್ಕಗಳು, ಏಪ್ರಿಲ್ ತಿಂಗಳಿನಲ್ಲಿ ನಮ್ಮ ಒಕ್ಕಗಳು ಗೆಲ್ಲಬೇಕೆಂಬ ಪರಸ್ಪರ ಫಲದಿಂದ ಹೋರಾಡುವುದು ಕಾಣಬಹುದು. ಹಾಗೆಯೇ ಕೊಡಗಿನ ಇನ್ನೊಂದು ಪ್ರಬಲ ಸಮುದಯವಾದ ಗೌಡ ಸಮುದಾಯವು ಕ್ರಿಕೆಟ್ ಹಬ್ಬವನ್ನು ಆಯೋಜಿಸುತ್ತಿರುವುದು ಮತ್ತೊಂದು ಬೆಳವಣಿಗೆಯಾಗಿದೆ. ಈ ಎಲ್ಲ ವಿದ್ಯಾಮಾನಗಳ ಮಧ್ಯೆ ಅಲ್ಪ ಸಂಖ್ಯಾತರಾದ ಉಳಿದ ಕೊಡಗು ಭಾಷಿಕ ಮತ್ತು ಮೂಲನಿವಾಸಿ ಒಕ್ಕಗಳು ಇಂತಹ ಹಬ್ಬಗಳಲ್ಲಿ ಜಾತಿಯ ಕಾರಣಕ್ಕಾಗಿ ನೇರವಾಗಿ ಭಾಗವಹಿಸಲಾಗದಿರುವುದು ಕೊಡಗಿನ ಭಾವಕ್ಯತೆಯ ದೃಷ್ಟಿಯಿಂದ ಸಮಂಜಸವಾಗಿ ಕಾಣುತ್ತಿಲ್ಲ.

ಶತಮಾನಗಳಿಂದ ಕೊಡಗಿನ ಒಕ್ಕಗಳು ಕೊಡಗಿನ ನಾಡು ಮತ್ತು ನುಡಿಗಳನ್ನು ಕಟ್ಟುವಲ್ಲಿ ಪ್ರಧಾನ ಪಾತ್ರ ವಹಿಸಿದೆ. ಬೇರೆ ಬೇರೆ ಚಾರಿತ್ರಿಕ ಕಾಲಘಟ್ಟಗಳಲ್ಲಿ ಒಕ್ಕಗಳು ಬೇರೆ ಬೇರೆ ರೂಪುಗಳನ್ನು ಪಡೆದುಕೊಂಡು ತೀವ್ರವಾದ ಬದಲಾವಣೆಗಳಿಗೆ, ಒಳಗಾದರೂ ಕೊಡಗಿನ ಸಾಂಸ್ಕೃತಿಕ, ವಿಶೇಷತೆಗಳೂ ಒಕ್ಕ, ನಾಡು ಮತ್ತು ನುಡಿಗಳ ಅನನ್ಯತೆಗಳನ್ನು ಉಳಿಸಿಕೊಳ್ಳುವಲ್ಲಿ ಸಫಲವಾಗಿದೆ ಎಂದರೆ ತಪ್ಪಾಗಲಾರದು.



## ನಕ್ಷೆ-೧ : ಕೊಡಗಿನಲ್ಲಿ ಜಮ್ಮಾ ಮಾಪಿಳ್ಳೆ ಸಮುದಾಯ ನೆಲೆ ನಿಂತ ಸ್ಥಳಗಳು



ನಕ್ಷೆ–೨ : ಬ್ರಿಟಿಷರ ಕಾಲದ ನಾಡುಗಳು




ಕೃಪೆ : ಜಿ. ರಿಕ್ಟರ್

## ನಕ್ಷೆ–೩ : ಬ್ರಿಟಿಷ್ ಆಡಳಿತದಲ್ಲಿ ಕೊಡಗಿನ ಮತ್ತೊಂದು ನಕ್ಷೆ




ಕೃಪೆ : ಜಿ. ರಿಕ್ತರ್



ಮಂಡೇಪಂಡ ಒಕ್ಕದ ಭಾಗವೊಂದರ ಐನ್‌ಮನೆ



ಗೆಜ್ಜೆತಂಡ್



ಕೊಡಗಿನ ಅರಸರ ಕಾಲದ
ದಿವಾನರೊಬ್ಬರ ಭಾವಚಿತ್ರ



ಅಪ್ಪಾರಂಡ ಒಕ್ಕದ ಐನ್‌ಮನೆ



ನಾಲ್ಕುನಾಡು ಅರಮನೆ



ಅರಮನೆ ಕಾವಲುಗಾರ, ಕಾಪಾಳ ಸಮುದಾಯದ ವ್ಯಕ್ತಿ



ಪಾಂಡಂಡ ಒಕ್ಕದ ಒತ್ತೆಪೊರೆ ಐನ್‌ಮನೆ


ಹೊದ್ದೂರು ಚೌರಿರ ಒಕ್ಕದ ಐನ್‌ಮನೆ(ಮುಂದ್‌ಮನೆ)


ಚೆಂಬೆಬೆಳಿಯೂರು ಗ್ರಾಮದ ಮಂಡೇಪಂಡ ಒಕ್ಕದ ಐನ್‌ಮನೆ(ಮುಂದ್‌ಮನೆ)


ಜಮ್ಮ ಮುಸಲ್ಮಾನ ಸಮುದಾಯದ ಮಂದಮಾಡ ಒಕ್ಕದ ಐನ್‌ಮನೆ



ಒಕ್ಕದ ಗುರುಕಾರೋಣರಿಗೆ ಇಟ್ಟ ಎಡೆ(ಮೀದಿನೀರು)



ಒಕ್ಕವೊಂದರ ಕೀರ್ತಿವಂತ ಸದಸ್ಯರ ಭಾವಚಿತ್ರಗಳು ಐನ್‌ಮನೆಯಲ್ಲಿ



ಲಿಂಗಾಯತ ಅರಸರ ಪ್ರಭಾವಕ್ಕೆ ಒಳಗಾದ ಮಂಡೆಪಂಡ ಒಕ್ಕದ ಮೂಲಪುರುಷನ ಗೋರಿ




ಐನ್‌ಮನೆಗೆ ಹೋಗುವ ದಾರಿಯಲ್ಲಿ ಕಲ್ಲೋಣಿಗಳು



ಊರ ಅಂಬಲ(ನ್ಯಾಯ ತೀರ್ಮಾನದ ಕಟ್ಟೆ)



ನಂದಿ ಮುಖದ ಕಲ್ಲುಬೋಟಿ



ಪಂದಿಮಾಡ ಒಕ್ಕದ
ಐನ್‌ಮನೆಯ ಅಂಗಳದ ಒತ್ತಾಗಿರುವ ಮೆಟ್ಟಿಲುಗಳು



ಕೊಡಗಿನ ನಾಡುಮಂದ್



ಚಾಮುಂಡಿ ದೈವದ ನೆಲೆ



ಹಾಳು ಬಿದ್ದ ಕಡಂಗ



ಪಂದಿಮಾಡ ಒಕ್ಕದ
ಐನ್‌ಮನೆಯ ಸುತ್ತಲೂ ಸುಸ್ಥಿತಿಯಲ್ಲಿರುವ ಕಡಂಗ



ಪೂಳಂಡ ಒಕ್ಕದ ಕೈಮಡ



ಪೂರ್ವದಲ್ಲಿ ಒಕ್ಕಗಳು ಬಳಸುತ್ತಿದ್ದ ಸಲಕರಣೆಗಳು



ಸಂಗೀತಗಾರ ಕೆಂಬಟ್ಟಿಯವರು ಬಳುಸುತ್ತಿದ್ದ ಡೋಳು ಮತ್ತು ಕೊಂಬುಗಳು



ಕಾವಾಡಿ ಗ್ರಾಮದ ಭಗವತಿದೇವಿಯ ಉತ್ಸವ



ಪನ್ನಂಗಾಲತಮ್ಮೆ ದೇವಿಯ ಉತ್ಸವ ಮೂರ್ತಿಯ ಮೆರವಣಿಗೆ



ಪನ್ನಂಗಾಲ ದೇವಾಲಯದ ತಕ್ಕ ಮುಖ್ಯಸ್ಥರು



ಪನ್ನಂಗಾಲತಮ್ಮೆ ಉತ್ಸವದಲ್ಲಿ ಕೆಂಬಟ್ಟಿ ಸಮುದಾಯದ ಸದಸ್ಯರು



ಪನ್ನಂಗಾಲತಮ್ಮೆ ದೇವಿಯ ಕೊಡೆ



ಕೊಡಗಿನ ಕೋಲಂದರೆ(ಭೂತಾರಾಧನೆ)

